# ಟಿ.ಎಸ್. ಮಹದೇವಯ್ಯನವರ ಬದುಕು ಬರಹ
# - ಒಂದು ಅಧ್ಯಯನ

ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನದ ಮುಖಾಂತರ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಪಿಎಚ್.ಡಿ. ಅಧ್ಯಯನಕ್ಕಾಗಿ ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು
ಶ್ರೀಮತಿ ಸಿ.ಎಂ. ಶಾಂತಕುಮಾರಿ



ಮಾರ್ಗದರ್ಶಕರು
ಪ್ರೊ. ಎನ್. ಬಸವಾರಾಧ್ಯ,
ಮಾಜಿ ಅಧ್ಯಕ್ಷರು,
ಕನ್ನಡ ಸಾಹಿತ್ಯ ಪರಿಷತ್ತು,
ಬೆಂಗಳೂರು





ಕನ್ನಡ ಸಾಹಿತ್ಯ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩೨೭೬
೨೦೦೮

# ದೃಢೀಕರಣ ಪತ್ರ

ಬೆಂಗಳೂರಿನ ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ, ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೮ನೆಯ ಸಾಲಿನ ಪಿಎಚ್.ಡಿ. ಪದವಿಗಾಗಿ "ಟಿ.ಎನ್.ಮಹದೇವಯ್ಯನವರ ಬದುಕು-ಬರಹ-ಒಂದು ಅಧ್ಯಯನ" ಮಹಾಪ್ರಬಂಧವನ್ನು ಶ್ರೀಮತಿ ಸಿ.ಎಂ. ಶಾಂತಕುಮಾರಿ ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಾದರಪಡಿಸಿಲ್ಲವೆಂದು ದೃಢೀಕರಿಸುತ್ತೇನೆ.

ಎನ್. ಬಸವಾರಾಧ್ಯ

ಪ್ರೊ. ಎನ್. ಬಸವಾರಾಧ್ಯ

ದಿನಾಂಕ : ೨೬-೦೪-೨೦೦೮

ಸ್ಥಳ : ಬೆಂಗಳೂರು

# ದೃಢೀಕರಣ ಪತ್ರ

ಬೆಂಗಳೂರಿನ ಬಿ.ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ, ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೮ನೆಯ ಸಾಲಿನ ಪಿಎಚ್.ಡಿ. ಪದವಿಗಾಗಿ "ಟಿ.ಎನ್.ಮಹದೇವಯ್ಯನವರ ಬದುಕು-ಬರಹ-ಒಂದು ಅಧ್ಯಯನ" ಮಹಾಪ್ರಬಂಧವನ್ನು ಶ್ರೀಮತಿ ಸಿ.ಎಂ. ಶಾಂತಕುಮಾರಿ ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಾದರಪಡಿಸಿಲ್ಲವೆಂದು ದೃಢೀಕರಿಸುತ್ತೇನೆ.

ಪ್ರೊ. ಎನ್. ಬಸವಾರಾಧ್ಯ

ದಿನಾಂಕ : ೨೬-೦೪-೨೦೦೮

ಸ್ಥಳ : ಬೆಂಗಳೂರು

# ಪ್ರಮಾಣಪತ್ರ

ಬೆಂಗಳೂರಿನ ಬಿ.ಎಂ.ಶ್ರೀ ಸ್ಮಾರಕ ಪ್ರತಿಷ್ಠಾನ, ಎಂ.ವಿ.ಸೀ. ಸ್ನಾತಕೋತ್ತರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ೨೦೦೮ನೇ ಸಾಲಿನ ಪಿಎಚ್.ಡಿ. ಪದವಿಗಾಗಿ "ಟಿ.ಎನ್. ಮಹದೇವಯ್ಯನವರ ಬದುಕು-ಬರಹ-ಒಂದು ಅಧ್ಯಯನ" ಎನ್ನುವ ಮಹಾಪ್ರಬಂಧವನ್ನು ಪ್ರೊ. ಎನ್. ಬಸವಾರಾಧ್ಯ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ ಸಾದರಪಡಿಸುತ್ತಿದ್ದೇನೆ. ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸಿ. ಎಂ. ಶಾಂತಕುಮಾರಿ.

ದಿನಾಂಕ : ೨೬-೦೪-೨೦೦೮

ಸಿ. ಎಂ. ಶಾಂತಕುಮಾರಿ

ಸ್ಥಳ : ಬೆಂಗಳೂರು

# ಕೃತಜ್ಞತೆಗಳು

ಯೋಗಾಯೋಗವೋ ಎನ್ನುವಂತೆ ನನ್ನ ಬದುಕಿನಲ್ಲಿ ಅನೇಕ ಆಕಸ್ಮಿಕ ತಿರುವುಗಳು ಕಾಣಿಸಿಕೊಂಡಿವೆ, ನನಗೆ ಒಳಿತನ್ನುಂಟುಮಾಡಿವೆ. ಅಂತಹ ಅದೃಷ್ಟದ ಕ್ಷಣಗಳಲ್ಲಿ ನನ್ನ ಈ ಪಿಎಚ್.ಡಿ., ಸಂಶೋಧನೆಯೂ ಒಂದು ಎಂದು ನಾನು ಬಲವಾಗಿ ನಂಬಿರುವೆ. ನಾನು ಅಧ್ಯಾಪಕಿಯಾಗಿ ನನ್ನ ಪ್ರವಚನಗಳಲ್ಲಿ ಮಗ್ನಳಾಗಿದ್ದರೂ ಯಾವುದೋ ಒಂದು ಅವ್ಯಕ್ತ ಕೊರತೆ ನನ್ನನ್ನು ಸದಾ ಕಾಡುತ್ತಿದ್ದಿತು. ಬೇರೆಯವರ ಹಾಗೆ ನಾನೂ ಏನಾದರೂ ಮಹತ್ವದ ಕೆಲಸ ಮಾಡಬೇಕೆಂದು ಮನಸ್ಸು ತುಡಿಯುತ್ತಿತ್ತು. ನನ್ನನ್ನು ಸಂಶೋಧನೆಯ ಕಡೆಗೆ ಹೊರಳಿಸಿದವರು ಪ್ರೊ. ಎನ್. ಬಸವಾರಾಧ್ಯರವರು. ಹಂಪಿ ವಿಶ್ವವಿದ್ಯಾಲಯವು ಪಿಎಚ್.ಡಿ.ಗೆ ಸಂಬಂಧಿಸಿದಂತೆ ಬಿ.ಎಂ.ಶ್ರೀ. ಪ್ರತಿಷ್ಠಾನದ ಸ್ನಾತಕೋತ್ತರ ಸಂಶೋಧನ ಕೇಂದ್ರವನ್ನು ತನ್ನ ವ್ಯಾಪ್ತಿಗೆ ನೋಂದಾಯಿಸಿಕೊಂಡಾಗ ಆ ಸಂಸ್ಥೆ ಪಿಎಚ್.ಡಿ. ಮಾಡಬಯಸುವ ಅಭ್ಯರ್ಥಿಗಳನ್ನು ಆಯ್ಕೆಮಾಡಲು ಅರ್ಜಿ ಕರೆಯಿತು. ನಾನು ಕುತೂಹಲದಿಂದ ಬಿ.ಎಂ.ಶ್ರೀ. ಪ್ರತಿಷ್ಠಾನದ ಡಾ. ನಂ. ಗೀತಾಚಾರ್ಯ ಅವರನ್ನು ಸಂಪರ್ಕಿಸಿದೆ. ಅವರು ಪ್ರೊ.ಎನ್. ಬಸವಾರಾಧ್ಯರ ಬಳಿಗೆ ನನ್ನನ್ನು ಕಳುಹಿಸಿಕೊಟ್ಟರು. ನಾನು ಅಳುಕಿನಿಂದಲೇ ಅವರ ಬಳಿ ಹೋಗಿ ಸಂಶೋಧನೆಗೆ ಮಾರ್ಗದರ್ಶಕರಾಗಬೇಕೆಂದು ವಿನಂತಿಸಿಕೊಂಡೆ. ಅವರು ನನ್ನ ಎಲ್ಲ ವಿವರಗಳನ್ನು ಪಡೆದುಕೊಂಡು 'ಯೋಚಿಸಿ ಹೇಳುತ್ತೇನೆ, ನಾಳೆ ಬೆಳಿಗ್ಗೆ ಬನ್ನಿ' ಎಂದರು. ಮರುದಿನ ನಾನು ನಿಶ್ಚಿತ ಸಮಯಕ್ಕೆ ಹೋದೆ. ನನ್ನ ಭಾಗ್ಯವೋ ಎನ್ನುವಂತೆ ಅವರು ಒಂದು ಸಂಶೋಧನ ವಿಷಯವನ್ನು ನನ್ನ ಮುಂದಿಟ್ಟು, ಇದರ ಬಗೆಗೆ ನಿಮ್ಮಿಂದ ಸಂಶೋಧನೆ ನಡೆಸಲು ಸಾಧ್ಯವೆ? ಎಂದು ಕೇಳಿದರು. ನಾನು ಕೂಡಲೇ ಒಪ್ಪಿದೆ. ಅವರು 'ಟಿ.ಎನ್.ಮಹದೇವಯ್ಯನವರ ಬದುಕು ಬರೆಹ-ಒಂದು ಅಧ್ಯಯನ' ಎಂಬ ವಿಷಯವನ್ನು ಸೂಚಿಸಿ, ಒಂದಿಷ್ಟು ಪುಸ್ತಕಗಳನ್ನು ಓದಲು ನನಗೆ ಕೊಟ್ಟು ಒಂದು ವಾರದ ನಂತರ ಬಂದು ನನ್ನನ್ನು ನೋಡಿ ಎಂದರು. ನಾನು ಅವರು ಕೊಟ್ಟ ಪುಸ್ತಕಗಳನ್ನು ಓದಿಕೊಂಡು ಅವರನ್ನು ಕಾಣಲು ಹೋದೆ. ಅವರು ಆ ವೇಳೆಗಾಗಲೇ ಮಹಾಪ್ರಬಂಧದ ರೂಪರೇಷೆ ಸಿದ್ಧಪಡಿಸಿದ್ದರು. ಅದನ್ನು ನನಗೆ ಕೊಟ್ಟು ಟಿ.ಎನ್. ಮಹದೇವಯ್ಯನವರ ಧರ್ಮಪತ್ನಿ ಶ್ರೀಮತಿ ಸುಶೀಲಮ್ಮನವರನ್ನು ಹಾಗೂ ಅವರ ಮಗಳು ಶ್ರೀಮತಿ ಟಿ.ಎಂ. ಅಮೃತಕುಮಾರಿ ಅವರನ್ನು ಭೇಟಿಮಾಡಲು ನನಗೆ ಸೂಚಿಸಿದರು. ಅವರನ್ನು ಭೇಟಿಮಾಡಿದಾಗ ನನಗೆ ನಿರಾಳವಾಯಿತು.

ನನ್ನನ್ನು ತಮ್ಮ ಮಗಳಂತೆ ಕಂಡು ನನಗೆ ಬೇಕಾದ ಎಲ್ಲ ಮಾಹಿತಿಗಳನ್ನು, ಅಗತ್ಯವಿದ್ದ ಪುಸ್ತಕಗಳನ್ನು ಕೊಟ್ಟರು. ಗುರುತು ಪರಿಚಯವಿಲ್ಲದ ಅವರ ಅವ್ಯಾಜಪ್ರೀತಿ ಕಂಡು ನನ್ನ ಮನಸ್ಸು ಮೂಕವಾಯಿತು. ಯಾವ ಪುಣ್ಯವೊ ಏನೋ ನನ್ನನ್ನು ಸರಿಯಾದ ಕಡೆಗೆ ದೈವ ತಂದು ಮುಟ್ಟಿಸಿತ್ತು.

ಪ್ರೊ. ಎನ್. ಬಸವಾರಾಧ್ಯರು ನನಗೆ ಮಾರ್ಗದರ್ಶಕರಾಗಿ ದೊರೆತದ್ದು ನನ್ನ ಪುಣ್ಯ. ಅವರದು ಶಿಸ್ತಿನ ಬದುಕು; ತಂದೆಯ ವಾತ್ಸಲ್ಯ. ನಾನು ಸಂಶೋಧನಕ್ಷೇತ್ರಕ್ಕೆ ಹೊಸಬಳಾದರೂ ನನ್ನನ್ನು ತಿದ್ದಿದರು, ಯೋಗ್ಯ ಮಾರ್ಗದರ್ಶನ ಮಾಡಿದರು. ನಾನು ಅವರಲ್ಲಿಗೆ ಹೋದಾಗಲೆಲ್ಲಾ ಹೊಸ ಪುಸ್ತಕಗಳನ್ನು ಓದಲು ಕೊಡುತ್ತಿದ್ದರು, ಬರೆಯುವ ಕ್ರಮವನ್ನು ಕಲಿಸಿಕೊಟ್ಟರು. ನಾನು ಬರೆದುಕೊಂಡು ಹೋದಂತೆ ಮಹಾಪ್ರಬಂಧದ ಅಧ್ಯಾಯಗಳನ್ನು ಆಮೂಲಾಗ್ರವಾಗಿ ಓದಿ, ಸೂಕ್ತ ತಿದ್ದುಪಡಿಗಳನ್ನು ಮಾಡಿಕೊಡುತ್ತಿದ್ದರು. ಅವರ ನಿರಂತರ ಪ್ರೋತ್ಸಾಹವಿಲ್ಲದಿದ್ದರೆ ನನ್ನಿಂದ ಈ ಮಹಾಪ್ರಬಂಧ ಪೂರ್ಣಗೊಳಿಸಲು ಸಾಧ್ಯವಾಗುತ್ತಿರಲಿಲ್ಲ.

ಬಿ.ಎಂ.ಶ್ರೀ ಪ್ರತಿಷ್ಠಾನದ ಪ್ರೊ. ನಾ. ಗೀತಾಚಾರ್ಯ ನನಗೆ ಬೇಕಾದ ಪುಸ್ತಕಗಳನ್ನು ಅಲ್ಲಿನ ಗ್ರಂಥಾಲಯದಿಂದ ಒದಗಿಸಿಕೊಡುತ್ತಿದ್ದರು. ಆಗಾಗ್ಗೆ ನನ್ನ ಸಂಶೋಧನೆಯ ಪ್ರಗತಿಯ ಬಗೆಗೆ ಅಕ್ಕರೆಯಿಂದ ವಿಚಾರಿಸಿಕೊಳ್ಳುತ್ತಿದ್ದರು. ಅವರ ಉಪಕಾರವನ್ನು ನಾನು ಕೃತಜ್ಞತೆಯಿಂದ ಸ್ಮರಿಸುತ್ತೇನೆ.

ನನ್ನ ಸಂಶೋಧನ ಪ್ರಬಂಧವನ್ನು ಆಮೂಲಾಗ್ರವಾಗಿ ಓದಿ ಸಲಹೆ-ಸೂಚನೆ ನೀಡಿದ ಗುರುಗಳೆಂದರೆ ಖ್ಯಾತ ವಿದ್ವಾಂಸರಾದ ಡಾ.ಎಸ್. ವಿದ್ಯಾಶಂಕರ ಅವರು. ನನಗೆ ಅವರ ಪರಿಚಯವಾದದ್ದು ನನ್ನ ಮಾರ್ಗದರ್ಶಕರಾದ ಪ್ರೊ. ಎನ್. ಬಸವಾರಾಧ್ಯ ಅವರಿಂದ. ನನಗೆ ಅಗತ್ಯ ಮಾಹಿತಿಗಳನ್ನು ನೀಡಿದ್ದಲ್ಲದೆ ನನ್ನ ಮಹಾಪ್ರಬಂಧವನ್ನು ಓದಿ ಸಲಹೆ-ಸೂಚನೆ ನೀಡಿ ಉಪಕರಿಸಿರುವರು. ಅವರಿಗೆ ನನ್ನ ಹೃತ್ಪೂರ್ವಕ ಧನ್ಯವಾದಗಳು.

ನನ್ನನ್ನು ಸಂಶೋಧನೆಗೆ ತೊಡಗಿಸಿದವರು ನನ್ನ ಪತಿ ಶ್ರೀ ಕೆ.ಎಸ್. ಆನಂದ್‌ರವರು. ಅವರಿಗೆ ಸಂಶೋಧನೆಯ ನಿಜವಾದ ಬೆಲೆ ಗೊತ್ತಿರುವುದರಿಂದ ನನ್ನನ್ನು ಅದರಲ್ಲಿ ತೀವ್ರವಾಗಿ ತೊಡಗಿಸಿಕೊಳ್ಳಲು ಉತ್ತೇಜಿಸಿದರು; ನನ್ನ ಬರವಣಿಗೆಯ ಸಂದರ್ಭದಲ್ಲಿ ಪೂರ್ಣ ಒತ್ತಾಸೆಯಾಗಿ ನಿಂತು- ನನಗೆ ಪೂರ್ಣವಾಗಿ ಸಹಕರಿಸಿದ್ದರು. ಅವರ ನೆರವಿಲ್ಲದಿದ್ದರೆ ನಾನು ಮಹಾಪ್ರಬಂಧ ಸಿದ್ಧಪಡಿಸಲು ಸಾಧ್ಯವಾಗುತ್ತಿರಲಿಲ್ಲ. ಅವರಿಗೆ ನನ್ನ ಗೌರವಪೂರ್ವಕ ಪ್ರಣಾಮಗಳು.

ನನ್ನ ಶ್ರೇಯಸ್ಸನ್ನು ಬಯಸಿ ನನ್ನ ಸತ್ಕಾರ್ಯಗಳನ್ನೆಲ್ಲ ಪ್ರೋತ್ಸಾಹಿಸಿ, ನನ್ನ ಪ್ರಗತಿಗೆ ಕಾರಣರಾಗಿರುವ ಪೂಜ್ಯನೀಯ ಅಜ್ಜಿ-ತಾತಂದಿರಾದ ಶ್ರೀಮತಿ-ಶ್ರೀ ಪಾರ್ವತಮ್ಮ ಸಿದ್ದಪ್ಪರವರಿಗೂ ಗೌರವಪೂರ್ವಕ ಪ್ರಣಾಮಗಳು.

ಸದಾ ನನ್ನ ಶ್ರೇಯಸ್ಸನ್ನು ಬಯಸುವ ನನ್ನ ಹಿತೈಷಿಗಳಿಗೆ, ಸ್ನೇಹಿತರುಗಳಿಗೆ, ಕುಟುಂಬದವರಿಗೆ ಕೃತಜ್ಞತೆಗಳು.

ನನ್ನ ಮಹಾಪ್ರಬಂಧದ ಅಕ್ಷರ ಜೋಡಣೆಯ ಮಹತ್ವದ ಕಾರ್ಯ ನಡೆಸಿಕೊಟ್ಟವರು ವರ್ಷಿಣಿ ಗ್ರಾಫಿಕ್ಸ್‌ನ ಶ್ರೀಮತಿ ಪ್ರಿಯದರ್ಶಿನಿ ಹಾಗೂ ಅವರ ಸಿಬ್ಬಂದಿ ವರ್ಗದವರು. ಅವರಿಗೂ ನನ್ನ ಪ್ರೀತಿಯ ವಂದನೆಗಳು.

– ಸಿ.ಎಂ. ಶಾಂತಕುಮಾರಿ

# ಪರಿವಿಡಿ

೧

# ಉದ್ದೇಶ ಮತ್ತು ವ್ಯಾಪ್ತಿ

ಕನ್ನಡ ನವೋದಯಕಾಲದ ಸಾಹಿತ್ಯದಲ್ಲಿ ಮಹತ್ವದ ಸೇವೆಸಲ್ಲಿಸಿರುವ ಗಣನೀಯ ವ್ಯಕ್ತಿಗಳಲ್ಲಿ ಶ್ರೀ. ಟಿ. ಎನ್. ಮಹದೇವಯ್ಯನವರೂ ಒಬ್ಬರು. ಇವರು ಕವಿಯಾಗಿ, ನಾಟಕಕಾರರಾಗಿ, ಕತೆ-ಕಾದಂಬರಿಕಾರರಾಗಿ, ವಿಮರ್ಶಕ, ವಚನಕಾರರಾಗಿ, ಗಾಯಕರಾಗಿ, ವೀಣಾವಾದಕರಾಗಿ, ಚಿರಸ್ಮರಣೀಯರಾಗಿದ್ದಾರೆ. ಹಲವು ಪ್ರಕಾರಗಳಲ್ಲಿ ಮಹತ್ವದ ಕಾಣಿಕೆ ಸಲ್ಲಿಸಿರುವ ಇವರು ಪ್ರಕಟಣೆ-ಪ್ರಚಾರ ಕೀರ್ತಿಗಳಿಗೆ ಹಾತೊರೆಯದೆ, ತಮ್ಮ ಬರಹಗಳ ಶ್ರೀಮಂತಿಕೆಯನ್ನು ಲೋಕ ಕಾಣುವಂತೆ ಮಾಡಲಿಲ್ಲ. ಹೀಗಾಗಿ ಎಲೆಯ ಮರೆಯ ಬದುಕು ಇವರದಾಯಿತು. ತಮ್ಮ ಸಾಹಿತ್ಯಕ ಮಟ್ಟ ಉನ್ನತವಿದ್ದರೂ ಅಗ್ರಮಾನ್ಯ ಸಾಹಿತಿಗಳ ಸಾಲಿನಲ್ಲಿ ಇವರು ವಿಜೃಂಭಿಸಲಿಲ್ಲ. ಅವರ ಎಲ್ಲ ಬರಹಗಳೂ ಬದುಕಿದ್ದಾಗಲೇ ಬೆಳಕು ಕಾಣಲಿಲ್ಲ. ಬಹುತೇಕ ಕೃತಿಗಳು ಮರಣಾನಂತರ ಪ್ರಕಟವಾದುವು. ಹೀಗಾಗಿ ಅವರು ಪ್ರತಿಭಾಶಾಲಿಗಳಾಗಿದ್ದರೂ ಸಾಹಿತ್ಯಲೋಕ ಅವರನ್ನು ಗುರುತಿಸಲಿಲ್ಲ.

ಟಿ. ಎನ್. ಮಹದೇವಯ್ಯ ನವೋದಯ ಕಾಲದ ಪ್ರತಿಭಾವಂತ ಕವಿಗಳು. ಬಿ. ಎಂ. ಶ್ರೀ. ಎ. ಆರ್. ಕೃ. ಕುವೆಂಪು ಇವರೇ ಮೊದಲಾದ ಪ್ರಾತಃಸ್ಮರಣೀಯರ ಪ್ರೇರಣೆ ಪ್ರೋತ್ಸಾಹ, ಗುರು ರವೀದ್ರರ ಹಾಗೂ ಪಾಶ್ಚಾತ್ಯ ಕವಿಗಳ ಪ್ರಭಾವ ಇವುಗಳಿಂದ ಕಾವ್ಯಕನ್ನಿಕೆಗೆ ಒಲಿದ ಟಿ.ಎನ್. ಮಹದೇವಯ್ಯನವರು ನಂದಕಿಶೋರ, ವಸಂತಕುಮಾರ ಎಂಬ ಕಾವ್ಯನಾಮಗಳಿಂದ ಕಾವ್ಯರಚನೆಗೆ ತೊಡಗಿದರು. ಇವರು ವೃತ್ತಿಯಲ್ಲಿ ತಹಸೀಲ್ದಾರರು, ಪ್ರವೃತ್ತಿಯಲ್ಲಿ ಕವಿಗಳು. ಸಾಮಾನ್ಯವಾಗಿ ರೆವಿನ್ಯೂ ಇಲಾಖೆಯಲ್ಲಿದ್ದು ಸಾಹಿತ್ಯರಚನೆಗೆ ತೊಡಗಿ, ಅದರ ಸೇವೆಮಾಡುವುದು ಅಪರೂಪ. ಮಾಸ್ತಿ, ಸಿದ್ಧಯ್ಯಪುರಾಣಿಕ ಈ ಅಪರೂಪದ ಹೆಸರುಗಳೊಂದಿಗೆ ಟಿ. ಎನ್. ಮಹದೇವಯ್ಯನವರ ಹೆಸರು ಸೇರುತ್ತದೆ. ಟಿ. ಎನ್. ಮಹದೇವಯ್ಯ ಅವರದು ಬಹುಮುಖವಾದ ಪ್ರತಿಭೆ. ಸಾಹಿತ್ಯಾಭಿಮಾನಿಯಾಗಿ, ಸಾರಸ್ವತ ತಪಸ್ವಿಯಾಗಿ, ಸಾಹಿತ್ಯ

ಪ್ರಚಾರಕನಾಗಿ, ಶ್ರೇಷ್ಠ ಕವಿ-ವಿಮರ್ಶಕ-ನಾಟಕಕಾರರಾಗಿ, ಚತುರ ವಾಗ್ಮಿಯಾಗಿ ಇವರು ಸಲ್ಲಿಸಿದ ನುಡಿಸೇವೆ ಅಪಾರ.

ಟಿ. ಎನ್. ಮಹದೇವಯ್ಯನವರು ನಿಸ್ಸಂಶಯವಾಗಿ ಪ್ರಥಮ ದರ್ಜೆಯ ಕವಿಗಳು. ಕುವೆಂಪು, ಬೇಂದ್ರೆ, ಪು.ತಿ.ನರಸಿಂಹಾಚಾರ್., ವಿ. ಸೀತಾರಾಮಯ್ಯ ಇವರುಗಳೇ ಮೊದಲಾದವರು ಕಾವ್ಯರಚನೆಗೆ ತೊಡಗಿ ಪ್ರಸಿದ್ಧಿಯ ಶಿಖರವನ್ನು ಮುಟ್ಟಿದ ಕಾಲಮಾನದಲ್ಲಿಯೇ ಟಿ. ಎನ್. ಮಹದೇವಯ್ಯನವರು ಸಹಾ ಕಾವ್ಯರಚನೆಗೆ ತೊಡಗಿದರು. ನಾಡಿನ ಬಹುತೇಕ ಪತ್ರಿಕೆಗಳಲ್ಲಿ ಇವರ ಕವಿತೆಗಳು ಪ್ರಕಟಣೆಗೊಂಡು ಪ್ರಸಿದ್ಧಿಯನ್ನು ಪಡೆದವು, ಆದರೂ ಇವರಿಗೆ ಲಭ್ಯವಾಗಬೇಕಾಗಿದ್ದ ಸ್ಥಾನ-ಮಾನಗಳು ಕಾವ್ಯಲೋಕದಲ್ಲಿ ದೊರಕದಿದ್ದುದು ದೌರ್ಭಾಗ್ಯವೇ ಸರಿ. ಆಗಿನ ಪ್ರಸಿದ್ಧ ಕವಿಗಳಂತೆ ಇವರು ತಮ್ಮ ಕಾವ್ಯವನ್ನು, ಸಂಕಲನಗಳ ರೂಪದಲ್ಲಿ ಹೊರತಂದಿದ್ದರೆ ಪ್ರಸಿದ್ಧಿಯ ಶಿಖರ ಮುಟ್ಟುತ್ತಿದ್ದರೋ ಏನೋ! ಹತಭಾಗ್ಯರಾದ ಇವರು ಚಿಕ್ಕವಯಸ್ಸಿನಲ್ಲಿಯೇ ಇಹಲೋಕ ತ್ಯಜಿಸಿದರು. ಇವರು ಕಾವ್ಯಲೋಕದಲ್ಲಿ ಬೆಳಕಿಗೆ ಬರದಿರಲು ಇದೂ ಒಂದು ಮುಖ್ಯಕಾರಣ. ಸಾರಸ್ವತ ಪ್ರಪಂಚಕ್ಕೆ ಇವರ ಸೃಜನಶೀಲ ಕಾವ್ಯಪ್ರತಿಭೆಯನ್ನು ಪರಿಚಯಿಸುವ ಹಾಗೂ ಅವರ ಬರಹಗಳೆನ್ನೆಲ್ಲ ಒಂದೆಡೆ ಪರಿಚಯಿಸುವ ಉದ್ದೇಶದಿಂದ ಅವರ ಬದುಕು-ಬರಹ ಕುರಿತು ಈವರೆಗೆ ಯಾವ ಅಧ್ಯಯನವೂ ಸಮಗ್ರವಾಗಿ ನಡೆಯದಿರದ ಕಾರಣ ಟಿ. ಎನ್. ಮಹದೇವಯ್ಯನವರ ಸಾಹಿತ್ಯ ಹಾಗೂ ಸಾಹಿತ್ಯಕ ಕೊಡುಗೆಯ ಮೌಲ್ಯಮಾಪನ ಮಾಡುವ ಅಗತ್ಯವಿದೆ.

■■

೨

# ಟಿ. ಎನ್. ಮಹದೇವಯ್ಯನವರ ಬದುಕು

ಏನಾದಡೆಯೂ ಸಾಧಿಸಬಹುದು
ಮತ್ತೇನನಾದಡೆಯೂ ಸಾಧಿಸಬಹುದಯ್ಯ
ತಾನಾರೆಂಬುದ ಸಾಧಿಸಬಾರದು
ಕೂಡಲಸಂಗಮದೇವರ ಕರುಣವುಳ್ಳವಂಗಲ್ಲದೆ.

-ಬಸವಣ್ಣ

ಹುಟ್ಟು, ಬದುಕು, ಸಾವು ಪ್ರಕೃತಿಯೊಡಲಿನಲ್ಲಿ ಇರುವ ಎಲ್ಲ ಜೀವರಾಶಿಗಳಿಗೂ ನಿಶ್ಚಿತ. ಹುಟ್ಟಿಗೊಂದು ಕಾರಣ, ಬದುಕಿಗೊಂದು ಅರ್ಥ; ಗುರಿಯ ಸಾಧನೆ; ಸಾವಿನ ಮೊದಲಿಗೆ ಇರಬೇಕಾದ ಅಗತ್ಯಗಳು. ಈ ಗುರಿಯನ್ನು ಆರಿಸಿ, ಆರಿಸಿ, ಬಾಳಿದ ಮಹನೀಯರು ಕೇವಲ ಕೆಲವೇ ಮಂದಿ. ಮಾನವ ದಿವ್ಯತೆಯನ್ನರಿತು ಇಹದಲ್ಲಿ ಅದನ್ನೇ ಮೆರೆದು ಮಹಾದೇವನಾಗುವ ಪುಣ್ಯ ಪೂರ್ವಜನ್ಮದ ಸುಕೃತಫಲವಿದ್ದವರಿಗೆ ಮಾತ್ರ ಸಾಧ್ಯ. ಐಹಿಕ ಸುಖ ಸಂಪತ್ತುಗಳನ್ನು ಲೆಕ್ಕಿಸದೆ ಮಾನವಸಹಜವಾದ ರಾಗದ್ವೇಷಗಳಲ್ಲಿ ಸಿಕ್ಕಿ ಬಳಲಿ ಬಸವಳಿಯದೆ ಸಹಜತೆಯ ಸರಳಜೀವನವನ್ನು ಮನವೊಪ್ಪಿ ಬಾಳಿ ಆಧ್ಯಾತ್ಮಿಕ ಸಾಧನೆಯ ಸೋಪಾನವೇರಿ ಶಿವಶರಣರ ಅನುಭವದ ಮಹಾಬಯಲಿನಲ್ಲಿ ಬಯಲಾಗುವುದು ಬದುಕಿನ ದಿವ್ಯ ಸಾಫಲ್ಯ. ದಿ. ಟಿ. ಎನ್. ಮಹದೇವಯ್ಯನವರು ಈ ಪಂಕ್ತಿಯಲ್ಲಿ ಸೇರತಕ್ಕವರು.

ಶ್ರೀಯುತ ಟಿ. ಎನ್. ಮಹದೇವಯ್ಯನವರು ತುಮಕೂರಿನ (ಸರ್ಕಾರಿ ದಾಖಲೆಗಳ ಪ್ರಕಾರ) ಶ್ರೀಮಾನ್ ನಾಗಪ್ಪ ಮತ್ತು ಅಡವಮ್ಮನವರ ಹಿರಿಯಪುತ್ರರು. ಇವರ ತಂದೆಯವರಾದ ನಾಗಪ್ಪನವರು ಹತ್ತಾರು ವರುಷಗಳ ಕಾಲ, ತಿಪಟೂರಿನ ದೊಡ್ಡಪೇಟೆಯಲ್ಲಿ ಚಿಲ್ಲರೆ ಅಂಗಡಿ ವ್ಯಾಪಾರಿಗಳಾಗಿದ್ದುಕೊಂಡು ಜೀವನ ಸಾಗಿಸುತ್ತಿದ್ದರು.

ದೊಡ್ಡ ಕುಟುಂಬ, ಮನೆತುಂಬ ಮಕ್ಕಳು. ನಾಗಪ್ಪನವರು ಬಡತನದಿಂದ ಜೀವನ ಸಾಗಿಸುತ್ತಿದ್ದರೂ ಮಕ್ಕಳ ವಿದ್ಯಾಭ್ಯಾಸದ ಕಡೆಗೆ ಸಾಕಷ್ಟು ಗಮನಕೊಡುತ್ತಿದ್ದರು. ಓದಿನಲ್ಲಿ ಮಹದೇವಯ್ಯನವರು ಮೊದಲಿನಿಂದಲೂ ಬಹಳ ಆಸಕ್ತಿಯನ್ನು ಹೊಂದಿದ್ದು, ಉಪಾಧ್ಯಾಯರ ಒಲವು ಗಳಿಸಿದ್ದರು. ಉಪಾಧ್ಯಾಯರ ನಿರಂತರ ಪ್ರೋತ್ಸಾಹ ಇವರ ಓದುವ ಉತ್ಸಾಹಕ್ಕೆ ಇಂಬುಗೊಟ್ಟಿತು. ಕಾವ್ಯರಚನೆ ಈ ವೇಳೆಗಾಗಲೆ ಇವರಿಗೆ ಸಹಜವಾಗಿಯೇ ಒಲಿದಿತ್ತು. ಪ್ರೌಢಶಾಲೆಗೆ ಬರುವ ಹೊತ್ತಿಗೆ ವೃತ್ತ, ಕಂದ, ಷಟ್ಪದಿಯಲ್ಲಿ ಛಂದೋಬದ್ಧವಾಗಿ ಪದ್ಯಗಳನ್ನು ಬರೆದಿದ್ದರು, ಪ್ರಬಂಧಗಳನ್ನು ಬರೆದರು.

ಮಹದೇವಯ್ಯನವರೇ ಒಂದು ಕಡೆ, ತಾವಿನ್ನು ತಿಪಟೂರಿನಲ್ಲಿ ಓದುತ್ತಿದ್ದ ದಿನಗಳಲ್ಲೆ ಕಾವ್ಯ ರಚನೆಗೆ ತೊಡಗಿದ ಮೊದಲ ದಿನದ ಅನುಭವವನ್ನು ತಿಳಿಸುತ್ತಾ ಅಂದು ಆಟದಂತೆ ಆರಂಭವಾದ ಅವರ ಸಾಹಿತ್ಯ ಸೃಷ್ಟಿಕಾರ್ಯ ಜೀವನದ ಕೊನೆಯವರೆಗೂ ಅವ್ಯಾಹತವಾಗಿ ನಡೆಯಿತು. ಮಹದೇವಯ್ಯನವರ ಸೋದರರಾದ ಸದಾಶಿವಯ್ಯನವರು 'ಗುಪ್ತಗಂಗಾ'ಸ್ಮರಣ ಸಂಪುಟದಲ್ಲಿ ಹೀಗೆ ಬರೆದಿದ್ದಾರೆ- "ನಮ್ಮ ತಂದೆ ಮತ್ತು ತಾತಂದಿರು ಕೇವಲ ಅಕ್ಷರಜ್ಞಾನಿಗಳಾಗಿದ್ದರೇ ಹೊರತು ಯಾವ ಪಾಂಡಿತ್ಯವನ್ನು ಪಡೆದಿರಲಿಲ್ಲ, ಮನೆಯ ಪರಿಸರ ಸಾಹಿತ್ಯಾಭ್ಯಾಸಕ್ಕೆ ಕಾವ್ಯೋಪಾಸನೆಗೆ ಪ್ರೇರಕವಾಗಿರಲಿಲ್ಲ, ಆದರೂ ಸಣ್ಣವಯಸ್ಸಿನಿಂದಲೇ ಕಾವ್ಯಶಕ್ತಿ ಅವರಲ್ಲಿ (ಟಿ. ಎನ್. ಎಂ) ಸುಪ್ತವಾಗಿತ್ತು. ಅದರ ಸೂಚನೆ ಮೊದಲು ಮಿಡ್ಲ್ ಸ್ಕೂಲ್ ಮತ್ತು ಹೈಸ್ಕೂಲ್ ದರ್ಜೆಯಲ್ಲಿ ಓದುತ್ತಿರುವಾಗಲೇ ಆಗಿನ ಕನ್ನಡ ಪಂಡಿತರಿಗೆ ದೊರಕಿತಂತೆ. ಅವರ ಪ್ರೋತ್ಸಾಹದ ಫಲವೇ ಅವರ ಪ್ರತಿಭೆಯ ವಿಕಾಸಕ್ಕೆ ಹೇತುವಾಯಿತು."

ಹೈಸ್ಕೂಲಿನಲ್ಲಿ ಓದುತ್ತಿರುವಾಗ ಅವರಿಗೆ ನಾನಾ ಬಗೆಯ ಉತ್ತೇಜನಗಳನ್ನು ಕೊಟ್ಟು ಪ್ರಾಚೀನ ಗ್ರಂಥಾಭ್ಯಾಸಗಳಲ್ಲಿ ತೊಡಗಿಸಿ ಚಂಪೂ ಮತ್ತು ಷಟ್ಪದಿಯಲ್ಲಿ ಪದ್ಯಗಳನ್ನು ರಚಿಸುವುದರಲ್ಲಿ ಪಳಗಿಸಿ ಕವಿತಾರಚನಾ ಚಾತುರ್ಯವನ್ನು ಸಣ್ಣ ವಯಸ್ಸಿನಲ್ಲಿಯೇ ಬೇರೂರಿಸಿದ ಗುರುಗಳನ್ನು ದೈವಸಮಾನರೆಂದು ಅನನ್ಯಭಕ್ತಿಯಿಂದ ನಮ್ಮ ಸೋದರರು (ಟಿ.ಎನ್. ಮಹದೇವಯ್ಯ) ನೆನಪಿಸಿಕೊಳ್ಳುತ್ತಿದ್ದರು. ಎಸ್. ಎಸ್. ಎಲ್. ಸಿ. ತೇರ್ಗಡೆ ಹೊಂದುವ ವೇಳೆಗೆ ಭಾಮಿನಿ ಷಟ್ಪದಿಯಲ್ಲಿ ಕೆಲವು ಪದ್ಯಗಳನ್ನು ರಚಿಸಿ ಸನಿಹದ ಸಜ್ಜನರ ಮೆಚ್ಚುಗೆ ಗಳಿಸಿದ್ದರು. ಸುಬ್ಬರಾಯರೆಂಬುವರು ಜೀವಶಾಸ್ತ್ರ ಅಧ್ಯಾಪಕರಾಗಿ ನೇಮಕವಾಗಿ ಬಂದು ಶಾಲೆಯಲ್ಲಿ ಕರ್ನಾಟಕ ಸಂಘವನ್ನು ಆರಂಭಿಸಿದರು. ಇದು ಅನೇಕ ವಿದ್ಯಾರ್ಥಿಗಳಲ್ಲಿ ಸಾಹಿತ್ಯ ರಚನೆಗೆ ಆಸಕ್ತಿ ಮೂಡಿಸಿತು. ಶಾಲೆಯ ಕರ್ನಾಟಕ ಸಂಘ ಆರಂಭವಾದುದು ತಮ್ಮ ಲೇಖನಗಳನ್ನು ಸದಸ್ಯರ ಮುಂದೆ ಹಾಗೂ ಅಧ್ಯಾಪಕರ ಮುಂದೆ ಓದಲು ಮಹದೇವಯ್ಯನವರಿಗೆ ಒಂದು ವೇದಿಕೆ ಸಿಕ್ಕಂತಾಯಿತು.[೧]

ವಿರಾಮಸಿಕ್ಕಿದಾಗಲೆಲ್ಲ ಪದ್ಯಗಳನ್ನು ಬರೆಯುವುದು, ಲೇಖನ, ಹಾಡು, ನಾಟಕಗಳನ್ನು ಬರೆಯುವುದರಲ್ಲಿ ತೊಡಗುತ್ತಿದ್ದರು. ಗ್ರೀಕರ ಸಂಸ್ಕೃತಿಗೆ ಸಂಬಂಧಿಸಿದ ಪುರಾಣಕಥೆಗಳಲ್ಲೊಂದಾದ ಪರ್ಸ್ಯೂಸನ ಕಥೆಯನ್ನು ಕನ್ನಡದಲ್ಲಿ ಬರೆದುದಾಗಿಯೂ ಶಿಬಿ, ದಧೀಚಿ, ಕರ್ಣರ ದಾನಶೂರತೆಯನ್ನು ಕುರಿತು ಷಟ್ಪದಿ ಛಂದಸ್ಸಿನಲ್ಲಿ

ನೂರು ಇನ್ನೂರು ಪದ್ಯಗಳನ್ನು ಬರೆದುದಾಗಿಯಾ ಅವರೇ ಒಂದು ಕಡೆ ಬರೆದಿದ್ದಾರೆ. ಹೈಸ್ಕೂಲಿನ ವಿದ್ಯಾರ್ಥಿಯಾಗಿದ್ದಾಗಲೇ ಗ್ರೀಕ್ ಸಾಹಿತ್ಯದ ಅಲ್ಪಸ್ವಲ್ಪ ಪರಿಚಯವನ್ನಾದರೂ ಮಾಡಿಕೊಂಡಿದ್ದರು. ಹೀಗೆ ಮಹದೇವಯ್ಯನವರ ಸಾಹಿತ್ಯಾಸಕ್ತಿ ಹಲವು ಪ್ರಕಾರಗಳಲ್ಲಿ ಹರಿಯಿತು. ಮನೆಯ ಹಿರಿಯ ಮಗನಾಗಿ ತಮ್ಮ ಹೊಣೆಯನ್ನು ಮಹದೇವಯ್ಯನವರು ಚೆನ್ನಾಗಿ ಅರಿತುಕೊಂಡು ನಡೆಯುತ್ತಿದ್ದರು. ತಮ್ಮ ಬಿಡುವಿನ ವೇಳೆಯಲ್ಲಿ ಅಂಗಡಿಯಲ್ಲಿ ತಂದೆಗೆ ನೆರವಾಗುತ್ತಿದ್ದರು, ಮನೆಯಲ್ಲೂ ನೆರವಾಗುತ್ತಿದ್ದರು. ಸ್ವಭಾವತಃ ಮಿತಭಾಷಿಯೂ, ಅಂತರ್ಮುಖಿಯೂ ಆಗಿರುತ್ತಿದ್ದ ಇವರು ಸರಳರೂ, ಸ್ನೇಹಜೀವಿಯೂ ಆಗಿದ್ದರು.

ಮಹದೇವಯ್ಯನವರ ಪ್ರತಿಭೆ ಕೇವಲ ಸಾಹಿತ್ಯ ವ್ಯಾಸಂಗಕ್ಕೆ ಮಾತ್ರ ಸೀಮಿತವಾಗಿರಲಿಲ್ಲ, ಇವರು ಬಹುಮುಖ ಪ್ರತಿಭಾವಂತರು. ಇವರು ಕ್ರೀಡೆಯಲ್ಲಿಯೂ ವಿಶೇಷ ಆಸಕ್ತಿಯನ್ನು ಹೊಂದಿದ್ದರು, ಇವರು ಉತ್ತಮ ಬ್ಯಾಡ್ಮಿಂಟನ್ ಆಟಗಾರರಾಗಿದ್ದರು. ಹೈಸ್ಕೂಲ್ಲಿದ್ದಾಗಲೆ ಭಾಷಣಕಲೆಯಲ್ಲೂ ತಕ್ಕಷ್ಟು ಪರಿಣತಿ ಪಡೆದಿದ್ದರು. ಶಾಲೆಯಲ್ಲಿ ನಡೆಯುತ್ತಿದ್ದ ಸಭೆ ಸಮಾರಂಭಗಳಲ್ಲಿ ಸ್ಫೂರ್ತಿಯುತವಾದ ಭಾಷಣಗಳನ್ನು ಮಾಡುತ್ತಿದ್ದರು. ಅಷ್ಟೇ ಅಲ್ಲದೆ, ಊರಿನ ಸಾರ್ವಜನಿಕ ಸಮಾರಂಭಗಳಲ್ಲೂ ಆಗಾಗ್ಗೆ ಭಾಷಣ ಮಾಡಿ ಜನರ ಮೆಚ್ಚುಗೆ ಗಳಿಸಿದ್ದರು. ಇವೆಲ್ಲದರ ಜೊತೆಗೆ ಸಂಗೀತ, ಚಿತ್ರಕಲೆಯಲ್ಲೂ ಇವರಿಗೆ ಅಭಿರುಚಿಯಿದ್ದಿತು. ಉತ್ತಮವಾದ ಚಿತ್ರಗಳನ್ನು ಸಂಗ್ರಹಿಸುವುದು ಇವರ ಹವ್ಯಾಸವಾಗಿತ್ತು.

ಎಸ್. ಎಸ್. ಎಲ್. ಸಿ. ಪರೀಕ್ಷೆಯ ನಂತರ ರಜಾದಿನಗಳಲ್ಲಿ ಕಾಲಹರಣ ಮಾಡದೆ ಅನೇಕರಿಂದ ಅನೇಕ ಕಡೆಗಳಿಂದ ಅನೇಕ ಮಹಾಪುರುಷರ ಜೀವನ ಚರಿತ್ರೆಗಳನ್ನು ಪಡೆದುಕೊಂಡು ಓದುವುದರ ಮೂಲಕ ಅವರ ಜೀವನ ವಿಧಾನ, ಧ್ಯೇಯಾದರ್ಶಗಳಿಂದ ಪ್ರಭಾವಿತರಾದರು. ಅಷ್ಟೇ ಅಲ್ಲದೆ ಮಹಾಪುರುಷರ ಜೀವನದ ಆಳವಾದ ಅಧ್ಯಯನದಿಂದ ತಮ್ಮ ಜೀವನವಿಧಾನವನ್ನು ರೂಢಿಸಿಕೊಂಡರು. ಆ ಮೂಲಕ ತಮ್ಮ ದೇಶ-ಸಮಾಜಗಳಿಗೆ ತಮ್ಮಿಂದ ಸಾಧ್ಯವಾಗುವ ಸೇವೆ ಸಲ್ಲಿಸಲು ನಿರ್ಧರಿಸಿದರು. ಈ ಆದರ್ಶವನ್ನು ಅವರ ಜೀವನದ ಕೊನೆಯವರೆಗೂ ಪಾಲಿಸಿದರು.

ಎಸ್. ಎಸ್. ಎಲ್. ಸಿ. ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾದ ಟಿ.ಎನ್. ಮಹದೇವಯ್ಯನವರು ಇಂಟರ್‌ಮಿಡಿಯೆಟ್ ಕಾಲೇಜಿನಲ್ಲಿ 'ಲೀಡಿಂಗ್ ಟು ಎಂಜಿನಿಯರಿಂಗ್' ಎಂಬ ವಿಷಯವನ್ನು ಆರಿಸಿಕೊಂಡರೂ ಅವರ ಒಲವೆಲ್ಲಾ ಸಾಹಿತ್ಯದತ್ತಲೇ. ಬೆಂಗಳೂರಿಗೆ ಬಂದು ನಿಂತ ಮೇಲಂತೂ ಅವರ ಅಧ್ಯಯನಕ್ಕೂ ಸಾಹಿತ್ಯರಚನೆಗೂ ನೆರವಾಗುವ ಅನೇಕ ಉತ್ತಮ ಅವಕಾಶಗಳು ದೊರೆತವು. ಕಾಲೇಜಿನಲ್ಲಿ ಬಿ.ಎಂ.ಶ್ರೀ. ವಿ. ಸೀತಾರಾಮ, ಎ.ಆರ್. ಕೃಷ್ಣಶಾಸ್ತ್ರಿ ಮುಂತಾದವರು ಇವರ ಗುರುಗಳಾಗಿದ್ದರು. ಇವರ ಪ್ರೋತ್ಸಾಹ, ಮಾರ್ಗದರ್ಶನಗಳಿಂದ ಮಹದೇವಯ್ಯನವರ ಸಾಹಿತ್ಯ ಚಟುವಟಿಕೆಗಳಿಗೊಂದು ಭದ್ರನೆಲೆ ದೊರಕಿತು. ಅಂದಿನ ಪ್ರಸಿದ್ಧ ಪತ್ರಿಕೆಗಳಾದ ಕನ್ನಡನುಡಿ, ರಂಗಭೂಮಿ, ವಿಶ್ವಭಾರತಿ, ಜಯಕರ್ನಾಟಕ, ವಿಶ್ವಬಂಧು, ಜನವಾಣಿ, ಪ್ರಬುದ್ಧಕರ್ನಾಟಕ ಸುಭೋಧ, ಕಲಾಸರಸ್ವತಿ, ಕಂಠೀರವ, ಕಥಾಂಜಲಿ ಮುಂತಾದ

ಪತ್ರಿಕೆಗಳಲ್ಲಿ ಕುವೆಂಪು, ಪು.ತಿ. ನರಸಿಂಹಾಚಾರ, ಜಿ.ಪಿ. ರಾಜರತ್ನಂ ಮುಂತಾದ ಹಿರಿಯ ಕವಿಗಳ ರಚನೆಗಳು ಪ್ರಕಟವಾಗುತ್ತಿದ್ದವು. ಈ ಹಂತದಲ್ಲಿ ಅವರ ಕವನಗಳು ಬಿ.ಎಂ.ಶ್ರೀ ಮತ್ತು ಅವರ ಹಿರಿಯ ಶಿಷ್ಯರ ಪ್ರಭಾವಕ್ಕೆ ಒಳಪಟ್ಟಿದ್ದರೂ ಆನಂತರದ ದಿನಗಳಲ್ಲಿ ಅವರು ಈ ಪ್ರಭಾವದಿಂದ ಬಿಡಿಸಿಕೊಂಡು ತಮ್ಮದೇ ಆದ ಕಾವ್ಯಮಾರ್ಗವೊಂದನ್ನು ಹುಡುಕಿಕೊಂಡದ್ದನ್ನು ಗಮನಿಸಬಹುದು. ಈ ಅವಧಿಯಲ್ಲಿ ಮಹದೇವಯ್ಯನವರು ತಮ್ಮನ್ನು ತೀವ್ರವಾಗಿ ಅಧ್ಯಯನದಲ್ಲಿ ತೊಡಗಿಸಿಕೊಂಡರು. ಕ್ರಮೇಣ ಪ್ರಪಂಚದ ಶ್ರೇಷ್ಠಸಾಹಿತ್ಯವನ್ನೆಲ್ಲ ಓದತೊಡಗಿದರು, ಷೇಕ್ಸ್‌ಪಿಯರ್, ಬರ್ನಾರ್ಡ್‌ಷಾ ಮುಂತಾದವರ ನಾಟಕಗಳನ್ನು, ಅಲ್ಲದೆ ವಿಶ್ವನಾಟಕಸಾಹಿತ್ಯಕ್ಕೆ ಶ್ರೇಷ್ಠವಾದ ರುದ್ರನಾಟಕಗಳನ್ನು ನೀಡಿದ ಗ್ರೀಕ್‌ಸಾಹಿತ್ಯವನ್ನು, ತತ್ವಶಾಸ್ತ್ರವನ್ನು ಓದಿದರು. ಪ್ರಪಂಚದ ಇತಿಹಾಸ, ಪುರಾಣಗಳನ್ನು, ಸಾಹಿತ್ಯ ವಿಮರ್ಶೆಯನ್ನು ಓದಿದರು. ಹೀಗೆ ಇವರು ಗಳಿಸಿದ ಜ್ಞಾನ ಅವರ ಕೃತಿಗಳಲ್ಲಿ ಹಾಸುಹೊಕ್ಕಾಗಿದೆ.

ಮಹದೇವಯ್ಯನವರ ಜೀವನ ಶಿಸ್ತು ಸಂಯಮಗಳಿಂದ ಪರಿಪೋಷಿತವಾಗಿತ್ತು, ಪ್ರಾಮಾಣಿಕತೆ, ಆದರ್ಶಪರತೆ, ಶಿಸ್ತು ಅವರ ಜೀವನದ ಅವಿಭಾಜ್ಯ ಅಂಗವಾಗಿದ್ದವು. ಜೊತೆಗೆ ಅಪೂರ್ವವಾದ ಜ್ಞಾಪಕಶಕ್ತಿಯೂ ಇತ್ತು. ಇಂಟರ್ ಮಿಡಿಯಟ್‌ನಲ್ಲಿ ಉತ್ತೀರ್ಣರಾಗಿ ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎಸ್.ಸಿ ತರಗತಿಗೆ ಸೇರಿದರು. ಈ ಸಮಯದಲ್ಲಿ ಅಚಾರ್ಯ ಬಿ.ಎಂ.ಶ್ರೀಕಂಠಯ್ಯನವರ ಮತ್ತು ಪ್ರೊ. ಎ.ಆರ್. ಕೃಷ್ಣಶಾಸ್ತ್ರಿಗಳವರ ಸಾಹಿತ್ಯ ಚಟುವಟಿಕೆಗಳು ಅವರ ಮೇಲೆ ಪ್ರಭಾವ ಬೀರಿದವು. ಕಾಲೇಜಿನ ಕರ್ನಾಟಕ ಸಂಘ, ಸಾಂಸ್ಕೃತಿಕ ಸಂಘಗಳು ಮತ್ತು ಇಂಗ್ಲೀಷ್ ಸೆಮಿನಾರ್‌ಗಳಲ್ಲಿ ನಡೆಯುತ್ತಿದ್ದ ಕಾವ್ಯವಿಮರ್ಶೆ, ವಾಚನ, ಭಾಷಣಗಳಿಗೆ ಹಾಜರಾಗುವುದರ ಮೂಲಕ ಅವರು ಕನ್ನಡ ಕಾವ್ಯಪರಂಪರೆಯ ಪೂರ್ಣಪರಿಚಯ ಮಾಡಿಕೊಂಡರು.

೧೯೩೩ರಲ್ಲಿ ಧಾರವಾಡದಲ್ಲಿ ಅಖಿಲಭಾರತ ವೀರಶೈವಮಹಾಸಭೆ ನಡೆಯಿತು. ಆ ಸಭೆಯ ಯುವಪರಿಷತ್ತಿನಲ್ಲಿ ಪ್ರತಿನಿಧಿಯಾಗಿ ಮಹಾದೇವಯ್ಯನವರು ಭಾಗವಹಿಸಿದ್ದರು. ಅಷ್ಟೇ ಅಲ್ಲದೆ, ತಮ್ಮ ಸ್ಫೂರ್ತಿಯುತವಾದ ಭಾಷಣದಿಂದ ಯುವಕರಲ್ಲಿ ಚೈತನ್ಯವನ್ನು ತುಂಬಿ ಅವರು ಸಮಾಜಸೇವೆಯತ್ತ ಜಾಗೃತಗೊಳ್ಳುವಂತೆ ಕರೆಯಿತ್ತರು. ಸಮಾಜೋತ್ಕರ್ಷ ಸಾಧಕ ಸಂಘವನ್ನು ಪ್ರಮುಖವಾಗಿ ಪ್ರೋತ್ಸಾಹಿಸಿ ವಿಶೇಷ ಸಲಹೆ, ಸೂಚನೆ, ಮಾರ್ಗದರ್ಶನವನ್ನು ನೀಡುತ್ತಿದ್ದವರು ಶ್ರೀಯುತರಾದ ಹರ್ಡೇಕರ ಮಂಜಪ್ಪನವರು. ಇವರು 'ಶರಣ ಸಂದೇಶ' ಪತ್ರಿಕೆಯ ಸಂಪಾದಕರಾಗಿದ್ದರು. ಸಂಘದ ಅನೇಕ ಲೇಖನಗಳನ್ನು ಪ್ರಕಟಿಸುವುದರ ಮೂಲಕ ಯುವಕರಲ್ಲಿ ಸಮಾಜಸೇವಾಮನೋಭಾವವನ್ನು ಘೋಷಿಸಿದರು. ಹಿಂದಿನ ಕವಿಗಳ ಪುರಾಣಗಳಲ್ಲಿ ವೈವಿಧ್ಯಮಯವಾಗಿ ಚಿತ್ರಿತಳಾಗಿದ್ದ ಅಕ್ಕನನ್ನು ಕುರಿತಾದ ಸರ್ವಜನಸಮ್ಮತವಾದ ಒಂದು ಜೀವನ ಚರಿತ್ರೆಯ ಅಗತ್ಯವಿತ್ತು. ಆ ಕುರಿತು ಯೋಚಿಸುತ್ತಿದ್ದ ಮಹಾದೇವಸ್ವಾಮಿಗಳಿಗೆ ತತ್‌ಕ್ಷಣದಲ್ಲಿ ನೆನಪಿಗೆ ಬಂದವರು ಮಹಾದೇವಯ್ಯನವರು. ಇವರಿಗೆ ಅಕ್ಕನ ಬಗೆಗಿದ್ದ ಶ್ರದ್ಧೆ, ಭಕ್ತಿಗಳು ವಚನ ಸಾಹಿತ್ಯದಲ್ಲಿದ್ದ ಆಳವಾದ

ಪಾಂಡಿತ್ಯ ಇವನ್ನು ಕಂಡಿದ್ದ ಮಹಾದೇವಸ್ವಾಮಿಗಳು, ಆ ಕೃತಿರಚನೆಗೆ ಇವರೇ ಅರ್ಹರೆಂದು ಆ ಕಾರ್ಯವನ್ನು ಇವರಿಗೇ ಒಪ್ಪಿಸಿದರು. ಇದರ ಫಲವಾಗಿ 'ಶ್ರೀ ಮಹದೇವಿಯಕ್ಕನವರ ಜೀವನಚರಿತ್ರೆ' ಎಂಬ ಕೃತಿ ರಚನೆಯಾಯಿತು. ಈ ಪುಟ್ಟಪುಸ್ತಕದ ರಚನೆಗೆ ಅವರು ಮಾಡಿಕೊಂಡ ಪೂರ್ವಸಿದ್ಧತೆ, ಶ್ರದ್ಧೆ, ಅಚ್ಚುಕಟ್ಟು, ಕೃತಿಯಲ್ಲಿ ಪಡಿಮೂಡಿದೆ. ಆ ಕೃತಿಯ ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು. ಎಂಬಂತೆ ಮೂಡಿದೆ. ಅವರ ಕೃತಿಗಳಲ್ಲಿ ಈ ಕೃತಿಗೆ ವಿಶೇಷ ಸ್ಥಾನವಿದೆ.

೧೯೩೬ರಲ್ಲಿ ಹಂಪೆಯಲ್ಲಿ ವಿಜಯನಗರ ಸ್ಥಾಪನೆಯ ಷಟ್‌ಶತಮಾನೋತ್ಸವವನ್ನು ಆಚರಿಸಲಾಯಿತು. ಈ ಸಮಾರಂಭದಲ್ಲಿ ನಾಡಿನ ಹಿರಿಯ ವಿದ್ವಾಂಸರು ನಾಡಿನ ಸಂಸ್ಕೃತಿ-ಪರಂಪರೆ, ಇಂದಿನ ಸ್ಥಿತಿ-ಗತಿ, ನಾಡು ನುಡಿಯ ಅಭಿವೃದ್ಧಿಗೆ ಕೈಗೊಳ್ಳಬೇಕಾದ ಯೋಜನೆಗಳನ್ನು ಕುರಿತು ವಿದ್ವತ್ಪೂರ್ಣವಾದ ಭಾಷಣಗಳನ್ನು ಮಾಡಿದರು. ಈ ಸಂದರ್ಭದಲ್ಲಿ ಟಿ.ಎನ್. ಮಹದೇವಯ್ಯನವರು ತಮ್ಮ 'ಹಂಪೆಯ ಕನಸು' ಎಂಬ ನೀಳ್ಗವನವನ್ನು ವಾಚಿಸಿದರು. ಸಭೆಯಲ್ಲಿ ಕಿಕ್ಕಿರಿದಿದ್ದ ಶ್ರೋತೃಗಳು ಅವರ ಭಾವಪೂರ್ಣ ವಾಚನಕ್ಕೆ ಪರವಶರಾದರು. ವಿದ್ಯಾರ್ಥಿದೆಸೆಯಲ್ಲಿದ್ದಾಗಿನಿಂದಲೂ ಅವರು ಆದರ್ಶಮಯವಾದ ಬಾಳನ್ನೇ ಬದುಕುತ್ತಾ ಬಂದವರು. ಜೀವನದ ಕೊನೆಯುಸಿರಿರುವವರೆಗೂ ಹಾಗೇ ಬಾಳಿದವರು. ಆದರ್ಶ-ಪರಹಿತ ಚಿಂತನೆ ಅವರ ಜೀವನದ ಧ್ಯೇಯವಗಿತ್ತು. ಅವರಿಗೆ ದೊರೆತ ಸತ್ಸಂಗ ಅವರ ಜೀವನವನ್ನು ಪರಿಶುದ್ಧ ರೀತಿಯಲ್ಲಿ ನಡೆಸಲು ನೆರವಾಯಿತು. ೧೯೩೭ರಲ್ಲಿ ಟಿ.ಎನ್. ಮಹದೇವಯ್ಯನವರು ಪದವೀಧರರಾದರು. ಅವರ ಮನೆತನದಲ್ಲಿ ಅವರೇ ಮೊದಲು ಪದವಿ ಪಡೆದವರು.

ಮೈಸೂರಿನ ನಿವೃತ್ತ ಶಿರಸ್ತೆದಾರ್ ಎನ್.ಚನ್ನಪ್ಪನವರ ಜೇಷ್ಠಪುತ್ರಿ ಸೌ. ಮಹದೇವಮ್ಮನವರೊಡನೆ ೧೯೩೭ರ ಜೂನ್ ೪ನೇ ತಾರೀಖು ಮಹದೇವಯ್ಯನವರ ವಿವಾಹ ಮೈಸೂರಿನಲ್ಲಿ ನಡೆಯಿತು. ಮಹದೇವಮ್ಮನವರು ಎಸ್.ಎಸ್.ಎಲ್.ಸಿ.ವರೆಗೂ ಓದಿದ್ದ ವಿದ್ಯಾವಂತೆ. ಅಷ್ಟೇ ಅಲ್ಲದೆ, ಸಾಹಿತ್ಯ ಸಂಗೀತಗಳಲ್ಲಿ ಉತ್ತಮ ಅಭಿರುಚಿಯನ್ನು ಹೊಂದಿದ್ದರು. ಮಹದೇವಯ್ಯನವರಿಗೆ ಎಲ್ಲ ವಿಧದಲ್ಲೂ ತಕ್ಕ ಗೃಹಿಣಿಯಾಗಿ ಅವರ ಮನ-ಮನೆಗಳನ್ನು ಬೆಳಗಿದರು.

ಈ ಅವಧಿಯಲ್ಲಿ ಟಿ.ಎನ್. ಮಹದೇವಯ್ಯನವರು ಜನವಾಣಿಯಲ್ಲಿ ಕೆಲಸ ಮಾಡುವ ಅವಕಾಶ ದೊರಕಿತು. ಆ ಮೂಲಕ ದೇಶದ, ಸಮಾಜದ ಸೇವೆ ಮಾಡಬೇಕೆಂಬುದೇ ಅವರ ಹೆಬ್ಬಯಕೆಯಾಗಿತ್ತು. ಮೊದಲಿನಿಂದಲೂ ಸೇವಾಮನೋಧರ್ಮದಿಂದ, ಆದರ್ಶಪರವಾಗಿಯೇ ಇದ್ದ ಮಹದೇವಯ್ಯನವರಿಗೆ ತಾವು ಆರಿಸಿಕೊಂಡಿರುವ ಹಾದಿಯಲ್ಲಿ ಒದಗಬಹುದಾದ ಕಷ್ಟಗಳ ಅರಿವು ಚೆನ್ನಾಗಿಯೇ ಇದ್ದಿತು. ಅವರು ಬರೆಯುತ್ತಾರೆ, "---ನನ್ನ ಹೃದಯದ ಅಂತರ್ವಾಣಿ ಕೂಗಿ ಹೇಳುತ್ತಿದೆ : ಧರ್ಮವಿರಲಿ, ತ್ಯಾಗವಿರಲಿ, ಸೇವೆಯಿರಲಿ ಎಂದು. ಕಷ್ಟಪಡು, ಕಷ್ಟದಲ್ಲಿ ಸಾಯಿ, ಕಷ್ಟದಲ್ಲಿ ಮುಳುಗು" ಎಂದು ಅದಕ್ಕಾಗಿ ನಾನು ಇಂದು ಕಷ್ಟವನ್ನಾರಿಸಿಕೊಂಡಿರುವೆ.

"----ನಮ್ಮ ಜೀವನದಲ್ಲೂ ಒಂದು ಶ್ರೇಷ್ಠತೆ ಬೇಕು. ಒಂದು ಉದಾತ್ತ ಧರ್ಮವಿರಬೇಕು." ಹೀಗೆ ತಲೆಯ ತುಂಬಾ ಆದರ್ಶಗಳನ್ನು ತುಂಬಿಕೊಂಡಿದ್ದ ಮಹದೇವಯ್ಯನವರು ಸರ್ಕಾರಿ ಕೆಲಸಕ್ಕೆ ಸೇರದೆ ಸ್ವತಂತ್ರ್ಯವಾಗಿಯೆ ದುಡಿದು ದೇಶಕ್ಕಾಗಿ ತ್ಯಾಗ-ಸೇವೆ ಮಾಡಬೇಕೆಂಬ ಬಯಕೆ.[೫] ಆದರೆ ಮಹದೇವಯ್ಯನವರು ಜೀವನದ ನಿರ್ವಹಣೆಗಾಗಿ ಸರ್ಕಾರಿ ಕೆಲಸಕ್ಕೆ ಸೇರುವುದು ಅನಿವಾರ್ಯವಾಯಿತು. ಆದರೂ ಸರ್ಕಾರಿ ಕೆಲಸ ಮಾಡುವಾಗಲೂ ತಮ್ಮ ಆದರ್ಶವನ್ನು ಅವರು ಬಿಡಲಿಲ್ಲ. ನಿಸ್ವಾರ್ಥತೆಯಿಂದ ಸರ್ಕಾರದ ಸೇವೆ ಮಾಡಿದರು. ತಮ್ಮ ವೃತ್ತಿಜೀವನದಲ್ಲಿ ಎಂಥ ಪ್ರಲೋಭನೆಗಳಿಗೂ ಬಲಿಬೀಳದೆ, ಶುದ್ಧಚಾರಿತ್ರ್ಯದಿಂದ ಇತರರಿಗೆ ಮೇಲ್ಪಂಕ್ತಿಯಾಗಿದ್ದರು.

ಕೆ.ಆರ್.ಎಸ್.ನ ಲೋಕೋಪಯೋಗಿ ಇಲಾಖೆಯಲ್ಲಿ ಗುಮಾಸ್ತರಾಗಿ ಅವರು ಮೊದಲು ವೃತ್ತಿಜೀವನವನ್ನು ಆರಂಭಿಸಿದರು. ಈ ಅವಧಿಯಲ್ಲೇ ಅವರು "ಪುಷ್ಪಾಂಜಲಿ"ಯನ್ನು ಬರೆದದ್ದು. ಕೆ.ಆರ್.ಎಸ್.ನಲ್ಲಿ ಕೆಲತಿಂಗಳು ಕೆಲಸ ಮಾಡಿದ ಮೇಲೆ ಬೆಂಗಳೂರು, ಮೈಸೂರುಗಳಲ್ಲಿ ಸ್ವಲ್ಪ ಕಾಲ ತರಬೇತಿ ಪಡೆದು ರೆವನ್ಯೂ ಇನ್‌ಸ್ಪೆಕ್ಟರ್ ಆಗಿ ನೇಮಕವಾದರು. ಇದೇ ಅವಧಿಯಲ್ಲೇ ಟಿ.ಎನ್. ಮಹದೇವಯ್ಯನವರು ಬಸವಣ್ಣನವರ ಜೀವನಕ್ಕೆ ಸಂಬಂಧಿಸಿದ "ಕ್ರಾಂತಿಯ ದೀಪ" ಎಂಬ ನಾಟಕವನ್ನು ಬರೆದರು. ೧೯೩೮ರ ಡಿಸೆಂಬರ್ ಎಂಟರಂದು ಮಹದೇವಯ್ಯನವರ ಪ್ರಥಮ ಪುತ್ರಿ ವಸಂತರವರ ಜನನವಾಯಿತು. ಟಿ.ಎನ್. ಮಹದೇವಯ್ಯನವರ ಜೀವನದಲ್ಲೂ ವಸಂತಾಗಮನದ ಸಂತಸ ಮೂಡಿತು. ಮಹದೇವಯ್ಯನವರು ತಾವು ಬರೆದಿದ್ದ "ಪುಷ್ಪಾಂಜಲಿ" ಎಂಬ ಗದ್ಯ ಕವನಗಳ ಸಂಗ್ರಹವನ್ನು ಒಪ್ಪಿಸಿಕೊಳ್ಳುವಂತೆ ವಿಶ್ವಕವಿ ರವೀಂದ್ರರಿಗೆ ಪತ್ರ ಬರೆದು, ಅವರ 'ಗೀತಾಂಜಲಿ' ತಮ್ಮ ಮೇಲೆ ಉಂಟುಮಾಡಿದ್ದ ಪರಿಣಾಮವನ್ನು ಕುರಿತು ಹೇಳಿದ್ದರು. ಅದಕ್ಕೆ ಉತ್ತರವಾಗಿ ರವೀಂದ್ರರು ಟಿ.ಎನ್. ಮಹದೇವಯ್ಯನವರ ಕೃತಿಯನ್ನು ಸಂತೋಷದಿಂದ ಒಪ್ಪಿಕೊಂಡಿರುವುದಾಗಿ ಪತ್ರ ಬರೆದಿದ್ದರು.[೬] ಮಹದೇವಯ್ಯನವರು ತಮ್ಮ ಸರ್ಕಾರಿ ಕೆಲಸ ಕಾರ್ಯಗಳ ನಡುವೆಯೂ ಬಿಡುವು ಮಾಡಿಕೊಂಡು ಸಾಹಿತ್ಯ ರಚನೆಯಲ್ಲಿ ತೊಡಗುತ್ತಿದ್ದರು. ೧೯೩೯ರಲ್ಲಿ ಹನಗೋಡಿಗೆ ವರ್ಗವಾಯಿತು. ಅವರು ಅಲ್ಲಿರುವವರೆಗೂ "ಬೆಳಗು" ಎಂಬ ಕೈಬರಹದ ಮಾಸಪತ್ರಿಕೆಯನ್ನು ಹೊರತರುತ್ತಿದ್ದರೆಂದು ತಿಳಿದುಬರುತ್ತದೆ. ೧೯೩೯ರ ನವಂಬರ್‌ನಲ್ಲಿ ಹನಗೋಡಿನಿಂದ ಬಿಳಿಕೆರೆಗೆ ವರ್ಗವಾಯಿತು. ಅಲ್ಲಿ "ಉಷಾ" ಎಂಬ ಕೈಬರಹದ ಪತ್ರಿಕೆಯನ್ನು ಪ್ರಕಟಿಸಲಾರಂಭಿಸಿದರು. ಕೈಬರಹದ ಪತ್ರಿಕೆ ಎಂದರೆ ಹೇಗಿರಬೇಕು? ಎಂಬುದಕ್ಕೆ ಉಷಾ ಪತ್ರಿಕೆಯ ದೊರಕಿರುವ ಕೆಲವು ಸಂಚಿಕೆಗಳು ಅತ್ಯುತ್ತಮ ನಿದರ್ಶನವಾಗಿವೆ.

ಬಿಳಿಕೆರೆಯಲ್ಲಿದ್ದಾಗಲೇ ಅಂದರೆ ೧೯೪೧ರಲ್ಲಿ ಪ್ರೊ. ಶಿ.ಶಿ.ಬಸವನಾಳರ ಸಂಪಾದಕತ್ವದಲ್ಲಿ ಪ್ರಕಟವಾದ 'ವೀರಶೈವ ತತ್ತ್ವಪ್ರಕಾಶ'ಕ್ಕಾಗಿ ಮಹಾದೇವಯ್ಯನವರು ಅನುಭವ ಮಂಟಪವೆಂಬ ಸಂಶೋಧನಾತ್ಮಕ ಲೇಖನವೊಂದನ್ನು ಸಂಪಾದಕರ ಬೇಡಿಕೆಯ ಮೇರೆಗೆ ಬರೆದರು. ಅದು ಮುಂದೆ ಸ್ವತಂತ್ರವಾಗಿ ಪುಟ್ಟ ಪುಸ್ತಕರೂಪದಲ್ಲಿಯೂ ಪ್ರಕಟವಾಯಿತು.[೭]

ಬಿಳಿಕೆರೆಯಲ್ಲಿದ್ದಾಗಲೇ ಮಹದೇವಯ್ಯನವರು 'ರಾಜಾ ಪುಲಿಕೇಶಿ' ಎಂಬ ನಾಟಕವನ್ನ ಬರೆದರು. ಅದು ಆ ಊರಿನಲ್ಲೇ ರಂಗಪ್ರದರ್ಶನವನ್ನೂ ಕಂಡಿತು. ಎರಡು ವರ್ಷಗಳ ನಂತರ ಅವರನ್ನು ತಾಲ್ಲೂಕ್ ಶಿರಸ್ತೇದಾರರಾಗಿ ಮತ್ತೆ ಗುಂಡ್ಲುಪೇಟೆಗೆ ವರ್ಗಾಯಿಸಲಾಯಿತು. ಅಲ್ಲಿಂದ ಅವರಿಗೆ ೧೯೪೪ರಲ್ಲಿ ಕಡೂರಿಗೆ ವರ್ಗವಾಯಿತು. ಇಲ್ಲಿದ್ದಾಗ ಅವರು ಮಾಡಿದ ಒಂದು ಅವಿಸ್ಮರಣೀಯ ಕೆಲಸವೆಂದರೆ 'ಕರ್ನಾಟಕ ಸಂಘ'ದ ಸ್ಥಾಪನೆ. ಅದನ್ನು ಕಟ್ಟಲು ಅವರು ಪಟ್ಟಶ್ರಮ ಅಷ್ಟಿಷ್ಟಲ್ಲ.

ಸಾಮಾನ್ಯರಲ್ಲೂ ಸಾಹಿತ್ಯಾಭಿರುಚಿಯನ್ನು ಬೆಳೆಸಲು, ನಾಡು ನುಡಿಯ ಬಗೆಗೆ ಅಭಿಮಾನ ತಳೆಯುವಂತೆ ಮಾಡಲು ಅವರು ವರ್ಗವಾಗಿ ಹೋದ ಕಡೆಗಳಲ್ಲೆಲ್ಲಾ 'ಕರ್ನಾಟಕ ಸಂಘ'ಗಳನ್ನು ಸ್ಥಾಪಿಸುತ್ತಿದ್ದರು. ಅಲ್ಲದೆ ಅಂದಿಗಾಗಲೇ ಸ್ಥಾಪಿತವಾಗಿ ನಿರ್ಜೀವಗೊಂಡಿದ್ದ ಸಂಘಗಳಿಗೆ ಚೈತನ್ಯ ನೀಡುತ್ತಿದ್ದರು. ಇಷ್ಟೆಲ್ಲ ಕೆಲಸಗಳನ್ನೂ ಅವರು ತಮ್ಮ ವೃತ್ತಿಜೀವನದ ಬಿಡುವಿನ ವೇಳೆಯಲ್ಲಿ ನಿರಂತರವಾಗಿ ಮಾಡುತ್ತಾ, ನಾಡು- ನುಡಿಯ ಸೇವೆಯನ್ನು ಮಾಡುತ್ತಿದ್ದರೆಂದರೆ ಅವರ ನಿರಂತರ ಕ್ರಿಯಾಶೀಲ ಚೇತನದ ಅರಿವಾಗದಿರದು.

ಕಡೂರಿನಲ್ಲಿದ್ದಾಗ ಮಹಾದೇವಯ್ಯನವರಿಗೆ ಸಂಗೀತ ಪಂಡಿತರೊಬ್ಬರ ಪರಿಚಯವಾಯಿತು. ಅವರ ಹೆಸರು ಪಂಡಿತ ಸೂರ್ಯನಾರಾಯಣ ಶಾಸ್ತ್ರಿಗಳು. ವೇದಾಂತ ವಿಷಯಗಳಲ್ಲಿ ಅವರಿಗೆ ವಿಶೇಷವಾದ ಆಸಕ್ತಿಯಿತ್ತು. ಹೀಗಾಗಿ ಆಧ್ಯಾತ್ಮದಲ್ಲಿ ಸಹಜವಾದ ಒಲವಿದ್ದ ಮಹಾದೇವಯ್ಯನವರಿಗೆ ಅವರ ಪರಿಚಯವಾದದ್ದೇ ತಡ ಕೆಲವೇ ದಿನಗಳಲ್ಲಿ ಆತ್ಮೀಯ ಸ್ನೇಹವೇರ್ಪಟ್ಟಿತು. ಶಾಸ್ತ್ರೀಯ ಸಂಗೀತದ ಬಗೆಗೆ ಮೊದಲಿನಿಂದಲೂ ಇವರಿಗೆ ಆಸಕ್ತಿಯಿದ್ದಿತು. ಇವರಿಗೆ ವೀಣೆಯಲ್ಲಿ ಇದ್ದ ಆಸಕ್ತಿಯನ್ನು ಕಂಡು ಅಚ್ಚರಿಗೊಂಡು ಮೆಚ್ಚಿಕೊಂಡ ಪಂಡಿತರು ಅವರಲ್ಲಿದ್ದ ವೀಣೆಯನ್ನು ಇವರಿಗೆ ದತ್ತವಾಗಿ ಕೊಟ್ಟಿದ್ದಷ್ಟೇ ಅಲ್ಲದೆ ಇವರಿಗೆ ತಮ್ಮ ಇಳಿವಯಸ್ಸಿನಲ್ಲಿಯೂ ಬಂದು ವೀಣೆಯ ಪಾಠವನ್ನು ಹೇಳಲು ಮುಂದಾದರು. ಮಹಾದೇವಯ್ಯನವರು ತಮ್ಮ ಮಗಳು ವಸಂತ ಅವರಿಗೂ ಸಂಗೀತ ಪಾಠವನ್ನು ಚಿಕ್ಕಂದಿನಿಂದಲೇ ಹೇಳಿಸುತ್ತಿದ್ದರು.

ಕಡೂರಿಗೆ ಬಂದ ಮೇಲೆ ಮಹದೇವಯ್ಯನವರ ಕಷ್ಟಪರಂಪರೆಗಳು ಆರಂಭವಾದವು. ಕಡೂರಿಗೆ ವರ್ಗವಾಗಿ ಬಂದ ಕೆಲವೇ ದಿನಗಳಲ್ಲಿ ಅಂದರೆ ೩೦-೫-೧೯೪೪ರಲ್ಲಿ ಮಹದೇವಯ್ಯನವರ ತಂದೆ ತೀರಿಕೊಂಡರು. ಇದು ಅವರಿಗೆ ತೀವ್ರ ವೇದನೆಯನ್ನುಂಟುಮಾಡಿತು. ತಮ್ಮ ಮನೆತನದ ಆಧಾರಸ್ತಂಭ ಮುರಿದು ಬಿದ್ದುದು ಅವರಿಗೆ ದುಃಖದ ವಿಷಯವಷ್ಟೇ ಅಲ್ಲದೆ ಹಿರಿಯ ಮಗನಾಗಿ ಅವರ ಕರ್ತವ್ಯವೂ ಅಲ್ಲಿ ಹಿರಿದಾಗಿತ್ತು. ಈ ವೇಳೆಗೆ ಮಹಾದೇವಯ್ಯನವರು ಮೂರುಮಕ್ಕಳ ತಂದೆಯಾಗಿದ್ದರು. ಮಕ್ಕಳ ಆರೋಗ್ಯ ಮತ್ತು ಮಹದೇವಮ್ಮನವರ ಆರೋಗ್ಯದ ವಿಚಾರದಲ್ಲಿ ಬಹಳ ಕಾಳಜಿ ವಹಿಸಿದರು. ಈ ವೇಳೆಗೆ ಮಹದೇವಮ್ಮನವರ ಆರೋಗ್ಯ ಆಗಾಗ ಕೆಡುತ್ತಿತ್ತು. ಇವರನ್ನು ತಜ್ಞ ವೈದ್ಯರಲ್ಲಿ ಪರೀಕ್ಷಿಸಿ ಅಗತ್ಯವಿದ್ದ ಔಷಧಿಗಳನ್ನೆಲ್ಲ ಕೊಡಿಸುತ್ತಿದ್ದರು.

ಮಹದೇವಮ್ಮನವರ ಆರೈಕೆಗಾಗಿ ಟಿ.ಎನ್. ಮಹದೇವಯ್ಯನವರು ಮೈಸೂರಿಗೆ ವರ್ಗ ಮಾಡಿಸಿಕೊಂಡರು. ಅತ್ಯಂತ ಕಾಳಜಿಯಿಂದ ಅವರನ್ನು ನೋಡಿಕೊಳ್ಳತೊಡಗಿದರು. ನಂತರ ಅಲ್ಪಅವಧಿಯಲ್ಲಿ

ಅವರಿಗೆ ಹುಣಸೂರಿಗೆ ವರ್ಗವಾಯಿತು. ಮಹದೇವಮ್ಮನವರ ಆರೋಗ್ಯ ಸುಧಾರಿಸಿರದ ಕಾರಣ ಇವರನ್ನು ಮೈಸೂರಿನಲ್ಲಿ ಬಿಟ್ಟು ಮಕ್ಕಳೊಂದಿಗೆ ಹುಣಸೂರಿಗೆ ಹೋದರು. ಕ್ರಮೇಣ ಮಹದೇವಮ್ಮನವರು ಚೇತರಿಸಿಕೊಳ್ಳಲಾಗದ ಹಂತ ತಲುಪಿದರು. ಸರ್ಕಾರಿ ಕೆಲಸಗಳ ಒತ್ತಡದಲ್ಲೂ ಮಹದೇವಮ್ಮನವರು ಮಕ್ಕಳನ್ನು ನೋಡಲು ಬಯಸಿದಾಗ ಪೋಲಿಯೋಪೀಡಿತ ಮಗ ಶರತ್‌ಚಂದ್ರ ಮತ್ತು ಶೈಲಜರನ್ನು ಭುಜದ ಮೇಲೆ ಕೂರಿಸಿಕೊಂಡು ರೈಲ್ವೆ ನಿಲ್ದಾಣದಿಂದ ನಡೆದೇ ಆಸ್ಪತ್ರೆಗೆ ಬರುತ್ತಿದ್ದರು. ಎಂಥ ಪರಿಸ್ಥಿತಿಯಲ್ಲೂ ವಿನಾಕಾರಣ ರಜೆ ಪಡೆದು ಆಫೀಸಿನ ಕೆಲಸಗಳನ್ನು ಅವಗಣಿಸುತ್ತಿರಲಿಲ್ಲ. ಅವರ ಪತ್ನೀಪ್ರೇಮಕ್ಕೂ ಕರ್ತವ್ಯನಿಷ್ಠೆಗೂ ಇವೆಲ್ಲ ಉತ್ತಮ ನಿದರ್ಶನಗಳು.

ಮಹದೇವಮ್ಮನವರು ಬದುಕುವುದಿಲ್ಲವೆಂದು ಖಚಿತವಾದ ಮೇಲೆ ಅವರನ್ನು ಮನೆಗೆ ಕರೆತಂದರು. ಮೈಸೂರಿನಲ್ಲಿ ಬೇಗ ಮನೆ ಸಿಗದಿದ್ದ ಕಾರಣ ಅವರು ತಮ್ಮ ಮಾವನ ಮನೆಯಲ್ಲಿ ಉಳಿಯಬೇಕಾಯಿತು. ಆ ಸಂದರ್ಭದ ದಾರುಣತೆಯನ್ನು ಅವರ ಪುತ್ರಿ ವಸಂತರವರು ಹೀಗೆ ವಿವರಿಸುವರು: "ನನ್ನ ತಾಯಿ ನನ್ನ ತಂದೆಯವರಿಗೆ ನನ್ನದಾದ ಮನೆಯಲ್ಲಿ ಪ್ರಾಣಬಿಡಲು ಅವಕಾಶಮಾಡಿಕೊಡಿ ಎಂದು ಹೇಳುತ್ತಿದ್ದರು. ಅದಕ್ಕಾಗಿ ನಮ್ಮ ತಂದೆಯವರು ಆಫೀಸಿಲ್ಲದ ವೇಳೆಯಲ್ಲೆಲ್ಲಾ ಮನೆಗಾಗಿ ಸುತ್ತಿಸುತ್ತಿ ಮನೆ ಸಿಗದೆ, ರಾತ್ರಿ ಮಹಡಿರೂಮಿನಲ್ಲಿ ಕುಳಿತು ಕಣ್ಣೀರು ಹಾಕುತ್ತಿದ್ದುದನ್ನು ನೋಡುತ್ತಿದ್ದೆ. 'ನನ್ನದಾದ ಮನೆಯಲ್ಲಿ ಪ್ರಾಣ ಬಿಡಲು ಅವಕಾಶಮಾಡಿ' ಎಂಬ ಮಹದೇವಮ್ಮನವರ ಮನೋವೇದಕವಾದ ಮಾತು ಟಿ.ಎನ್. ಮಹದೇವಯ್ಯನವರ ಹೃದಯಲ್ಲಿ ಸದಾ ಮಾರ್ಮೊಳಗುತ್ತಾ ಇತ್ತು. ಬಾಡಿಗೆ ಮನೆಗಾಗಿ ಪ್ರಯತ್ನಿಸುತ್ತಿದ್ದಾಗ ಕೊನೆಗೊಂದು ದಿನ ಮನೆಯೊಂದು ಸಿಕ್ಕಿತು. ಮನೆಗೆ ಮುಂಗಡ ಕೊಟ್ಟು ಆಫೀಸಿಗೆ ಹೋದರು. ಅದೇ ದಿನ ಮನೆಗೆ ಬಂದ ಅವರಿಗೆ ಮೊದಲು ಕಂಡ ದೃಶ್ಯ ಮಹದೇವಮ್ಮನವರು ಮೇಲುಸಿರು ಬಿಡುತ್ತಾ ಇದ್ದುದು. ಇವರು ಬಂದ ಕೆಲವೇ ಕ್ಷಣಗಳಲ್ಲಿ ಉಸಿರಾಟ ನಿಂತಿತು. ಮಡದಿಯ ಅಂತ್ಯಕ್ರಿಯೆಗಳೆಲ್ಲಾ ಮೈಸೂರಿನಲ್ಲಿ ನಡೆದವು. ಆ ದಿನ ಸಂಜೆ ಪತ್ನಿಯ ಸಮಾಧಿಯ ಬಳಿ ಕುಳಿತು 'ಆ ಸಮಾಧಿ' ಎಂಬ ಶ್ರೇಷ್ಠ ಶೋಕಗೀತೆಯನ್ನು ರಚಿಸಿ ಅಗಲಿದ ಪತ್ನಿಗೆ ಅರ್ಪಿಸಿದರು. ಪತ್ನಿಯ ಮರಣಾನಂತರ ಮಹದೇವಯ್ಯನವರ ಕಷ್ಟಗಳು ಮತ್ತಷ್ಟು ಹೆಚ್ಚಿದವು. ಮಕ್ಕಳನ್ನು ನೋಡಿಕೊಳ್ಳುವುದು ಅಸಾಧ್ಯವಾಯಿತು. ಇವರ ದುಃಖಗಳ ನಡುವೆ ಅವರ ಜೊತೆಗಿದ್ದು ಅವರ ನೋವನ್ನು ಸ್ವಲ್ಪವಾದರೂ ಕಡಿಮೆ ಮಾಡುತ್ತಿದ್ದ ಸಂಗಾತಿಗಳೆಂದರೆ ಪುಸ್ತಕಗಳು ಮತ್ತು ವೀಣೆ. ಕೆಲದಿನಗಳ ಮಟ್ಟಿಗೆ ಮಕ್ಕಳನ್ನು ತಮ್ಮ ಬಂಧುಗಳ ಮನೆಯಲ್ಲೇ ಬಿಟ್ಟರು. ಆಗೆಲ್ಲಾ ಮಕ್ಕಳ ಸ್ಥಿತಿಯನ್ನು ಕಂಡು ಅವರು ಪಡುತ್ತಿದ್ದ ದುಃಖ ಅಪಾರ.

ಕೊನೆಗೆ ಎಲ್ಲ ಕಷ್ಟಪರಂಪರೆಗೂ ತೆರೆ ಎಳೆಯುವ ಕಾಲ ಕೂಡಿ ಬಂದಿತು. ತಮ್ಮ ಹಿತೈಷಿಗಳ ಒತ್ತಾಯದಿಂದಲೂ, ಮಕ್ಕಳ ಭವಿಷ್ಯದ ಚಿಂತೆಯಿಂದಲೂ ಟಿ.ಎನ್. ಮಹದೇವಯ್ಯನವರು ಎರಡನೇ ಮದುವೆಗೆ ಒಪ್ಪಿದರು. ಕೊಡಗು ಜಿಲ್ಲೆಯ ಸೋಮವಾರಪೇಟೆಯಲ್ಲಿರುವ ಮಸಗೋಡು ಎಸ್ಟೇಟಿನ ಮಾಲೀಕ

ಚನ್ನಬಸವಯ್ಯ ಮತ್ತು ನೀಲಮ್ಮನವರ ಪ್ರಥಮ ಪುತ್ರಿ ಸುಶೀಲಮ್ಮನವರನ್ನು ೨೫-೫-೧೯೪೮ರಂದು ವಿವಾಹವಾದರು. ಸುಶೀಲಮ್ಮನವರದು ವಿನಯ, ಸೌಶೀಲ್ಯ, ತುಂಬಾ ಹೊಂದಾಣಿಕೆಯ ಕಷ್ಟಸಹಿಷ್ಣು ಮನೋಭಾವ. ಶ್ರೀಮಂತಿಕೆಯ ದರ್ಪ ದುರಹಂಕಾರಗಳಿಂದ ವಿಮುಖವಾದ ಸುಸಂಸ್ಕೃತ ಮನಸ್ಸು ಅವರದು.

ಸುಶೀಲಮ್ಮನವರು ಮಹದೇವಯ್ಯನವರ ಮಡದಿಯಾಗಿ ಅವರ ಮನ-ಮನೆಗಳನ್ನು ತುಂಬಿದರು. ಮಹದೇವಯ್ಯನವರಿಗೆ ಮಕ್ಕಳಿಗೆ ತಾಯ್ತನದ ಪ್ರೀತಿಯನ್ನು ನೀಡುವ ಪತ್ನಿ ಸಿಕ್ಕಿದ್ದು ಅತೀವ ಸಮಾಧಾನತಂದಿತು. ಮಹದೇವಯ್ಯನವರು ಆಗಿನ್ನೂ ಹುಣಸೂರಿನಲ್ಲೇ ಅಧಿಕಾರದಲ್ಲಿದ್ದರು. ಅಲ್ಲಿ ಕೆಲತಿಂಗಳನ್ನು ತಮ್ಮ ಪತ್ನಿ ಮಕ್ಕಳೊಂದಿಗೆ ನೆಮ್ಮದಿಯಿಂದ ಕಳೆದರು. ೧೯೪೮ರ ಜುಲೈ ಏಳರಂದು ಪಿರಿಯಾಪಟ್ಟಣಕ್ಕೆ ವರ್ಗವಾಯಿತು. ಮಹದೇವಯ್ಯನವರು ಈಗ ಮತ್ತೆ ಸಾಹಿತ್ಯ ರಚನೆಯಲ್ಲಿ ತೊಡಗಿಕೊಂಡರು. ಒಂದು ನಿಲುಗಡೆಗೆ ಬಂದಿದ್ದ ಅವರ ಮನಸ್ಸು ನೆಮ್ಮದಿಯಿಂದ ಸಾಹಿತ್ಯ ಸೃಷ್ಟಿಗೆ ತೊಡಗಿತ್ತು. ಈ ಅವಧಿಯಲ್ಲಿ ಅವರು ಹೆಚ್ಚು ಕವನಗಳನ್ನು ರಚಿಸಿದರು, ಅನೇಕ ರೇಡಿಯೋ ನಾಟಕಗಳನ್ನು ಬರೆದರು. ಅವರ ಅತ್ಯುತ್ತಮ ಕವನಗಳು ರಚಿತವಾದದ್ದು ಈ ಅವಧಿಯಲ್ಲೇ.[೧೦]

೨೯-೫-೧೯೪೯ರಲ್ಲಿ ಮಹದೇವಯ್ಯನವರ ಪ್ರೀತಿಯ ಪುತ್ರಿ ಅಮೃತರವರ ಜನನವಾಯಿತು. ಸೋಮವಾರಪೇಟೆಯ ವಿರಕ್ತಮಠದ ಶ್ರೀ.ನಿ.ಪ್ರ.ಗುರುಸಿದ್ಧಸ್ವಾಮಿಗಳು ತಾವು ಬೆಂಗಳೂರಿಗೆ ಹೋಗಿ ಬರುವಾಗಲೆಲ್ಲ ಮಹದೇವಯ್ಯನವರ ಮನೆಯಲ್ಲಿ ತಂಗಿದ್ದು ಹೋಗುತ್ತಿದ್ದರು. ಸಾಧು-ಸಜ್ಜನರ ಸತ್ಸಂಗ, ಸಾಹಿತ್ಯ ಸಂಗೀತಗಳ ಸಂಸರ್ಗದಿಂದ ಮಹದೇವಯ್ಯನವರ ಜೀವನದ ನೋವು ಬಹಳಷ್ಟು ಕಡಿಮೆಯಾಗುತ್ತಿತ್ತು.

ನವೆಂಬರ ೧೯೫೦ರಲ್ಲಿ ಅವರಿಗೆ ತುರುವೇಕೆರೆಗೆ ವರ್ಗವಾಯಿತು. ಈ ಸಮಯದಲ್ಲಿ ಅರವಿಂದನ ಜನನವಾಯಿತು. ಮೊದಲ ಮಗ ಶರತ್‌ಚಂದ್ರ ಪೋಲಿಯೋ ಪೀಡಿತನಾಗಿ ನಡೆಯಲಾರದೆ ಮೂಲೆ ಸೇರಿದ್ದ. ಅರವಿಂದನ ಜನನ ಅವರಿಗೆ ಸಹಜವಾಗಿಯೇ ಸಂತೋಷವನ್ನುಂಟುಮಾಡಿತು. ಟಿ.ಎನ್. ಮಹದೇವಯ್ಯನವರು ೧೯೫೦ರಲ್ಲಿ ಪ್ರಥಮ ಕವನಸಂಕಲನ 'ವೀಣಾ'ವನ್ನು ಪ್ರಕಟಿಸಿದರು. ನಂತರದ ಎರಡು ವರ್ಷಗಳಲ್ಲಿ ತಮ್ಮ ಮಗಳು ಸ್ವರ್ಣಾ ಮತ್ತು ಅರವಿಂದರ ಸಾವಿನಿಂದ ಮಹದೇವಯ್ಯನವರಿಗೆ ಬಹಳ ನೋವುಂಟಾಯಿತು. ಸುಶೀಲಮ್ಮನವರಂತೂ ಇದರಿಂದ ತೀವ್ರ ಆಘಾತಕ್ಕೊಳಗಾದರು ಇಷ್ಟೆಲ್ಲ ಸಾವು-ನೋವುಗಳನ್ನು ಕಂಡುಂಡ ಮಹದೇವಯ್ಯನವರು ನಂಜನ್ನುಂಡ ನಂಜುಂಡನಂತಾದರೇ ಹೊರತು ಅವುಗಳಿಗೆ ಜಗ್ಗಲಿಲ್ಲ, ಕುಗ್ಗಲಿಲ್ಲ. ಅಸೀಮ ಸಂಯಮಿ, ಸಹನಾಮೂರ್ತಿಯಾಗಿ ಉಳಿದದ್ದು ಅವರ ಆತ್ಮಶಕ್ತಿಯ ದ್ಯೋತಕವಾಗಿದೆ.[೧೧]

ತುರುವೇಕೆರೆಯಿಂದ ೨೫.೬.೧೯೫೨ರಲ್ಲಿ ಚಿಕ್ಕನಾಯಕನಹಳ್ಳಿಗೆ ವರ್ಗವಾಯಿತು. ಇಲ್ಲಿ ಟಿ.ಎನ್. ಮಹದೇವಯ್ಯನವರು ಕಳೆದ ಕಾಲ ಅವರ ಜೀವನದ ಪರ್ವಕಾಲ. ಈ ಮಾತು ಅವರ ವೈಯಕ್ತಿಕ ಜೀವನ

ಮತ್ತು ಸಾಹಿತ್ಯ ಜೀವನಗಳೆರಡಕ್ಕೂ ಅನ್ವಯವಾಗುತ್ತದೆ. ಎಲ್ಲೇ ಹೋಗಲಿ ಅವರು ಕರ್ತವ್ಯದಲ್ಲಿ ಬಹಳ ಕಟ್ಟುನಿಟ್ಟು. ಸರ್ಕಾರದ ಕೆಲಸ ಅವರಿಗೆ ದೇವರ ಕೆಲಸಕ್ಕಿಂತಲೂ ಮಿಗಿಲಾದುದು. ಕರ್ತವ್ಯನಿಷ್ಠ ಅಧಿಕಾರಿಯಾಗಿ ಶಿಸ್ತಿನ ಸಿಪಾಯಿ. ಮಹದೇವಯ್ಯನವರು ತಮಗಿಂತ ಹಿರಿಯರೇ ಆಗಿರಲಿ, ಕಿರಿಯರೇ ಆಗಿರಲಿ ಅವರವರ ಸ್ಥಾನಮಾನ, ವಯೋಮಾನಗಳಿಗೆ ನೀಡಬೇಕಾದ ಮರ್ಯಾದೆಯನ್ನು ಎಂದೂ ಮೀರುತ್ತಿರಲಿಲ್ಲ. ಆದರೆ ಅಧಿಕಾರದ ವಿಷಯದಲ್ಲಿ ಮಾತ್ರ ಅವರು ಎಂದಿಗೂ ಹೊಂದಾಣಿಕೆಗೆ ಬರುತ್ತಿರಲಿಲ್ಲ. ತಮ್ಮ ಇಂಥ ನಿಷ್ಠಾವಂತ ನಿಷ್ಠುರ ನಡತೆಯಿಂದ ಅಪ್ರಿಯರಾದರೂ ಚಿಂತೆಯಿಲ್ಲ, ಕರ್ತವ್ಯನಿಷ್ಠೆ ಮುಖ್ಯವೆಂಬ ನಿಲವು ಅವರದು.

ಮಹದೇವಯ್ಯನವರಿಗೆ ಚಿಕ್ಕನಾಯಕನಹಳ್ಳಿಯಿಂದ ದೂರದ ಊರಿಗೆ ವರ್ಗವಾಯಿತು. ಆದರೆ ಅಷ್ಟುದೂರ ಹೋಗುವುದಕ್ಕೆ ಅವರು ಒಪ್ಪದೆ ಎರಡು ತಿಂಗಳು ರಜೆ ಹಾಕಿದರು. ಎರಡು ತಿಂಗಳು ರಜೆ ಮುಗಿಯುವ ಹೊತ್ತಿಗೆ ಅವರನ್ನು ಬೆಂಗಳೂರುಜಿಲ್ಲೆಯ ಆನೇಕಲ್ ತಾಲ್ಲೂಕಿಗೆ ವರ್ಗಾಯಿಸಲಾಯಿತು. ಮಹದೇವಯ್ಯನವರು ಪುಸ್ತಕಗಳನ್ನು ವೀಣೆ ಪಿಟೀಲುಗಳನ್ನು ತಮ್ಮ ಮಕ್ಕಳಿಗಿಂತಲೂ ಹೆಚ್ಚು ಜೋಪಾನವಾಗಿ ನೋಡಿಕೊಳ್ಳುತ್ತಿದ್ದರು. ಆನೇಕಲ್ಲಿನಿಂದ ಬೆಂಗಳೂರಿಗೆ ವರ್ಗವಾಯಿತು. ಬೆಂಗಳೂರಿನಲ್ಲಿ ಡಿ.ಸಿ. ಆಫೀಸಿನ ಹೆಡ್ ಮುನಿಷಿಯಾಗಿ ಒಂದೂವರೆ ವರ್ಷ ಕಾರ್ಯನಿರ್ವಹಿಸಿದರು. ಅನಂತರ ಅಮಲ್ದಾರ್ ಆಗಿ ಬಡ್ತಿ ಪಡೆದರು. ನಂತರ ೧೯೫೭ರ ಆಗಸ್ಟ್ ೨ರಂದು ಎರಡನೆಯ ಬಾರಿಗೆ ಚಿಕ್ಕನಾಯಕನ ಹಳ್ಳಿಗೆ ವರ್ಗವಾಗಿ ಬಂದರು. ಈ ಸಲ ಅಮಲ್ದಾರರಾಗಿ ವರ್ಗವಾಗಿದ್ದರು. ಅಷ್ಟೆಲ್ಲ ಸರ್ಕಾರಿ ಕೆಲಸಗಳ ಒತ್ತಡದಲ್ಲೂ ಅವರು ತಮ್ಮ ಸೃಜನಶೀಲ ಪ್ರತಿಭೆಯನ್ನು ಉಳಿಸಿಕೊಂಡು ಬಂದದ್ದು ಒಂದು ಪವಾಡವೇ ಸರಿ. ಇಂಥ ಪರಿಸ್ಥಿತಿಯಲ್ಲೂ ಊರಿನ ಸಭೆ ಸಮಾರಂಭಗಳಲ್ಲಿ ಭಾಷಣಗಳಲ್ಲಿ ಮಾಡುತ್ತಿದ್ದರು.

ಕರ್ನಾಟಕ ಸಂಘಗಳು ಸದಾ ಕಾರ್ಯೋನ್ಮುಖವಾಗಿರುವಂತೆ ನೋಡಿಕೊಳ್ಳುತ್ತಿದ್ದರು. ಒಂದೂವರೆ ವರ್ಷದ ನಂತರ ಅವರಿಗೆ ಜುಲೈ ೧೯೫೮ರಲ್ಲಿ ಶಿಡ್ಲಘಟ್ಟಕ್ಕೆ ವರ್ಗವಾಯಿತು. ಇವರಿಗೆ ಶಿಡ್ಲಘಟ್ಟದಿಂದ ೧೯೫೯ರಲ್ಲಿ ರಾಮನಗರಕ್ಕೆ ವರ್ಗವಾಯಿತು. ಮಹದೇವಯ್ಯನವರು ಮೌನವಾಗಿದ್ದರೂ ಅವರ ವರ್ಚಸ್ಸಿನ ಪ್ರಭಾವದಿಂದ ತಪ್ಪಿಸಿಕೊಳ್ಳಲು ಯಾರಿಗೂ ಆಗುತ್ತಿರಲಿಲ್ಲ ಎಂಬುದಕ್ಕೆ ಇದೊಂದು ಉದಾಹರಣೆ. "ನನ್ನ ಮೌನದಲ್ಲಿ ಮಹಾಶಕ್ತಿಯಿದೆ, ಮಾತಿಗಿಂತ ಹೆಚ್ಚು ಕೆಲಸ ಮಾಡಬಲ್ಲುದು" ಎಂಬ ಅವರದೇ ಮಾತು ಇಲ್ಲಿ ಮನನೀಯ. ಮಹದೇವಯ್ಯನವರು ಕೆಲಸದಲ್ಲೆಷ್ಟು ಶಿಸ್ತು, ಪ್ರಾಮಾಣಿಕತೆ, ದಕ್ಷತೆಯನ್ನು ನಿರೀಕ್ಷಿಸುತ್ತಿದ್ದರೋ ಮನೆಯಲ್ಲೂ ಅಷ್ಟೇ ಪ್ರಾಮಾಣಿಕತೆ, ಶಿಸ್ತನ್ನು ನಿರೀಕ್ಷಿಸುತ್ತಿದ್ದರು.[೧೨]

ಜಾತೀಯತೆ ಮತ್ತು ರಾಜಕೀಯ ಕಾರಣಗಳಿಂದ ಮಹದೇವಯ್ಯನವರನ್ನು ಜಿಲ್ಲಾಧಿಕಾರಿಗಳ ಅಭಿಪ್ರಾಯದ ವಿರುದ್ಧ ಮಂತ್ರಿಗಳು ಶಿವಮೊಗ್ಗೆಗೆ ವರ್ಗಮಾಡಿದರು. ಇವರು ಒಳ್ಳೆಯ ಪ್ರವಾಸಪ್ರಿಯರು, ದೊರೆತ ಅವಕಾಶವನ್ನು ಉಪಯೋಗಿಸಿಕೊಂಡು ಮನೆಮಂದಿಯನ್ನೆಲ್ಲ ಕರೆದೊಯ್ದು ಪ್ರವಾಸಮಾಡಿ ಬರುತ್ತಿದ್ದರು. "ಕಡಲ ಕರೆಗೆ" ಎಂಬ ಉತ್ತಮ ಪ್ರವಾಸ ಲೇಖನವೊಂದನ್ನು ಅವರು ಬರೆದಿದ್ದಾರೆ.

ಶಿವಮೊಗ್ಗೆಯಲ್ಲಿದ್ದಾಗ ಅವರು ತಮ್ಮ ಪತ್ನಿಯೊಡನೆ ಮುಂಬಯಿಗೆ ಪ್ರವಾಸ ಕೈಗೊಂಡರು. ಮುಂಬಯಿಯ ಬಿಸಿಲು ಅವರ ಆರೋಗ್ಯದ ಮೇಲೆ ವಿರುದ್ಧ ಪರಿಣಾಮ ಬೀರಿತು. ಈ ವೇಳೆಗಾಗಲೇ ಸ್ವಲ್ಪ ಡಯಾಬಿಟಿಸ್ ಸಹ ಅವರಿಗಿತ್ತು. ಮುಂಬಯಿಯಿಂದ ಬಂದ ಮೇಲೆ ಅವರ ಆರೋಗ್ಯ ಕೆಡುತ್ತ ಬಂದಿತ್ತು. ಡಾಕ್ಟರರ ಸಲಹೆಯಂತೆ ಅವರು ವಿಶ್ರಾಂತಿ ಪಡೆಯಲು ಒಂದು ತಿಂಗಳು ರಜೆ ಹಾಕಿ ಸೋಮವಾರಪೇಟೆಗೆ ಬಂದರು. ಎಸ್ಟೇಟಿನ ಪ್ರಕೃತಿ ಸೌಂದರ್ಯ ಅವರ ಕವಿ ಹೃದಯವನ್ನು ಸೂರೆಗೊಂಡಿತ್ತು. ಆ ಅವಧಿಯಲ್ಲಿ ಅಂದರೆ ಏಪ್ರಿಲ್ ಮೂರನೇ ತಾರೀಖು ಅವರು ಕೆಲವು ಗದ್ಯಕವನಗಳನ್ನು ಬರೆದರು.

"ಪ್ರತಿನಿತ್ಯ ಪ್ರತಿಕ್ಷಣ ಯಾರಿಗಾಗಿಯೋ ನಾನು ದಾರಿಕಾಯುತ್ತ ಕುಳಿತಿರುವೆ. ಬಂದು ಹೋಗುವ ಪಾಂಥಿಕರ ಗುಂಪಿನಲ್ಲಿ ಆರದೋ ವಂಚಿತಮುಖಕ್ಕಾಗಿ ಕಾತರಿಸುತ್ತಿರುವೆ." ಎಂಬ ಅವರ ಗದ್ಯದ ಸಾಲುಗಳಲ್ಲಿ ಸಾವಿನ ನಿರೀಕ್ಷಣೆಯ ಸುಳುಹು ಕಾಣಬಹುದು. ೪ನೇ ತಾರೀಖಿನಂದು ಆಸ್ಪತ್ರೆಗೆ ದಾಖಲಾದರು. ಮತ್ತೆ ಮೂರೇ ದಿನಗಳಲ್ಲಿ ೬.೪.೧೯೬೧ರಂದು ಆಸ್ಪತ್ರೆಯಲ್ಲಿ ಶಸ್ತ್ರಚಿಕಿತ್ಸಾ ಕೋಣೆಗೆ ಕರೆದೊಯ್ಯುತ್ತಿದ್ದಾಗ ಹೃದಯಾಘಾತದಿಂದ ಮರಣ ಹೊಂದಿದರು.[೧೩]

ಮಹದೇವಯ್ಯನವರು ಮರಣ ಹೊಂದಿದಾಗ ಅವರ ಬಳಿಯಲ್ಲಿ ಇದ್ದದ್ದು ಕೇವಲ ಎಂಟುನೂರು ರೂಪಾಯಿಗಳು ಮಾತ್ರ. ಅವರು ಬಿಟ್ಟುಹೋದ ಆಸ್ತಿಯೆಂದರೆ ಅವರ ಅಪಾರವಾದ ಪುಸ್ತಕ ಭಂಡಾರ ಮತ್ತು ಸ್ವರಚಿತ ಕೃತಿಗಳು; ಒಂದು ನಿವೇಶನ ಇಷ್ಟೇ. ಅವರು ಸರ್ಕಾರದಲ್ಲಿ ಉನ್ನತ ಅಧಿಕಾರಿಯಾಗಿದ್ದುಕೊಂಡು ತಮ್ಮ ಜೀವನದಲ್ಲಿ ದುಡಿದು ಉಳಿಸಿದ್ದು ಬಹಳ ಕಡಿಮೆ. ಮಹದೇವಯ್ಯನವರು ಹೃದಯಾಘಾತದಿಂದ ಅಕಾಲ ಮರಣನ್ನಪ್ಪಿದ್ದರು. ಅವರ ಮರಣದಿಂದ ಕನ್ನಡ ಸಾಹಿತ್ಯಕ್ಕೆ ಅಪಾರ ನಷ್ಟವಾಗಿದೆ. ಎಂಬ ಮಾತು ಇಂದು ಕ್ಲೀಷೆಯಾಗಿ ತೋರಬಹುದು. ಮಹದೇವಯ್ಯನವರು ಬರೆಯಬೇಕೆಂದು ಯೋಜಿಸಿದ್ದ ಕೃತಿಗಳ ಸಂಖ್ಯೆ, ಆ ವಿಷಯ ವಿಸ್ತಾರ, ವೈವಿಧ್ಯತೆಯನ್ನು ಗಮನಿಸಿದಾಗ ಅಷ್ಟನ್ನು ಪಡೆಯುವ ಭಾಗ್ಯ ಕನ್ನಡ ಸಾಹಿತ್ಯ ಪ್ರೇಮಿಗಳಿಗೆ ಇಲ್ಲವಾಯಿತಲ್ಲಾ ಎಂಬ ಕೊರಗು. ಮಹದೇವಯ್ಯನವರ ಅಪ್ರಕಟಿತ ಅಮೂಲ್ಯ ಕೃತಿಗಳನ್ನು ಪ್ರಕಟಿಸಿ ಸಾಹಿತ್ಯ ಪ್ರೇಮಿಗಳು ಮಹದೇವಯ್ಯನವರನ್ನು ಮರೆಯದಂತೆ ಮಾಡಿದವರು ಮಹದೇವಯ್ಯನವರ ಅಳಿಯಂದಿರಾದ ತುಮಕೂರು ಶ್ರೀ.ಬಿ.ವೀರಭದ್ರಯ್ಯನವರು.[೧೪] ಸೋಮವಾರಪೇಟೆಯಲ್ಲಿ ಗುಪ್ತವಾದ ಟ್ರಂಕುಗಳಲ್ಲಿ ಮಹದೇವಯ್ಯನವರ ಅಪ್ರಕಟಿತ ಕೃತಿಗಳನ್ನು ಅವರು ಪತ್ತೆಮಾಡಿ ಒಂದೊಂದಾಗಿ ಪ್ರಕಟಿಸುವ ಸಾಹಸಮಾಡಿದರು. ಆ ಕಾರ್ಯವನ್ನು ಅವರು ಮಾಡದಿದ್ದಲ್ಲಿ ಇಂದು ನಾವು ಮಹದೇವಯ್ಯನವರನ್ನು ಮರೆತುಬಿಡುತ್ತಿದ್ದೆವು. ಅದೊಂದು ಏಕವ್ಯಕ್ತಿ ಸಾಹಸ. ತಮ್ಮ ಮಾವನವರ ಕೃತಿಗಳನ್ನು ಹೊರತರುವ ಉತ್ಸಾಹದಲ್ಲಿ ಅವರು ಸಾಲಮಾಡಿ ಕಷ್ಟಗಳನ್ನು ಮೈಮೇಲೆ ತಂದುಕೊಂಡರು. ಪ್ರಕಟಣೆಯ ಒಂದು ದಿವ್ಯಮಣಿಹದಲ್ಲಿ ಸಾರ್ಥಕ್ಯವನ್ನು ಕಂಡುಕೊಂಡ ಒಂದು ಅಪರೂಪದ ಜೀವ ಪ್ರೊ. ಬಿ. ವೀರಭದ್ರಯ್ಯನವರು. ಮಾವನವರ ಸಾಹಿತ್ಯದ ಉಳಿವಿಗಾಗಿ ಅವರು ಪಟ್ಟ ಶ್ರಮವನ್ನು ಅವರ ನಿಕಟವರ್ತಿಗಳು ಬಲ್ಲರು. ಇಂದು

ಟಿ.ಎನ್. ಮಹದೇವಯ್ಯನವರ ಸಮಗ್ರ ಕವಿತೆಗಳು, ನಾಟಕಗಳು, ಬಿಡಿಬರಹಗಳು ಅವರ ಅವಿರತ ಶ್ರಮದ ಫಲವಾಗಿ ಬೆಳಕುಕಂಡಿವೆ. ಓರ್ವ ಸಾಹಿತ್ಯಾಭಿಮಾನಿಯಾಗಿ ಟಿ.ಎನ್. ಮಹದೇವಯ್ಯನವರ ಸಾಹಿತ್ಯಸಿರಿಯನ್ನು ಗುರುತಿಸಿ, ಅದನ್ನು ಉಳಿಸಲು ಅವಿರತ ಪ್ರಯತ್ನ ನಡೆಸಿ ಅವರು ಕೀರ್ತಿಶಾಲಿಗಳಾದರು; ಮಹದೇವಯ್ಯನವರ ಹೆಸರನ್ನು ಉಳಿಸಿದರು.[೧೪] ಈ ಬಗೆಯ ಸಾಹಸಪ್ರವೃತ್ತಿ ಇಂದಿನ ದಿನಮಾನಗಳಲ್ಲಿ ಕಾಣುವುದು ಬಹಳ ಅಪರೂಪ.

■■

೩

# ಟಿ.ಎನ್. ಮಹದೇವಯ್ಯನವರ ಕವನಗಳು

ಟಿ.ಎನ್. ಮಹದೇವಯ್ಯನವರಿಗೆ ಪ್ರತಿಭೆಯಿದ್ದೂ ಅಕಾಲಿಕ ಮರಣದಿಂದಾಗಿ ಅವರ ಕಾವ್ಯ ಸರಿಯಾದ ಕಾಲದಲ್ಲಿ ಸಹೃದಯಿಗಳಿಗೆ ತಲುಪಲೇ ಇಲ್ಲ. ಶ್ರೀ ಟಿ.ಎನ್. ಮಹದೇವಯ್ಯನವರು ನವೋದಯ ಕಾಲದ ಎಲ್ಲ ಪ್ರಕಾರದ ಸಾಹಿತ್ಯ ಸೇವೆಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಆದರೆ ಪ್ರಚಾರಪ್ರಿಯರಾಗದೆ ತೆರೆಯ ಹಿಂದೆ ನಿಂತು ಸಾಹಿತ್ಯ ಸೇವೆ ಮಾಡಿದುದರಿಂದ ನವೋದಯದ ಸಂದರ್ಭದ ಕವಿಗಳ ಸಾಲಿನಲ್ಲಿ ಅವರು ಕಾಣಿಸಿಕೊಳ್ಳದೆ ತುಂಬ ನಿರ್ಲಕ್ಷ್ಯಕ್ಕೆ ಗುರಿಯಾದಂತೆ ತೋರುತ್ತದೆ. ಅವರ ನಿರಂತರ ಅಧ್ಯಯನ, ಮನನ ನಿಧಿಧ್ಯಾಸನಗಳು ಅನುಕರಣೀಯ. ಆ ಅವಧಿಯಲ್ಲಿ ತಮ್ಮದೇ ಆದ ಅಭಿವ್ಯಕ್ತಿ ಕ್ರಮವನ್ನು ಕಂಡುಕೊಂಡು ಪ್ರಾಮಾಣಿಕ ವ್ಯವಸಾಯ ಮಾಡಿ ಒಂದು ಘಟ್ಟವನ್ನು ಮುಟ್ಟಿದ್ದರು. ಪ್ರಧಾನವಾಗಿ ಶ್ರೀ ಕುವೆಂಪು ಅವರ ಛಂದೋಮಾರ್ಗದ ಪ್ರಭಾವಕ್ಕೆ ಒಲಿದಿದ್ದಂತೆ ತೋರಿದರೂ ತಮ್ಮೊಳದನಿಗೆ ತಮ್ಮದೇ ಆದ ಮಾರ್ಗ ಕಂಡುಕೊಂಡರು. ಭಾವಗಳಲ್ಲಿ ಒಮ್ಮೊಮ್ಮೆ ಮೊದಲ ನೋಟಕ್ಕೆ ರವೀಂದ್ರರ, ಕುವೆಂಪು ಅವರ ನೆನಪನ್ನುಂಟುಮಾಡಿದರೂ ಒಟ್ಟಾರೆ ಅವರದೇ ಆದ ಕನ್ನಡಕ್ಕೆ ಕೊಡುಗೆಯಾಗಬಹುದಾದ ಸತ್ವಶಾಲಿ ಸಾಹಿತ್ಯ ನಿರ್ಮಿತಿಯನ್ನು ಕಾಣುತ್ತೇವೆ.

ನಂದಕಿಶೋರ, ವಸಂತಕುಮಾರ ಎಂಬ ಕಾವ್ಯನಾಮದಿಂದ ಶ್ರಿಯುತ ಟಿ.ಎನ್. ಮಹದೇವಯ್ಯನವರು ತಮ್ಮ ಶಾಲಾದಿನಗಳಲ್ಲೇ ಒಳ್ಳೆಯ ಕವಿತೆಗಳನ್ನು ಬರೆದರು. ೧೯೩೩ರ ವೇಳೆಯಲ್ಲಿ ಬರೆದಿರುವ ಅನೇಕ ಒಳ್ಳೆಯ ಕವಿತೆಗಳು ಅವರ ಹೊತ್ತಿಗೆಯಲ್ಲಿ ಕಂಡುಬರುವವು. ಇವರ ಕವನದ ಹರವು, ಶಿಶುಗೀತೆ, ಭಕ್ತಿಗೀತೆ, ಪ್ರಣಯಗೀತೆ, ಪ್ರಕೃತಿಗೀತೆ, ಸಾಮಾಜಿಕಗೀತೆಗಳನ್ನೆಲ್ಲಾ ಒಳಗೊಂಡಿದೆ. ಪ್ರಧಾನತಃ ಸೌಮ್ಯಭಾವದ, ನಮ್ರಭಾವದ ಕೋಮಲ ಕವಿತೆಯಂತೆ ಕಂಡರೂ ಧೀರಭಾವಗಳನ್ನು ತಾಳಿಕೊಳ್ಳಬಲ್ಲರೆಂಬುದನ್ನು ನಾವು ಗಮನಿಸಬಹುದು. ಸಾಮಾಜಿಕ, ಧಾರ್ಮಿಕ ವಿಷಯಗಳಲ್ಲಿ ಕೆಲವೊಮ್ಮೆ ರೋಷಕ್ಕೂ ಉಕ್ತಿ ನೀಡಬಲ್ಲರು. ಆದರೆ ಕುಹಕ ವ್ಯಂಗ್ಯ ವಿಡಂಬನೆಗಳಿಗೆ ಈ ಕವಿಯ ಮನೋಧರ್ಮ ದೂರವಾಗಿಯೇ ಇರುವಂತೆ ಕಾಣುತ್ತದೆ.

ಕವಿಯ ಮನಸ್ಸು ಕೆಲವೊಮ್ಮೆ ಭವ್ಯತಾ ವಿಹಾರಿಯಾಗುವುದನ್ನು ಸದಾ ಶಿವಾಕಾಂಕ್ಷಿಯಾಗಿರುವುದನ್ನು ನೋಡುತ್ತೇವೆ.

ಶ್ರೀಯುತರು ಪ್ರಕಟಣೆ, ಪ್ರಶಂಸೆ, ಪ್ರಶಸ್ತಿಗಳನ್ನು ಅರಸದೆ ತೋರಿದ ಸಂಯಮವನ್ನು ಮುಕ್ತಕಂಠದಿಂದ ಹೊಗಳಿರುವ ಸುಜನಾರವರು ಆ ಉತ್ಕಟ ಸಂಯಮದಿಂದಾಗಿ ಕವಿಗೆ ಸಹೃದಯರಿಗೆ ಆದ ನಷ್ಟವನ್ನು ಗುರುತಿಸಿದ್ದಾರೆ.[೧]

"ಅಂದಿನ ಪ್ರಮುಖ ಕವಿಗಳಲ್ಲಿ ಒಬ್ಬರಾಗಿ ಬೆಳೆಯಬಹುದಾಗಿದ್ದ ಪ್ರತಿಭೆಯೊಂದನ್ನು ಗುರುತಿಸುವ ವಿದ್ವದ್ವರ್ಗ ಈ ಭಾವಜೀವಿಯ ಪಾಲಿಗೆ ಇಲ್ಲದೆ ಹೋದುದನ್ನು ಇಂದಿನ ವಿಮರ್ಶಕ ಗುರುತಿಸಬಲ್ಲ" ಎಂದು ಚೆನ್ನವೀರ ಕಣವಿಯವರೂ ಆ ಮಾತಿಗೆ ದನಿಗೂಡಿಸಿರುವರು.[೨]

ಪ್ರೊ. ಅ.ರಾ. ಮಿತ್ರ ಅವರ ಸಂಪಾದಕತ್ವದಲ್ಲಿ "ಟಿ.ಎನ್. ಮಹದೇವಯ್ಯನವರ ಆಯ್ದ ಕವಿತೆಗಳು" ಹೊರ ಬಂದಿದ್ದು (೨೦೦೪) ಅವರು ಟಿ.ಎನ್. ಮಹದೇವಯ್ಯನವರ ಕವಿತೆಗಳನ್ನು (೧) ಸ್ವಾನುಭವಲೋಕ, (೨) ಕನ್ನಡಲೋಕ, (೩) ಕಾವ್ಯಕರ್ಮಲೋಕ, (೪) ತೌಲನಿಕಲೋಕ, (೫) ಪ್ರೇಮಲೋಕ, (೬) ಪ್ರಕೃತಿಲೋಕ, (೭) ಶಿಶುಲೋಕ, (೮) ಕಥನಲೋಕ, (೯) ಶೋಕಲೋಕ, (೧೦) ವಿಚಾರಲೋಕ, (೧೧) ವ್ಯಕ್ತಿಲೋಕ, (೧೨) ಮಹಿಳಾಲೋಕ, (೧೩) ಸಂಕೀರ್ಣಲೋಕ, (೧೪) ಗೀತಲೋಕ ಎಂದು ವಿಂಗಡಿಸಿಕೊಂಡಿರುವರು.[೩] ಟಿ.ಎನ್. ಮಹದೇವಯ್ಯನವರ ಕಾವ್ಯದ ಅಂತಃಸತ್ವವನ್ನು ವಿಮರ್ಶಾಪ್ರಜ್ಞೆಯ ಕೇಂದ್ರವಲಯದಲ್ಲಿಟ್ಟುಕೊಂಡು ಅವರ ಕಾವ್ಯದ ಗ್ರಹಿಕೆಗೆ ಅನುಕೂಲವಾಗುವ ವಿಂಗಡಣಾಕ್ರಮವನ್ನು ಅವರು ಮಾಡಿರುವರು. ಅದು ಎಲ್ಲ ದೃಷ್ಟಿಯಿಂದಲೂ ಸಮರ್ಪಕವಾಗಿ ತೋರಿದ್ದರಿಂದ ನಾನು ಆ ವಿಭಾಗಕ್ರಮವನ್ನು ಒಪ್ಪಿ ಸ್ವೀಕರಿಸಿರುವೆನು. ಟಿ.ಎನ್. ಮಹದೇವಯ್ಯನವರ ಕವಿತೆಗಳು ಕನ್ನಡೇತರ ಕವಿಗಳ (ವಿಶೇಷವಾಗಿ ರವೀಂದ್ರರ), ಪಾಶ್ಚಾತ್ಯ ಕವಿಗಳ ಪ್ರೇರಣೆ ಪಡೆದಿವೆ. ಕೆಲವು ಕವಿತೆಗಳು ಭಾವಾನುವಾದವಾಗಿವೆ. ಅವರ ಕವಿತೆಗಳ ಮೇಲೆ ಅನ್ಯಪ್ರಭಾವವನ್ನು ಗುರುತಿಸುವ ಹಿನ್ನೆಲೆಯಲ್ಲಿ ನಾನು 'ಅನುವಾದಿತ ಕವನಗಳು' ಎಂಬ ಮತ್ತೊಂದು ವಿಭಾಗವನ್ನು ಹೊಸದಾಗಿ ಸೇರಿಸಿರುವೆನು.

## ಸ್ವಾನುಭವದ ಲೋಕ

ಕವಿಯೊಬ್ಬನ ಕಾವ್ಯಸೃಷ್ಟಿಯಲ್ಲಿನ ಅನನ್ಯತೆಗಳನ್ನು ಗುರುತಿಸುವಾಗ ಸಹೃದಯನಿಗೆ ಕವಿಯ ಬಗೆಗೆ ಸಹಜವಾದ ಕುತೂಹಲ ಕೆರಳುವುದು. ಕವಿಯ ವೈಯಕ್ತಿಕ ಜೀವನದ ವಿವರಗಳ ಜೊತೆಗೆ ಕವಿಗೆ ಒದಗಿದ ಅನುಭವಗಳಿಗೆ ಪ್ರೇರಣೆ-ಪ್ರಭಾವಗಳು ಎಲ್ಲಿಂದ, ಯಾರಿಂದ ಬಂದವು ಎಂಬುದರ ಬಗೆಗೆ ತಿಳಿಯಬಯಸುತ್ತಾನೆ. ಕವಿ ನಮ್ಮ ನಡುವೆ ಇದ್ದಾಗ ಕವಿಯ ಮೂಲಕ ವಿವರಗಳನ್ನು ನಾವು ಪಡೆಯಬಹುದು. ಕವಿ ಕಾಲವಶನಾಗಿದ್ದಾಗ ಅವನ ಬಗೆಗೆ ನಾವು ಕುಟುಂಬದ ಸದಸ್ಯರು, ಬಂಧು-ಮಿತ್ರರುಗಳ ಮೂಲಕ ವಿವರಗಳನ್ನು ಕಲೆಹಾಕಬಹುದು. ಇಲ್ಲವೆ ಅವನ ಕಾವ್ಯದಲ್ಲಿ ಅಂತರ್ಗತವಾಗಿರುವ ವೈಯಕಿಕ ಬದುಕಿನ

ಎಳೆಗಳನ್ನು ನಾವು ಗುರುತಿಸಬಹುದು. ಸ್ವತಃ ಕವಿಯೇ ತನ್ನ ಬಗ್ಗೆ, ತನ್ನ ಬದುಕಿನ ಬಗ್ಗೆ ಹೇಳಿಕೊಂಡಿರುವ ವಿವರಗಳು ಬಹಳ ಮುಖ್ಯವಾಗುತ್ತವೆ. ಏಕೆಂದರೆ, ಕವಿಗೆ ಬದುಕು ಉಣಿಸಿದ ಸುಖ-ದುಃಖಗಳು ಅವನ ಅಂತರಂಗದ ಮಿಡಿತಗಳಾಗಿದ್ದು ಅವನ ನಿರೂಪಣೆಯಲ್ಲಿ ಅವು ಸಹಜವಾಗಿ ಅಭಿವ್ಯಕ್ತಿ ಪಡೆದುಕೊಳ್ಳುತ್ತವೆ.

ತಿಪಟೂರು ಟಿ.ಎನ್. ಮಹದೇವಯ್ಯನವರು ಆಡಿ, ಬೆಳೆದ ಸ್ಥಳ. 'ನಮ್ಮೂರು' ಎನ್ನುವ ಕವಿತೆಯಲ್ಲಿ ತಮ್ಮ ಬಾಲ್ಯ ಕಳೆದ ಆ ಊರಿನ ಪ್ರಾಕೃತಿಕ ಸೊಬಗನ್ನು ಅಲ್ಲಿ ಕಳೆದ ಮರೆಯಲಾಗದ ದಿನಗಳನ್ನು ಭಾವುಕರಾಗಿ ಆ 'ಹೊನ್ನ ಕನಸಿನ ಚಿತ್ರ'ವನ್ನು ನೆನೆದಿರುವರು. ಅವರ ಸಾರ್ಥಕ ಕವಿತೆಗಳಲ್ಲಿ ಇದೂ ಒಂದು:

ತೂಗು ತೆಂಗಿನಸಾಲು ಬೀಸುತಿಹ ಎಳೆಬಾಳೆ
ಊರ ಮುಂಗಡೆ ಬಾಗಿ ಹರಿಯುತಿಹ ತೊರೆ ನೀರು
ನಮ್ಮ ಗುಡಿಸಲು ಸುತ್ತ ನನ್ನ ಗೆಳೆಯರ ನೆರವು
ಹೊನ್ನ ಕನಸಿನ ಚಿತ್ರ ಹಾಯಾಗಿ ಮೂಡುತಿದೆ!

ಏರುತಿಹ ಹೊಳೆಯಂತೆ ತುಂಬು ಹರೆಯದ ಹೆಣ್ಣು
ಗಡಿಗೆ ನೀರನ್ನು ತುಂಬಿ ಹೊತ್ತು ನಡೆಯಲು ಮನೆಗೆ
ನಡೆದು ನಡೆಯದ ನಡಿಗೆ ಊರಿನವಳೇ ಕಣ್ಣು
ಹಳ್ಳಿ ಹೆಂಗಸರಲ್ಲಿ ಚೆಲುವೆ ಮರೆಯದ ಹೆಣ್ಣು.

ಬಯಲ ಬೆಳದಿಂಗಳಲಿ ಅಣ್ಣ ಅಕ್ಕರು ನೆರೆದು
ತಿಂಗಳಿನ ಸವಿಯೂಟ ಮುಗಿಸಿ ಮರೆಯುವ ಮುಂಚೆ
ಅಜ್ಜಿ ಕತೆ ಹೇಳುವಳು ಮುಗಿಲ ಚಿಕ್ಕಿಗು ಚೆನ್ನ
ತಂಗಾಳಿ ತೆರೆಗಿಂತ ಇಂಪು ಕಥನದ ಸುದ್ದಿ.

ಬೇಸಿಗೆಯ ಬಯಲಲ್ಲಿ ತೂಕಡಿಪ ಸಾಲುಮನೆ
ಮುಂಜಾನೆ ಮಂಜಿನಲ್ಲಿ ಹೊದ್ದು ಮರೆತಾ ಬೀದಿ
ಬೆಳಗು ಬೈಗನು ತುಂಬಿ ಅಂಬಾ ಎಂದಲೆಯುವಾ
ನಮ್ಮೂರ ದನಕರುವು ನನಗೆ ಹಿಂದಿನ ಕನಸು! [೪]

ಟಿ.ಎನ್. ಮಹದೇವಯ್ಯನವರ "ಬದುಕು" ಎನ್ನುವ ಕವಿತೆ ಬಹಳ ಮಹತ್ವದ್ದು. ಬಡತನದ ಕುಟುಂಬವೊಂದರಲ್ಲಿ ಕವಿ ಜನಿಸಿದರು. ಅವರ ತಾಯಿಯು

ಎನ್ನ ಜೀವದ ಹೂವು ಎನ್ನ ಬದುಕಿನ ಬೆಳಸು
ಎನ್ನಸುವು, ಎನ್ನುಸಿರು, ಇದೊ ನನ್ನ ಕಣ್ಮಣಿಯು
ಎಂದೆತ್ತಿ ಮುದ್ದಾಡಿ ಇದೆ ನನ್ನ ಮುದ್ದುಮರಿ
ಇದೆ ನನ್ನ ನಚ್ಚುಮರಿ ಇದೆ ನನ್ನ ಸರ್ವಸ್ವ [೫]

ಎಂದು ತಮ್ಮ ಪ್ರೀತಿಯ ಧಾರೆ ಹರಿಸಿದರು. ಕವಿಯ ದೌರ್ಭಾಗ್ಯವೋ ಏನೋ ಆ ತಾಯಿಯ ಹಿಗ್ಗು, ನಲಿವು ಕವಿಗೆ ಹೆಚ್ಚು ಕಾಲ ದಕ್ಕಲಿಲ್ಲ. ಐದು ವರುಷದ ತನಕ ಸಾಕಿ ಸಲಹಿದ ಆ ಮಮತಾಮಯಿ ಕಣ್ಮುಚ್ಚಿದರು. ಅವರನ್ನು ಹೂಳಿದೆಡೆಯಲ್ಲಿ ಕಂಪುಬೀರುವ ಸಂಪಿಗೆಯ ಮರವೊಂದು ಬೆಳೆದಿದೆ. ಅದರ ಹೂಮುಡಿದು ಊರಿನ ತಾಯಿಯರೆಲ್ಲ ಸತ್ತು ಸುಗಂಧವಾದ ಆ ತಾಯಿಯ ಸ್ಮರಣೆ ಮಾಡುವರು, ಸತ್ತು ಸ್ವರ್ಗವನ್ನು ಸೇರಿದ ಅವಳನ್ನು ಹರಸುವರು.

ತಾಯಿಯ ಸ್ಥಾನವನ್ನು ಆನಂತರದ ದಿನಗಳಲ್ಲಿ ತುಂಬಿದವರು ಅಜ್ಜಿ-ಅತ್ತೆಯರು, ಅವರು ಕವಿಯನ್ನು ಬಾಲ್ಯದಲ್ಲಿ ತಬ್ಬಲಿ ಮಗುವೆಂದು ತಾಯಿ ಕಾಣದ ಕೂಸೆಂದು ಎತ್ತಿ ಮುದ್ದಾಡಿದರು. ಹಾಲುಣಿಸಿದರು. ಅವರು ಆ ಮಗುವನ್ನು ಎಷ್ಟು ಎಚ್ಚರದಿಂದ ಬೆಳೆಸಿದರೆಂದರೆ, ಮಗು ಎಲ್ಲಿ ತಾಯಿಯ ನೆನಪಿನಲ್ಲಿ ಬಾಡುವುದೋ, ಬೆದರಿ ಬೆಚ್ಚುವುದೊ, ಗಾಳಿ-ಮಳೆಗಳಿಗೆ ಅಳುಕುವುದೊ ಎಂದು ತಮ್ಮ ಪ್ರೀತಿಯ ಕಾಪಿನಲ್ಲಿ ಬೆಳೆಸಿದರಂತೆ. ದುರದೃಷ್ಟಕ್ಕೆ ಕವಿಯ ಪಾಲಿಗೆ ತಾಯಿಯ ಅಕ್ಕರೆಯನ್ನು ತಮ್ಮ ಲಾಲನೆ ಪಾಲನೆಯಲ್ಲಿ ನೀಡಿದ್ದ ಆ ಅಜ್ಜಿ-ಅತ್ತೆಯರೂ ಹೆಚ್ಚುಕಾಲ ಬದುಕಲಿಲ್ಲ. ನೃಶಂಸ ವಿಧಿ ಅವರನ್ನು ನಿರ್ದಾಕ್ಷಿಣ್ಯದಿಂದ ಎಳೆದೊಯ್ದಿತು. ವಿಧಿಯ ಕ್ರೂರ ಲೀಲೆಯನ್ನು ಕವಿ "ಸುಳಿದ ಶಿಶಿರದ ಗಾಳಿ ಮೃತ್ಯುಪಾಶವನೆಸೆದು ಕೊಂಡೊಯ್ದು ಮಲಗಿಸಿತು" ಎಂದು ವರ್ಣಿಸಿರುವರು.[೬] ಹತ್ತು ತುಂಬುವ ಮುನ್ನ ಕವಿ ಮತ್ತೆ ತಬ್ಬಲಿಯಾದರು.

ವಿಧಿಯ ವಿಕಟಲೀಲೆಯ ಪರಿಣಾಮವಾಗಿ ಕವಿಯ ಬಾಲ್ಯದಲ್ಲಿ ಅವರಿಗೆ ಆಸರೆಯಾಗಿ ನಿಂತ ಮೂರನೆಯವರೆಂದರೆ ಕವಿಯ ತಂದೆ, ಅವರ ಪ್ರೀತಿಯ ತಣ್ಪು, ಮಾಧುರ್ಯಗಳು "ಬದುಕು" ಕವಿತೆಯಲ್ಲಿ ಹೃದಯಸ್ಪರ್ಶಿಯಾಗಿ ಬಂದಿದೆ. ಮಗನ ಶ್ರೇಯಸ್ಸಿಗಾಗಿ ತುಡಿದ ಆ ಜೀವ ಸಂಪೂರ್ಣವಾಗಿ ತನ್ನನ್ನು ಅರ್ಪಿಸಿಕೊಂಡಿತು. ಮಗನ ಸಂತಸದಲ್ಲೇ ತನ್ನದನ್ನು ಕಂಡುಕೊಂಡ ಆ ತಂದೆ ತಮ್ಮ ಸ್ವಂತ ಸುಖವನ್ನು ಮಗನಿಗಾಗಿ ತ್ಯಾಗಮಾಡಿದರು. ಆ ಪ್ರೀತಿಯಲ್ಲಿ ಎಂತಹ ತ್ಯಾಗವಿದೆ ನೋಡಿ:

ಎರೆವಾಗ ಬೆರೆವಾಗ ತಿರಿದುಂಡು ನಲಿವಾಗ
ನನ್ನ ಮುಂದಿನ ಬೆಳಸು ಎನ್ನ ಹೆಸರಿನ ಚಿಗುರು
ಎನ್ನ ವಂಶದ ಸೌಧಕಿವರೆ ಹೊಂಗಳಸವೆನೆ
ಕಷ್ಟ ಕಾರ್ಪಣ್ಯದಲ್ಲಿ ದುಃಖ ದುಗುಡಗಳಲ್ಲಿ
ಎನ್ನ ಮಗು ನೋಯದಿರಲೆನ್ನ ಬಗೆ ಬೆಂದರೂ
ಎಂದು ಕಣ್ಣೀರಿಟ್ಟ, ತೋರಿಕೆಯ ನಗೆ ಸೂಸಿ
ಹೃದಯ ಹಿಂಡಿದ ರಕ್ತ ನರನಾಡಿ ದುಗುಡವನ್ನು
ಸಹಿಸಿ ಶಿಲೆಯಂತಿರ್ದ ಎದೆಬಾಚಿ ಬದುಕಿದನು[೭]

ಕಾಡುವ ದೈವಕ್ಕೆ ಅದೇನು ಮುಳಿಸೋ ! ಆ ಪ್ರೀತಿಯ ತಂದೆಯೂ ಒಂದು ದಿನ ಕಣ್ಮುಚ್ಚಿದರು "ಕತ್ತಲಲ್ಲಿ, ಕೈ ಬಿಟ್ಟು ಕಣ್ಮುಚ್ಚಿ ಮಲಗಿದನು. ಹಾರಲರಿಯದ ಹಕ್ಕಿ ಗೂಡಿನೊಳಗಿರುವಾಗ ತಾಯಿ ಮಡಿದಂತಾಯ್ತು!"

ಎಂದು ಆ ಸಂದರ್ಭದ ದಾರುಣತೆಯನ್ನು, ಮುಂದುಗಾಣದ ಕತ್ತಲೆಗವಿದ ಕವಿಯ ಬಾಲ್ಯದ ಆ ದಿನದ ಕರುಳಿರಿಯುವ ಚಿತ್ರವನ್ನು "ಶೂನ್ಯವಾಯಿತು ಬದುಕು" ಎಂಬ ಮಾತಿನಲ್ಲಿ ಧ್ವನಿಪೂರ್ಣವಾಗಿಸಿರುವರು. "ಮೂರುಜೀವದ ಬಲಿಗೆ ರೋಸಿಹೋಯಿತು ಜೀವ! ಮನೆಯ ದೇವರ ಹಣತೆ ನಂದಿ ಹೊಗೆ ತುಂಬಿತ್ತು". ಕವಿಯನ್ನು ಬೆಳೆಸಿದ ಈ ತಂದೆಯ ಸಮಾಧಿಯ ಮೇಲೆ ಗಿಡವೊಂದು ಹುಟ್ಟಿಕೊಂಡು ತನ್ನ ಹೂವಿನ ಕಂಪನ್ನು ಎಲ್ಲೆಡೆ ಹರಡಿತಂತೆ! ಆಘಾತಗಳ ಮೇಲೆ ಆಘಾತ, ಜೀವ ರೋಸಿಹೋಗಿ ಬದುಕಿಯೂ ಸತ್ತಂತೆ ಇದ್ದಾಗ ಜೀವಕ್ಕೆ ಸಾಂತ್ವನದ ತಂಗಾಳಿಯಾಗಿ ಸುಳಿದವರು ಕವಿಯ ಕೈ ಹಿಡಿದ ಧರ್ಮಪತ್ನಿ. ಇದು ಕವಿಯ ಬದುಕಿನ ಇನ್ನೊಂದು ಹಂತ... ಹೊಸ ತಿರುವನ್ನು ತಂದ ಮಹತ್ವದ ಘಟ್ಟ.[೮]

ದೂರದ ತೌರಿನಲ್ಲಿ ಮಲೆನಾಡಿನ ಬನದಲ್ಲಿ ಇನ್ನೊಂದು ಜೀವ ಇವರಿಗಾಗಿ ಕಾದಿತ್ತು. "ಕಾರಿರುಳ ಗುಡಿಸಲಲ್ಲಿ ಹಣತೆ ಹಚ್ಚುವರಿಲ್ಲ ದೇವರೆದುರಿನ ದೀಪ ಎಂದು ನಂದಿತು ಅಂದೆ" ಎಂದು ನಿಟ್ಟುಸಿರುಬಿಡುವ ಹಂತದಲ್ಲಿ ಕತ್ತಲು ತುಂಬಿದ ಆ ಮನೆಗೆ ಶಾಂತಿಯನ್ನು ಹರಡಲು ಭಾಗ್ಯವಂತಳೊಬ್ಬಳ ಆಗಮನವಾಯಿತು ಎಂದು ಕವಿಯೇ ಹೇಳಿರುವರು.[೯] ಆ ಭಾಗ್ಯವಂತೆ ಬಂದು ಆ ದುಃಖದ ಮನೆಯಲ್ಲಿ ದೀಪ ಹಚ್ಚಿದಳು. ಕೈ ಹಿಡಿದಾಕೆಯ ಆಗಮನದಿಂದ "ಎಂದೊ ಆರಿದ ದೀಪ ಮತ್ತೆ ಬೆಳಗಿತು........ ಮನೆ ತುಂಬ ಮಂಗಳದ ಹಾಡಿನಿನಿದನಿ ತುಂಬಿ ಪಾಳುಮನೆ ಹುಲುಸಾಗಿ, ಒಲವಿನಿರವಾಯ್ತು". ಕವಿಯ ಮನಸ್ಸಿಗೆ ಸಂತಸದ ಕ್ಷಣಗಳು. ಕವಿಯೇ ಹೇಳುವಂತೆ-

ಸುಖದ ಕನಸಿನ ದಿನದಿ ಹಳೆಯ ನೋವನು ಮರೆತು
ಬಾಲಲೀಲೆಯ ಕಂಡು ಹೂಬಿಟ್ಟ ಮನೆಯೆಂದು
ಹಬ್ಬ ಹರಿದಿನಗಳಲಿ ತೆಂಗು ಮಾವಿನ ತಳಿರು
ಬಾಳೆ ಹೂವಿನ ಹರಕೆ ಮನೆಯನೋಲೈಸಿತ್ತು[೧೦]

ಆದರೆ ಕವಿಯ ಪಾಲಿಗೆ ಆ ಸಂತಸ ಬಹುಕಾಲ ಉಳಿಯಲಿಲ್ಲ. ಮತ್ತೆ ವಿಧಿ ಆ ಸುಖ ಸಂಸಾರದ ಮೇಲೆ ದಾಳಿಮಾಡಿತು. ಹೆಚ್ಚು ಕಾಲ ಪತ್ನಿ ಕವಿಯ ಬದುಕಿಗೆ ಆಸರೆಯಾಗಿ ನಿಲ್ಲಲಿಲ್ಲ. ಸಾಂಸಾರಿಕ ಬದುಕು ಹತ್ತು ವರ್ಷಗಳನ್ನು ದಾಟುವ ಮೊದಲೇ ಪತ್ನಿಯು ಗಂಡ-ಮಕ್ಕಳನ್ನು ಆಗಲಿ ಹೋದಳು. ಆ ಬಿರುಗಾಳಿಯ ಹೊಡೆತಕ್ಕೆ ಮನೆ ನುಚ್ಚು ನೂರಾಯ್ತು, ಮತ್ತೆ ಕವಿ ಕತ್ತಲೆಯ ಕೋಣೆ ಸೇರಿದರು. ಕಣ್ಣೀರ ಕಾಲುವೆ ಮನೆಯ ಸುತ್ತ ಹಬ್ಬಿತು. ತಬ್ಬಲಿಗಳಾದ ಮಕ್ಕಳನ್ನು ಸಾಕಿ ಸಲಹುವ ಜವಾಬ್ದಾರಿಯ ಕಾರ್ಯ ಮೈಮೇಲೆ ಬಿದ್ದಿತು. ಅದು ಹೊರಲಾಗದ ಹೊರೆ. ಆ ದಿನಗಳಲ್ಲಿ ಕವಿ ಮನಸ್ಸು ತಬ್ಬಲಿತನದಿಂದ ನರಳಿತು. ಆ ದುಃಖವನ್ನು ಮರೆಯಲು ಮಲೆನಾಡಿನ ಸುಂದರ ಪರಿಸರದಲ್ಲಿ ಶಾಂತಿಯನ್ನು ಅರಸಿತು. "ಹೊರಗೆಲ್ಲ ಶಾಂತಿಯಿರೆ, ಗಿಡಮರದ ಮಡಿಲಲ್ಲಿ ಶುಕಪಿಕದ ಕೊರಲಲ್ಲಿ ಶಾಂತಿ ಹುಡುಕಿದೆ ಬರಿದೆ" ಎಂದು ಕವಿ ನಿಟ್ಟುಸಿರು ಬಿಡುವರು.[೧೧]

ಕವಿಗೆ ಈ ಆಘಾತ ಬಲವಾದದ್ದು. ಅವನ ಹೃದಯ ಶೋಕಿಸುತ್ತದೆ. ಬಡತನದ ಕುಟುಂಬದ ಸ್ಥಿತಿ, ತಾಯಿ, ಅತ್ತೆ, ಅಜ್ಜಿಯರ ಮರಣ, ತಂದೆಯ ಸಾವು, ಕ್ಷಯಪೀಡಿತ ಪತ್ನಿಯ ಸಾವು, ಪೋಲಿಯೋ ರೋಗಕ್ಕೆ

ಗುರಿಯಾದ ಮಗ. ನೇಣುಹಾಕಿಕೊಂಡ ತಮ್ಮ ಇಂಥ ಹತ್ತಾರು ದುಃಖದ ಘಟನೆಗಳು ಈ ಪದ್ಯದಲ್ಲಿ ಚಿತ್ರಿತವಾಗಿವೆ. “ಬದುಕು” ಈ ಕವನದಲ್ಲಿ ಕವಿಯ ವೈಯಕ್ತಿಕ ಜೀವನದ ಚಿತ್ರಗಳಿವೆ.

ವಿವಾಹದ ವಯಸ್ಸಿನಲ್ಲಿ ಕವಿಯ ಮನಸ್ಸಿನ ಪ್ರೇಮದ ಅನುಭವಗಳ ಸಂಗ್ರಹ ಗೀತೆಯಾಗಿದ್ದು, ಹೆಣ್ಣಿನ ಪ್ರಥಮ ಭೇಟಿಯಲ್ಲಿ ಅವಳ ನೋಟದಿಂದ ಅಳುಕುವ ಕವಿಯ ಹೃದಯ, ಅವರ ಪ್ರೇಮ, ವ್ಯಾಪಾರದ ವ್ಯವಹಾರಗಳೆಲ್ಲ

“ಜೀವ ಜೀವಾಳಗಳ ರೂಪಮಂ ಬದಲಿಸುವ
ಸೃಷ್ಟಿ ಕೈವಾಡವೋ? ಚೇತನದ ಜಾಲವೋ”[೧೨]

ಎಂಬ ಚಿಂತೆ ಎಂಬ ಭಾವ “ಕವಿಯದೊ ಅನುಭವ” ಎಂದು ಕವನದಲ್ಲಿ ವ್ಯಕ್ತವಾಗಿದೆ.

ಕವಿಯು ಹೆಚ್ಚು ಪ್ರಕೃತಿಪ್ರಿಯರೆನ್ನುವಂತೆ ಈ ಕವನದಲ್ಲಿ ಮೂಡಿಸಿರುವ ನೆಲ, ಜಲ, ತಾರೆಗಳ ಮಿನುಗುಗಳ ವಿಚಾರಗಳೆಲ್ಲ ತಿಳಿಸುವವು.

ಕವಿಯು ಪ್ರಕೃತಿಯನ್ನು ನೋಡಿದಾಗ ಆದ ಅನುಭವ ವಿಶಿಷ್ಟವಾದುದು, ಕವಿಯು ಮರಳು ಗುಡ್ಡೆಯ ಮೇಲೆ ಒರಗಿದ ಸಂದರ್ಭದಲ್ಲಿ ಹೂಗಳು ಅರಳಿ ಬಂದಂತೆ, ಆಗಸದಲ್ಲಿ ಚಿಕ್ಕ ಚಿಕ್ಕ ನಕ್ಷತ್ರಗಳು ಅರಳಿ ನಿಂತಿವೆ. ಬೆಳದಿಂಗಳ ಆಲಿಂಗನದಲ್ಲಿ ಭೂದೇವಿ ಕ್ರೀಡಿಸುತ್ತಿದ್ದಂತೆ ಕವಿಗೆ ಭಾಸವಾಗಿದೆ. ಪ್ರಕೃತಿಯಲ್ಲಿ ಮೌನವು ಹಿಮಗಿರಿಯ ಶ್ರೇಣಿಯಲ್ಲಿ ಧ್ಯಾನಕ್ಕೆ ಕುಳಿತ ಚೈತನ್ಯಮೂರ್ತಿಯನ್ನು ಪೂಜಿಸುವ ಋಷಿಯನ್ನು ಅಣಕಿಸುವ ರೀತಿಯಲ್ಲಿ ಭಾಸವಾಯಿತು.

‘ಏಂ ಶಾಂತಿಮಯ ಸೃಷ್ಟಿ!’[೧೩]

ಎಂದು ನುಡಿದ ಕವಿಯು ಸುತ್ತ ನೋಡುತ್ತ ತಕ್ಷಣವೇ ಶಾಂತಿಯ ಕಟ್ಟೆ ಒಡೆದು ಸಂಭ್ರಮದಲ್ಲಿ ಹಕ್ಕಿ ಕೂಗಿತು, ಕವಿಯು ಬೆಚ್ಚಿ ಏನಿದೀ ಗದ್ದಲ ಎಂದು ಉದ್ಗಾರ ತೆಗೆಯುತ್ತ -

“ಅಳಿದುದೇ ಶಾಂತಿ!
ಶಬ್ದಮಯವಾಯ್ತಿನ್ನು”[೧೪]

ಎಂದು ಕವಿಯ ಮನಸ್ಸು ಭಾವಿಸುತ್ತದೆ; ಕಳೆದ ಸುಖವನ್ನು ನೆನೆದು ಕಾತರಿಸುತ್ತದೆ. ಪುನಃ ಕವಿಯು ಪ್ರಕೃತಿಯಲ್ಲಿ ತಲ್ಲೀನನಾಗುತ್ತಾನೆ. ಅವನಿಗೆ ಭಂಗತಂದ ದೃಶ್ಯ ಯಾವುದು? ತಾರೆಗಳ ಮಿನುಗೇ ಭಂಗ ತರುವ ದೃಶ್ಯವಾಗಿತ್ತು.

ರಮ್ಯ ರುಚಿಸದೆ ಹೋಯ್ತು!
ಶಾಂತಿಯಲೆ ಸಿಡಿದಾಯ್ತು[೧೫]

ಇದು ಕವಿಯು ಚಿತ್ರಿಸಿರುವ ವಿಶಿಷ್ಟ ಅನುಭವ, ಅಪಚರಿತವಾದ ವಿಷಯಗಳು ಕವನದಲ್ಲಿ ಮೂಡಿರುವುದನ್ನು ಕಾಣಬಹುದು. ಶಾಂತವಾತಾವರಣವನ್ನು ಹೊರ ಚೆಲ್ಲುವ ಪ್ರಕೃತಿಯೇ ಶಾಂತಿ ಭಂಗಮಾಡುವ ರೀತಿಯಲ್ಲಿ ಕವಿಗೆ ಗೋಚರವಾದ ಅನುಭವವನ್ನು “ಕವಿಯದೊಂದು ಅನುಭವ” ಕವನದಲ್ಲಿ ವ್ಯಕ್ತವಾಗಿವೆ.

ಪ್ರತಿಯೊಬ್ಬ ವ್ಯಕ್ತಿಯೊಳಗಿನ ಪ್ರತಿಭೆಯು ಬೆಳೆಯಲು ಅವಕಾಶಬೇಕು. ಅದನ್ನು ಗುರುತಿಸುವ, ಬೆಳೆಸುವ ಮನೋಭಾವಗಳಿರಬೇಕೆಂಬುದು "ಗುಪ್ತಗಂಗಾ" ಕವನದಲ್ಲಿ ಕವಿಯ ಭಾವನೆಗಳಾಗಿವೆ.

ಚಿಲುಮೆಗೆ ಹೊರ ಉಕ್ಕುವ ತವಕ, ಆದರೆ ಸುತ್ತಲು ಮರಳಿನ ಕಾಡು ಕವಿದಿರುತ್ತದೆ. ಜಿನುಗುವ ಕವಿತಾ ರಸವೊಸರುವ ಮೊದಲೇ ಬಿರುಗಾಳಿಗೆ ಸಿಕ್ಕಿ ಕಮರುತಿದೆ. ಆ ಕವಿತಾ ಬಿಂದು, ಪ್ರಪಂಚದ ಹೃದಯದ ದ್ವೇಷ, ಅಸೂಯೆ, ಅನಾದರಗಳಿಂದಾಗಿ ಕವಿಯ ಬಯಕೆಗಳು ಮುರುಟಿವೆ.

ಚಿಮ್ಮುವೆ, ಜಿಗಿಯುವೆ ಎನ್ನುವ ಚಿಲುಮೆಗೆ ಏಕೋ ಇಂಬಿಲ್ಲ! ಎಲ್ಲರಿಗೂ ಪ್ರೋತ್ಸಾಹ ದೊರೆಯದೆ ಆ ಆಸೆ, ಬಯಕೆಗಳು, ಪ್ರತಿಭೆಗಳೆಲ್ಲ ಸುಪ್ತವಾಗಿ ಅಂತರಂಗದಲ್ಲಿಯೇ ಉಳಿದು ನಿರಾಸೆಯನ್ನು ತಂದುಕೊಳ್ಳುವ ಸಂದರ್ಭಗಳೇ ಹೆಚ್ಚು ಎಂಬ ಭಾವಗಳು "ಗುಪ್ತಗಂಗಾ" ಕವನದಲ್ಲಿ ಉತ್ತಮವಾಗಿ ಚಿತ್ರಿತವಾಗಿವೆ.

ಕವಿಯು ಎಲ್ಲ ಪ್ರಕೃತಿಯ ವ್ಯಾಪಾರಗಳನ್ನೂ, ಮನುಷ್ಯ ವರ್ತನೆಗಳನ್ನೂ, ಜಗತ್ತಿನ ಘಟನಾವಳಿಗಳನ್ನೂ ನೋಡುತ್ತಲೇ ಇದ್ದು, ಇವುಗಳಿಗೆ ಸ್ಪಷ್ಟರೂಪವನ್ನು ಕೊಡುವ ಮನಸ್ಸು ಅವನದಾಗಿರುತ್ತದೆ. ಆದರೆ ಕವಿಯು ಹೇಳುವಂತೆ

ಸೆರೆಹಿಡಿದು ಚಿತ್ರಿಸಲು ಮನವೆಳಸಿದಾಗ
ಹಾರುವವು, ಪೋಗುವವು, ಮಾಯವಾಗುವವು.[೧೬]

ಇದರ ನಡುವೆಯೂ ಅವುಗಳನ್ನು ಹಿಡಿದೇ ಬಿಡಬೇಕೆಂಬ ಪಟ್ಟುಹಿಡಿದು ಬರೆಯಲು ಕುಳಿತಾಗ ಕೂಡ ಆ ದೃಶ್ಯಗಳು ನಿಂತಲ್ಲಿ ನಿಲ್ಲದೆ ಅಲೆಯುತ್ತಿವೆ ಎಂಬ ಚಿಂತೆ. ಈ ರೀತಿಯ ಭಾವಗಳು ಕವಿಯ ಮನಸ್ಸಿನಲ್ಲಿ ನಿಲ್ಲುವ ಸಂದರ್ಭದಲ್ಲಿ

ಬರೆಯಲಳವಲ್ಲ; ಸವಿಯುವುದೆ ಸೊಗವಹುದು
ಭಾವನೆಯ ರಾಜ್ಯದಲ್ಲಿ ಬಾಳುವುದೇ ಲೇಸು[೧೭]

ಹೃದಯದಲ್ಲಿರುವ ಭಾವಗಳೆಲ್ಲವನ್ನು ಅಕ್ಷರದಲ್ಲಿ ಹಿಡಿದಿಡುವುದು ಕಷ್ಟದ ಕೆಲಸ ಎಂಬ ಭಾವನೆಯನ್ನು ಎಲ್ಲ ಕವಿಗಳು ಕಾಲದಿಂದ ಕಾಲಕ್ಕೆ ಯೋಚಿಸುತ್ತಾ ಬಂದಿದ್ದಾರೆ. ಹೀಗೆ ಕವಿಯೂ ಸಹ ಭಾವನೆಗಳನ್ನು ಶಬ್ದದಲ್ಲಿ ಹಿಡಿದಿಡುವ ಬಗೆ ನಡೆಸಿರುವ ಚಿಂತನೆಯನ್ನು "ನನ್ನ ಮನ" ಎಂಬ ಕವನದಲ್ಲಿ ಮೂಡಿಸಿದ್ದಾರೆ

ನವೋದಯದ ವೈಶಿಷ್ಟ್ಯಗಳಲ್ಲಿ ಪ್ರಕೃತಿಯ ಜೊತೆಗಿನ ಆರಾಧನಾಭಾವವೂ ಮುಖ್ಯವಾದುದು. ಟಿ.ಎನ್. ಮಹದೇವಯ್ಯನವರು ಪ್ರಕೃತಿಯ ನಡುವೆ ಬೆಳೆದವರು. ಅವರು ಹೆಂಡತಿಯ ತವರಿಗೆ ಮೇಲಿಂದ ಮೇಲೆ ಭೇಟಿ ನೀಡುತ್ತಿದ್ದುದರಿಂದ ಆ ನೆಲದ ಹುಚ್ಚು ಹಿಡಿಸುವ ಪ್ರಕೃತಿ ವ್ಯಾಪಾರಗಳನ್ನು ಕವಿ ನಿತ್ಯವೂ ನೋಡಿ ಅನುಭವಿಸಿದರು. ಆ ಚೇತೋಹಾರಿ ಅನುಭವ ಅವರ ಅನೇಕ ಕವಿತೆಗಳಲ್ಲಿ ಪ್ರಕಟಗೊಂಡಿದೆ. ಪ್ರಕೃತಿಗೆ ದುಗುಡ ದುಮ್ಮಾನಗಳನ್ನು ಪರಿಹರಿಸುವ ಮಾಂತ್ರಿಕ ಶಕ್ತಿಯಿದೆ ಎಂಬುದನ್ನು 'ಸಮಾಧಾನ' ಎನ್ನುವ ಕವಿತೆಯಲ್ಲಿ ಹೇಳಿರುವರು. ಮನುಷ್ಯನ ಬದುಕಿನಲ್ಲಿ ಸುಖ-ದುಃಖಗಳು ಹೇಗಿವೆಯೊ ಹಾಗೆ ಪ್ರಕೃತಿಗೂ ಏರಿಳಿವುಗಳಿವೆ. ವಸಂತಮಾಸದಲ್ಲಿ

ಮೈಯುಬ್ಬಿ ನಿಂದಳಿ
ನರುಗಂಪು ತಂದಿತ್ತು
ಮಾರುತನ ಕೂಡೆ
ನಲ್ಮೆ ಪುಟ್ಟಿಸದೇನು?[೧೮]

ವಸಂತನ ವೈಭವ ಶಾಶ್ವತವಲ್ಲ. ಹೇಮಂತಋತು (ಚಳಿಗಾಲ) ಕಾಲಿಡುತ್ತಿದ್ದಂತೆಯೇ ಪ್ರಕೃತಿಯಲ್ಲಿ ಬದಲಾವಣೆಯಾಗುತ್ತದೆ-

ಹೇಮಂತನಾಳಿಕೆಯು ಬನಸಿರಿಯ ನುಂಗಿ,
ಜವನವ ತುಳಿದಳಿಸಿ ಮುಪ್ಪು ತಂದಿಡಬಹುದು!
ಕಾಂತಿಯೆಲ್ಲವ ಹೀರಿ ನರ್ತಿಸಬಹುದು![೧೯]

ಹೇಮಂತನೂ ಶಾಶ್ವತವಲ್ಲ. ಚೈತ್ರಮಾಸ ಕಾಲಿಡುತ್ತಿದ್ದಂತೆಯೇ ಪ್ರಕೃತಿಯಲ್ಲಿ ಮತ್ತೆ ಚೈತನ್ಯ ತುಂಬುತ್ತದೆ-

ಕೊನರೊಡೆದ ತರುಲತೆಯು
ನಳನಳಿಸಿ ಬಳುಬಳುಕಿ
ಬಾಳು ನಗಲಹುದು!
ಬಾಡಿದ ತರುನಿಕರ
ಮತ್ತೊಮ್ಮೆ ಜೀವಿಪುದು![೨೦]

'ಶರತ್-ಪ್ರಭಾತ' ಕವಿತೆಯಲ್ಲಿ ಶರತ್ಕಾಲ (ಶರದೃತು-ಮಳೆಗಾಲದ ಅನಂತರದ ಕಾಲ) ದಲ್ಲಿ ಸೂರ್ಯೋದಯವಾಗುವಾಗ ಪ್ರಕೃತಿಯಲ್ಲಿ ಕಾಣುವ ಚೆಲುವನ್ನು ಕವಿ ಟಿ.ಎನ್. ಮಹದೇವಯ್ಯನವರು ವರ್ಣಿಸುವಾಗ ಆ ಕವಿಹೃದಯದ ಮಿಡಿತವನ್ನು ಅಲ್ಲಿ ಗುರುತಿಸಬಹುದು. ಅದನ್ನು ಅವರ ಮಾತುಗಳಲ್ಲೇ ಸವಿಯಬೇಕು :

ರಮಣೀಯ ತಿರೆಯೊಡನೆ ಹೊನ್ನಿನೋಕುಳಿಯಲ್ಲಿ
ಮಿಂದೆದ್ದ ಉಷೆ ಬೆಡಗು ತುಂಬುತಿದೆ ಎದೆಯಲ್ಲಿ
ಮಂಜುಹನಿ ದಳವೇರಿ ಮುತ್ತೊಂದನೇ ಸೆಳೆದು
ರಂಜಿಸುವ ತುಟಿಗಳಲ್ಲಿ ರಾಗಮಂ ತಳೆದು
ಮೆಲ್ಲನರಳಿಸುತಿಹುದು ಒಂದೊಂದೆ ದಳಮಾತ್ರ!
ಶರದೃತುವಿನಪರೂಪ ಸುಖ ಸೋಕಿನಲಿ ಬೆರೆತು
ಸೌಂದರ್ಯ ಸಾರದಿಂ ವನಶ್ರೀಯೆ ಚೆಲುವಾಯ್ತು!
ಪುಣ್ಯಪ್ರಭಾತದಲ್ಲಿ ಅಲಸಿಕೆಯ ಬಿಟ್ಟೇಳು!
ಉಷೆ ಚರಣಸರಸಿಜಕೆ ಕಾಣಿಕೆಯ ತರಹೇಳು.[೨೧]

ಮನುಷ್ಯನ ಬದುಕನ್ನು ಪ್ರಕೃತಿಯ ಜೊತೆ ಹೋಲಿಸಿ ಅವನ ಬದುಕಿನಲ್ಲಿ ಹೇಗೆ ಏರಿಳಿವುಗಳಿವೆಯೋ ಹಾಗೆ ಪ್ರಕೃತಿಯಲ್ಲೂ ಏರಿಳಿವುಗಳಿವೆ ಎಂಬುದನ್ನು ತಿಳಿಸಿ ಜೀವಿತ ಚಕ್ರದಲ್ಲಿನ ಏರಿಳಿವುಗಳಿಗೆ ಮನುಷ್ಯ ಕಂಗೆಡಬಾರದೆನ್ನುವ ಸ್ಥೈರ್ಯವನ್ನು 'ಸಮಾಧಾನ' ಎನ್ನುವ ಕವಿತೆಯಲ್ಲಿ ತುಂಬಿರುವರು. ಅವರ 'ಆಶಾವಾದ' ಈ ಸಾಲುಗಳಲ್ಲಿ ಕೆನೆಗಟ್ಟಿದೆ:

ಕಾಲಚಕ್ರವು ಸುತ್ತಿ ತಿರುಗುತಿಹುದಿರಲಿ
ಕೀಳು ಮೇಲಾಗುವುದು ದಿನವೊಂದೆ ಸಾಕು.[೨೨]

ಚೆಲುವು ಸದಾಕಾಲ ಇರಬೇಕೆನ್ನುವುದು ಕವಿಯ ಸ್ವಾರ್ಥ. ಚೆಲುವೆಂಬುದಿರುವನಕ ಚೇತನದ ಕಳೆಯಿಹುದು. ಎಂಬುದು ಕವಿಯ ನಂಬುಗೆ. ತಾನು ಸದಾ ಸುಖಿಯಾಗಿರಬೇಕೆನ್ನುವುದು ಮನುಷ್ಯನ ಹಂಬಲ, ಕಷ್ಟಗಳು ಬರುತ್ತವೆ, ಹೋಗುತ್ತವೆ. ಅವನ್ನು ಇದಿರಿಸಿ ಬದುಕುವ ಛಲ ಮನುಷ್ಯನಿಗಿರಬೇಕು. ಬದುಕು 'ಸಿಹಿ-ಕಹಿ' ಎಲ್ಲವನ್ನು ಉಣಿಸುತ್ತದೆ ಟಿ.ಎನ್. ಮಹದೇವಯ್ಯನವರ ಜೀವನಸಿದ್ಧಾಂತ: 'ಚೆಲುವೆಂಬುದಿರುವನಕ ಚೇತನದ ಕಳೆಯಿಹುದು.' 'ಚೇತನದ ಚೆಲುವು' ಎನ್ನುವ ಅವರ ಕವಿತೆ ಅವರು ನಂಬಿರುವ ಆ ಜೀವನ ಸಿದ್ಧಾಂತವನ್ನು ಕಟ್ಟಿಕೊಡುತ್ತದೆ. ಕವಿತೆಯ ಮೊದಲಿನ ಎರಡು ಘಟಕ ನಳನಳಿಸಿ ಬೆಳೆದ ಬನಸಿರಿಯ ಹೂಗಳ ಸೊಬಗನ್ನು ತಿಳಿಯಹೇಳುತ್ತದೆ:

ಬಿರಿಮುಗಳ ಕಳೆಯಿಂದ ಬನಸಿರಿಯು ಮೆರೆದಿಹುದು
ಮುದ್ದಾದ ತಳಿರುಗಳು ನಳನಳಿಸಿ ನಲಿಯುತಿವೆ.
ಬಿಂಕದಲ್ಲಿ ಕುಸುಮಗಳು ಅರಳರಳಿ ನಗುತಿಹವು.
ಎಲೆಗಾಳಿ ಸುಳಿದಾಡಿ ಸವಿಗಂಪ ಹರಡಿಹುದು.

ಅಲರುಗಳ ಬಗೆಯೆನಿತು ಚೆಲುವಾಗಿ ತೋರುತಿದೆ.
ಸೊಬಗಿನಾಳವ ಸವಿಯೆ ಮನವರಿಯದಾಗಿರಲು
ಸಂತಸದ ಸೊಗದಿಂದ ಎದೆಯುಬ್ಬಿ ನಿಂತಿರಲು
ಚೇತನದ ಚೆಲುವೆಂತು ನುಡಿಗಳಿಗೆ ಸಿಲುಕುವುದು?[೨೩]

ಕವಿಗೆ ಆ ಸೊಗಸಾದ ಹೂವುಗಳನ್ನು ನೋಡುತ್ತಿದ್ದಂತೆಯೇ ಕೀಳುವ ಆಸೆ ಮನಸ್ಸನ್ನು ಪ್ರಚೋದಿಸುತ್ತದೆ. ಕೈ ಮುಂದಾಯಿತು. ಆದರೆ ಮನ ಹಿಂದಾಯಿತು. ಅವರಿಗೆ ನಿತ್ಯಸತ್ಯವೊಂದು ಫಳಕ್ಕನೆ ಮಿಂಚುತ್ತದೆ : 'ಚೆಲುವೇನು ಜಡವಲ್ಲ, ಚೇತನವವೊಂದಿಹುದು.' ಅವರ ವಿವೇಕ ಎಚ್ಚರಿಸುತ್ತದೆ:

ಸುಮವಾದರೇನಂತೆ, ತಳಿರಾದರೇನಂತೆ;
ಕಳೆಯಾಂತು ನಿಂತಿರಲು ಕಳೆಯ ಕಳೆಯಲದೇಕೆ?
ಚೆಲುವೆಂದು ಎನಗಾಗಿ ಬಲಿಯಾಗಬೇಕೇನು?
ಚೇತನವು ನನಗಾಗಿ ಲಯಹೊಂದಬೇಕೇನು?[೨೪]

ಪ್ರಕೃತಿಯ ಚೆಲುವು ನಿತ್ಯ ನಿರಂತರ, ಅದರ ಚೈತನ್ಯಕ್ಕೆ ಸಾವಿಲ್ಲ ಎನ್ನುವ ಸತ್ಯವನ್ನು ಕಂಡುಕೊಂಡ ಕವಿ ಗಿಡದ ಮೇಲಿನ ಕುಸುಮವನ್ನು ಕೀಳದೆ ಅಲ್ಲಿಯೇ ಅದರ ಸೊಬಗು ಶಾಶ್ವತವಾಗಿರಲು ಬಯಸುವನು. ಇಲ್ಲಿಯೇ ಕವಿ ಪ್ರಕೃತಿಯ ಚೆಲುವಿನ ನಿರಂತರತೆಯನ್ನು ಬದುಕಿಗೂ ಅನ್ವಯಿಸುವ ಪ್ರಯತ್ನ ನಡೆಸುವುದು. ಬದುಕಿನ ಚೈತನ್ಯವಿರುವುದು ಅದರ ನಿರಂತರತೆಯಲ್ಲಿ. ಬದುಕಿನ ಲಾಭ-ನಷ್ಟಗಳಿಗೂ ಮೀರಿದ್ದು ಬದುಕಿನ ಚೆಲುವು. ಈ ಸತ್ಯವನ್ನು ಪ್ರಕೃತಿಯ ಮೂಲಕ ಕವಿ ಕಂಡುಕೊಂಡು ಸಮಾಧಾನಪಟ್ಟುಕೊಳ್ಳುವನು. ಬದುಕಿನ ವಿರಾಡ್‌ಲೀಲೆಯನ್ನು ಅದು ಉಣಿಸುವ ಸುಖ-ದುಃಖವನ್ನು ಸಮಚಿತ್ತದಿಂದ ಸ್ವೀಕರಿಸುವ ಕಲೆಯನ್ನು ಕವಿ ಕಲಿಯಬಯಸುವನು. ಅದು ಕೆಳಗಿನ ಸಾಲುಗಳಲ್ಲಿ ವ್ಯಕ್ತಗೊಂಡಿದೆ:

ಮನದಾಸೆ ಹಿರಿಯಾಸೆ ಎಂದೆನುತ ಮಿದಿದಿಟ್ಟು
ಮನದಾಸೆಯಾಫಲವ ನಾನುಣ್ಣದೆಂತಿರುವೆ?
ಅಳುತಳುತ ಬಗೆಕೆಡಲು, ನಗುನಗುತ ಮನವೆಸೆಗೆ
ಮನದ ಸೊಗ-ದುಗುಡಗಳು ಜೀವನನು ಸೊರಗುವುದು.[೨೫]

'ಕೋಗಿಲೆ' ಕವಿ ಟಿ.ಎನ್. ಮಹದೇವಯ್ಯನವರಿಗೆ ಬಹಳ ಪ್ರಿಯವಾದುದು. ಅದು ಪ್ರಕೃತಿಯ ಒಂದು ಅವಿಭಾಜ್ಯ ಭಾಗ. ವಸಂತಮಾಸಕ್ಕೂ ಅದಕ್ಕೂ ಮಧುರವಾದ ಸಂಬಂಧ. ಕವಿ ಕೋಗಿಲೆಯನ್ನು 'ವಸಂತನ ಸಿರಿ ವೈಭವದ ತುಂಬುರ' ಎಂದು ಕರೆದಿರುವರು. ವನರಾಜಿಯಾ ಹಸುರಿನೊಳಗವಿತು ಮಧುರವಾಗಿ ಉಲಿವ ಕೋಗಿಲೆಯ ಕೂಜನ ಕವಿಗೆ ಒಂದು ನಿಬ್ಬೆರಗು. 'ನಂದನವನದ ಸೊಬಗ ಕೀಳ್ಗೈವ ಕೋಗಿಲೆಯೆ ನಿನ್ನಿಂಚರದ ಸೊಬಗು; ನಿನ್ನ ಗಾನದ ಸೊಗಸು ಎಲೆ ಹಕ್ಕಿ! ನಿನ್ನ ವಾಣಿಯೊಳೇನಿನಿತು ಮೋಹ?'[೨೬] ಎಂದು ಆ ನಿಬ್ಬೆರಗಿನಲ್ಲಿ ಪ್ರಶ್ನಿಸುವರು. 'ವಸಂತ' ಎನ್ನುವ ಕವಿತೆಯಲ್ಲಿ ವನದ ಮಾವಿನ ಚಿಗುರನ್ನು ತಿಂದು ಸುಗ್ಗಿಯಕಾಲಕೆ ಮಾತ್ರ ಬಂದು ಮಧುರವಾಗಿ ನುಡಿವ ನಿಯಮವದೇನು? ಎಂದು ಕವಿ ಪ್ರಶ್ನಿಸುವರು.

'ಎಚ್ಚರವೇ ಇಲ್ಲ' ಎನ್ನುವ ಕವಿತೆಯಲ್ಲಿ ಭೃಂಗಾಳಿಯ ಮೊರೆತದಲ್ಲಿ ಕವಿ ಸಮಕಾಲೀನ ಧ್ವನಿಯನ್ನು ಗುರುತಿಸುವರು. ಅವರಿಗೆ ದುಂಬಿಯ ಸಾಮಾನ್ಯ ಝೇಂಕಾರವಾಗಿರದೆ ಕಾಲಚಕ್ರದಲ್ಲಿ ಯುದ್ಧಗಳು ನಡೆದು ರಕ್ತದ ಕಾಲುವೆ ಹರಿದು ಸಾವಿನ ಬೊಬ್ಬೆಯಾಗಿ ಕೇಳಬರುತ್ತದೆ. 'ಧರ್ಮ ಬುಸುಗುಟ್ಟುತಿದೆ ಕರ್ಮ ಸಿಡಿಗುಟ್ಟುತಿದೆ ಆದರೂ ಜಡನಿದ್ದೆ ಎಚ್ಚರವೇ ಇಲ್ಲ!' ಎನ್ನುವರು.[೨೭] 'ಮೊರೆಯುತಿದೆ ಭೃಂಗ' ಎಂಬ ಮತ್ತೊಂದು ಕವಿತೆಯಲ್ಲೂ ಭೃಂಗದ ಝೇಂಕಾರ ಬೇರೆ ಅರ್ಥವಿಸ್ತಾರವನ್ನು ತೆರೆಯುತ್ತದೆ.

'ಬೆಳಗು' ಕವಿತೆಯಲ್ಲಿ ಕತ್ತಲೆಯನ್ನು ಸೀಳಿ ಬೆಳಕಿನ ಕಿರಣಗಳನ್ನು ಹರಡುತ್ತ ಬರುವ ಸೂರ್ಯೋದಯದ ವೈಭವ ಹಾಗೂ ಪ್ರಕೃತಿಯ ಸಮಸ್ತ ಜೀವಿಗಳ ಮೇಲೆ ಅದು ಬೀರುವ ಪ್ರಭಾವವನ್ನು ಸರಳವಾಗಿ ನಿರೂಪಿಸಲಾಗಿದೆ. ಇದೇ ಸಂಭ್ರಮ 'ತರಣಿ ಉದಯ' ಕವಿತೆಯಲ್ಲೂ ಮರುಕಳಿಸಿರುವುದನ್ನು ಕಾಣಬಹುದು.

ಜೀವನದುದ್ದಕ್ಕೂ ಕಷ್ಟಗಳ ದಾರಿಯಲ್ಲಿಯೇ ಸಾಗಿದ ಟಿ.ಎನ್. ಮಹದೇವಯ್ಯನವರು ದೈವಭಕ್ತಿಯುಳ್ಳವರು. ಅವರು ಹೆಚ್ಚು ಆಧ್ಯಾತ್ಮದ ಒಲವು ಹೊಂದಿದ ವಿಚಾರಗಳನ್ನು ಅವರ ಕೆಲವು ಕವನಗಳಲ್ಲಿ ಕಾಣಬಹುದಾಗಿದೆ.

ಬದುಕಿನಲ್ಲಿ ಕೇವಲ ಕಷ್ಟಗಳನ್ನೇ ಕಂಡುಂಡ ಕವಿಯು ದೇವರ ಬಗೆಗೆ ಅತಿಯಾದ ಭಾವ, ಭಕ್ತಿಗಳನ್ನು ಹೊಂದಿದ್ದು ಅದರ ಪರಿಣಾಮ ಕೆಲವೊಮ್ಮೆ ಪತ್ನಿಗೆ ಭಯ ತರುವಂಥದಾಗುವ ರೀತಿಯಿರುತ್ತಿತ್ತು. ಅವರ ಪತ್ನಿ ಪತಿ ಸನ್ಯಾಸಿಯಾಗಬಹುದೆಂದು ಅನುಮಾನಪಡುತ್ತಿದ್ದರಂತೆ. ಈ ಕವನದಲ್ಲಿ ಕವಿ ತನ್ನ ಪ್ರಾರ್ಥನೆಗೆ ದೈವ ಕಿವಿಗೊಡುತ್ತಿರಲಿಲ್ಲವೆಂದೂ ಜೀವನದಲ್ಲಿ ಪುನಃ ಪುನಃ ಅಘಾತಗಳು ಘಟಿಸುತ್ತಿದ್ದುದಕ್ಕೆ ದೇವರ ಚಿತ್ತ ಏನಿಹುದೋ? ಎಂದು ತಿಳಿಸಿದ್ದಾರೆ. ತಮ್ಮ ಬದುಕು ಹೊಳೆ ಬಂದು ಮನೆಯಳಿದು ಬಯಲೆ ನೆರವಾಗುವಂಥ ಸ್ಥಿತಿ ತಲುಪಿದುದನ್ನು ತಿಳಿಸಿದ್ದಾರೆ. ಇಷ್ಟೆಲ್ಲಾ ದೈವವನ್ನು ಭಜಿಸಿ ಆರಾಧಿಸಿದ, ನಿನ್ನ ಪೂಜೆಯೇ ನನ್ನ ನಿತ್ಯ ಕೆಲಸ, ಅದೇ ಬದುಕಿನ ಮರ್ಮ, ನಿನ್ನ ಪ್ರೀತಿಯೇ ನನ್ನ ಉಸಿರು, ಎಂದಿದ್ದಾರೆ.

'ಏಕಿಂತು ಸುಡುಗಾಡುಗೈದೆ ಈ ಬದುಕ?'[೩೮]

ಎಂದು ಕಣ್ಣುಬಿಟ್ಟು ನೋಡುವ ಮೊದಲ, ಅದರ ಅಂತ್ಯ ನೋಡಿ ನಗುವ ನಿನ್ನ ಆಟ ಏಕೆ? ಎಂದು ದೇವರನ್ನು ಪ್ರಶ್ನಿಸುವ ವಿಚಾರವಿದೆ. ಜೀವನದಲ್ಲಿ ಸಂತಸದ ನಡುವೆಯೇ ತೀವ್ರತರ ಆಘಾತಗಳಾಗುತ್ತಿದ್ದರೆ ಕವಿ ಏಕೆ ಹೀಗಾಯಿತು ಎಂಬ ಯೋಚನೆಗೆ ತೊಡಗಿದಾಗ ಬೇಸರ ಭಾವನೆ, ಆಕ್ರೋಶದ ಭಾವ, ಪ್ರಶ್ನಿಸುವ ಮನೋಭಾವ ಬಂದಿರುವುದು ನಿಜ ಎಂದು ಗೋಚರವಾಗುವುದು. ಆದರೆ, ಕವಿಯ ಮನಸ್ಸು ಕಹಿಯಾಗದೆ 'ಪಟ ಹರಿದ ನಾವೆ'[೩೯] ಎಂದು ತಮ್ಮ ಬದುಕನ್ನು ಒಂದು ಪದ್ಯದಲ್ಲಿ ವಿಶ್ಲೇಷಿಸಿ ಹೇಳಿರುವ ಕವಿ ದೇವರ ಬಗ್ಗೆ ಉದಾರ ಮನೋಭಾವವನ್ನು ಹೊಂದಿರುವುದನ್ನು "ನಿನ್ನ ಕರುಣೆ" ಎಂಬ ಕಾವ್ಯ ಭಾಗದಲ್ಲಿ ಮೂಡಿರುವುದನ್ನು ಕಾಣಬಹುದು.

**ಕನ್ನಡ ಲೋಕ**

ಟಿ.ಎನ್. ಮಹದೇವಯ್ಯನವರು ವಿಜ್ಞಾನದ ಪದವೀಧರರಾದರೂ ಅವರಿಗೆ ಪ್ರಾಚೀನ ಹಾಗೂ ಮಧ್ಯಕಾಲೀನ ಕನ್ನಡ ಸಾಹಿತ್ಯದ ಬಗ್ಗೆ ಆಳವಾದ ಅರಿವಿದೆ. ಕನ್ನಡ ಸಾಹಿತ್ಯದ ಬಗೆಗೆ ಅವರಿಗೆ ಅಪಾರವಾದ ಪೂಜ್ಯತೆಯಿರುವುದು ದೇವಾಲಯ ಹಾಗೂ ಅದರ ಪ್ರಾಣಮೂರ್ತಿ ಕನ್ನಡವೆನ್ನುವ ಪರಿಕಲ್ಪನೆ "ಕನ್ನಡದ ಗರ್ಭಗುಡಿ" ಎನ್ನುವ ಕವಿತೆಯಲ್ಲಿ ವ್ಯಕ್ತವಾಗಿದೆ. ಇದು ನವೋದಯದ ಕವಿಗಳು ಕನ್ನಡದ ಬಗ್ಗೆ ತಾಳಿದ ಧೋರಣೆ ಇಪ್ಪತ್ತನೇ ಶತಮಾನದಲ್ಲಿ ನಿಂತು ಕನ್ನಡ ಸಾಹಿತ್ಯ ಪರಂಪರೆಯ ಸಿಂಹಾವಲೋಕನ ಮಾಡುವಾಗ ಹಿಂದಿನ ಭವ್ಯತೆಯ ಬಗೆಗಿನ ಗೌರವ ಮೇಲಿನ ಕವಿತೆಯಲ್ಲಿ ಎದೆಯಾಳದ ದನಿಯಗಿ ಪ್ರಕಟಗೊಂಡಿದೆ. ಸದ್ಯದ ಕನ್ನಡದ ಸ್ಥಿತಿಯನ್ನು ಗಮನಕ್ಕೆ ತಂದುಕೊಂಡಾಗ ಕವಿಯ ಮನಸ್ಸು ಖಿನ್ನತೆಯಿಂದ ನರಳುತ್ತದೆ. ಹಳೆಗಾಲದ ಸಾಹಿತ್ಯದ ವೈಭವವು ಒಂದು ಮಧುರ ನೆನಪಾಗಿ (Nostalgia) ಕಾಡುತ್ತದೆ. ಕವಿತೆಯ ಪ್ರಾರಂಭದಲ್ಲಿ ತಾಯಿ ಕನ್ನಡದೊಡತಿಯನ್ನು ಕವಿ ಪ್ರಶ್ನಿಸುವರು:

ಕನ್ನಡದ ಗರ್ಭಗುಡಿ
ಒಳ ಹೊರಗು ಬರಿ ಶೂನ್ಯ!
ಏಕಿಂಥ ನೀರವತೆ

--------------------------

ಮಜ್ಜನಕೆ ನೀರೆರೆವ

ಮನ್ನೆ ಮಡದಿಯರಿಲ್ಲ

ವೇದ ಮಂತ್ರಸ್ತವನ

ನಿಂತು ಉಸಿರಿಲ್ಲ!

ದೀಪ ಧೂಪಗಳಿಲ್ಲ!

ಹೂವಿಲ್ಲ! ಇಲ್ಲ! [೩೦]

ಸಮಕಾಲೀನ ಕನ್ನಡದ ಸ್ಥಿತಿ-ಗತಿಯನ್ನು ಅದರ ಪೂರ್ವಾವಸ್ಥೆಗೆ ಹೋಲಿಸಿಕೊಂಡು ಸಂಭ್ರವಿಸುವ, ಹತ್ತುಶತಮಾನಗಳ ಭವ್ಯ ಇತಿಹಾಸವಿರುವ ಕನ್ನಡ ಸಾಹಿತ್ಯ ರಾಜಾಶ್ರಯದ ತಣ್ಣೆರಳಿನಲ್ಲಿ ಬೆಳೆದ ಆ ಸಾಹಿತ್ಯ ಇಂದು ಮಂಕುಕವಿದಿರುವ ಅವಸ್ಥೆಯನ್ನು ನೆನೆದುಕೊಳ್ಳುವ ಮನಸ್ಸು " ಓ ನನ್ನ ತಾಯೇ ಎತ್ತ ಹೋಯಿತು ಪೆರ್ಮೆ"[೩೧] ಎಂದು ಕೇಳುತ್ತದೆ. ಕವಿತೆ ತನ್ನ ಮೂರನೆಯ ಮಜಲಿನಲ್ಲಿ ಪಂಪನ ಸುಪ್ರಸಿದ್ಧವಾದ ಪದ್ಯ "ತೆಂಕಣಗಾಳಿ ಸೋಂಕಿದೊಡಂ..." ಎಂಬುದನ್ನು ಭಾವವಿವಶತೆಯಿಂದ ನೆನೆಯುತ್ತ ಇಂದಿನ ಸ್ಥಿತಿಗೆ ಹೋಲಿಸುತ್ತ "ನಾಡ ಜನಕಳಿವೈದ ತಲೆ ಬಗ್ಗಿಸಾಯ್ತೆ!"[೩೨] ಎಂದು ನೊಂದು ನುಡಿಯುವರು. ಕವಿತೆಯ ನಾಲ್ಕನೆಯ ಮಜಲಿನಲ್ಲಿ ಆರ್. ನರಸಿಂಹಾಚಾರ್ಯರು ಸಂಕಲಿಸಿದ "ಶಾಸನ ಪದ್ಯಮಂಜರಿ" ಯನ್ನು ನೆನೆಯುತ್ತ ಕನ್ನಡದ ಶಾಸನ ಸಂಪದದ ಬಗೆಗೆ ಅಭಿಮಾನ ತಾಳುತ್ತ "ನನ್ನಬ್ಬೆ ಸಿರಿನುಡಿಯು ದೇವಿ ಸರಸತಿಯಡಿಗೆ ಸುರಿದ ಬರಿ ಮುಗುಳೆಂದು ಸಲ್ಲಿಸಿದುದೇನು?"[೩೩] ಎಂದು ಪ್ರಶ್ನಿಸುವರು. ಕವಿತೆಯ ಐದನೆಯ ಮಜಲಿನಲ್ಲಿ ಶ್ರೀವಿಜಯನು "ಕವಿರಾಜಮಾರ್ಗ" ದಲ್ಲಿ ಕನ್ನಡದ ಗಡಿಗಳ ಬಗೆಗೆ ತುಂಬು ಅಭಿಮಾನದಿಂದ ಹೇಳಿರುವುದನ್ನು ನೆನೆಯುತ್ತ ಇಂದಿನ ಅದರ ಅವಸ್ಥೆಯ ಬಗೆಗೆ ಕವಿಯ ಮನಸ್ಸು ಖಿನ್ನತೆಯನ್ನು ಅನುಭವಿಸುತ್ತದೆ. ಕಾವೇರಿಯಿಂದ ಗೋದಾವರಿಯವರೆವಿಗೆ ಹರಡಿಕೊಂಡಿದ್ದ ಕನ್ನಡಮೆನಿಪ್ಪಾ ನಾಡು ತನ್ನ ಬಯಲು ಅಂಚನ್ನು ಕುಗ್ಗಿಸಿಕೊಂಡು ಗಡಿನಾಡಿನವರು ನಮ್ಮ ನೆಲವನ್ನು ನುಂಗಿದ ವಿಪನ್ನಸ್ಥಿತಿಯನ್ನು ನೆನೆದು ಕವಿಯ ಮನಸ್ಸು ದುಃಖಿಸುವುದು. ಕವಿಯ ಮನಸ್ಸು ಕವಿತೆಯ ಆರನೆಯ ಮಜಲಿನಲ್ಲಿ ಪಂಪ, ರನ್ನ, ಪೊನ್ನರ ವೀರಸಿರಿಯನ್ನು ನೆನೆದರೆ, ಏಳನೆಯ ಮಜಲಿನಲ್ಲಿ ೧೨ನೇ ಶತಮಾನದ ಶರಣ ಪರಂಪರೆಯ ಮಹೋನ್ನತ ಕೊಡುಗೆಯನ್ನು ಸ್ಮರಿಸುವುದು. ಎಂಟನೆಯ ಮಜಲಿನಲ್ಲಿ ವಿಜಯನಗರ ಸಾಮ್ರಾಜ್ಯದುದಯ ಹಾಗೂ ರಕ್ಕಸತಂಗಡಿ ಯುದ್ಧದಲ್ಲಿ ಅದರ ಭವ್ಯತೆ ನೆಲಸಮವಾದುದನ್ನು ನೆನೆಯುವುದು. ಒಂಬತ್ತನೆಯ ಮಜಲಿನಲ್ಲಿ ಮೈಸೂರರಸರ ಕಾಲದಲ್ಲಿ ಕನ್ನಡಾಂಬೆ ಪಡೆದ ಗೌರವವನ್ನು ನೆನೆಯುವುದು. ಕನ್ನಡ ಸಾಹಿತ್ಯದ ಮಾಧುರ್ಯ ಅದಕ್ಕಿರುವ ಸಂಗೀತದ ಸಾಹಚರ್ಯದಲ್ಲಿರುವುದನ್ನು ಕವಿತೆಯ ಹತ್ತನೆಯ ಮಜಲು ನೆನೆಯುತ್ತದೆ. ಆ ಮಂಗಳದ ಗೀತೆಯಲ್ಲಿ ಈಗ ಅಪಸ್ವರ ಕಾಣಿಸಿಕೊಂಡಿರುವುದನ್ನು ಕವಿಮನಸ್ಸು ಗ್ರಹಿಸುತ್ತದೆ. ಕರ್ನಾಟಕವನ್ನಾಳಿದ ಪ್ರಭುಗಳು ನಿರಂತರವಾಗಿ

ಶಿಲ್ಪಕಲೆ, ನೃತ್ಯ, ಸಂಗೀತಗಳಿಗೆ ಕೊಟ್ಟ ಪ್ರೋತ್ಸಾಹವನ್ನು ಕವಿತೆಯ ಹನ್ನೊಂದನೆಯ ಮಜಲಿನಲ್ಲಿ ನೆನೆಯುತ್ತದೆ. ಸಾಮ್ರಾಜ್ಯಗಳ ಅವಸಾನಗಳಿಂದ ಲಲಿತಕಲೆಗಳಿಗೊದಗಿದ ದುಸ್ಥಿತಿಯನ್ನು ಮನಸ್ಸು ಧೇನಿಸುತ್ತದೆ. ಕನ್ನಡಕ್ಕೆ ಒದಗಿದ ಈ ದುಸ್ಥಿತಿಯನ್ನು ಕವಿಯ ಹನ್ನೆರಡನೆಯ ಮಜಲು ಚೆನ್ನಾಗಿ ಬಿಂಬಿಸಿದೆ.

ಕೋಟಿ ಮಕ್ಕಳ ಜೀವ
ಕೋಟಲೆಯ ಕ್ರೌರ್ಯದಲಿ
ರಸಹೀರಿ ಬಿಸುಟಂತೆ
ನಿರ್ಜೀವವಾದಂತೆ
ಧೃತಿಹೀನ ಸಂತಾನ
ನಿನ್ನೊಡಲ ಸೇರಿ
ಗುಡಿಕಿತ್ತು ಬಿಸುಟು
ಹರಿ ಹಂಚಿದರು ನಾಡ!
ಏನಾಯ್ತೊ ಬಾಳು!
ನಮ್ಮ ನಾವೇ ಮರೆತು
ಬಾಳಾಯ್ತು ಗೋಳು! [೩೪]

ಇಷ್ಟೆಲ್ಲಾ ಅವಸ್ಥೆಗಳನ್ನು ಹೊಂದಿದ್ದರೂ ನಾಡಿನ ಬಗ್ಗೆ ನಿರಾಶೆ ಕವಿಗೆ ಉಂಟಾಗಿಲ್ಲ. ಕವಿ ಆಶಾವಾದಿ. ಅಂತರಂಗದಿಂದ ತುಂಬಿ ಹರಿದ ಉತ್ಸಾಹ ಈ ವಿಪನ್ನಾವಸ್ಥೆಯಲ್ಲೂ ನಾಡು-ನುಡಿಯನ್ನು ಕಟ್ಟುವ ಬಗ್ಗೆ ತೀವ್ರವಾಗಿ ಯೋಚಿಸುತ್ತದೆ. ನಾಡದೇವಿಯನ್ನು ಪೂರ್ವದ ಶ್ರೀಮಂತಿಕೆಯ ಗದ್ದುಗೆಗೇರಿಸುವ ತವಕ ಕವಿತೆಯ ಕೊನೆಯ ಭಾಗಗಳಲ್ಲಿ ಭೋರ್ಗರೆದು ಹರಿದಿದೆ. ಕವಿತೆಯ ಪ್ರಾರಂಭದ ದೃಶ್ಯವನ್ನು ಬದಲಿಸುವ ನಿರ್ಧಾರದೊಂದಿಗೆ ನಾಡ ಕಟ್ಟುವ ಹೊಸಹುರುಪಿನ ಭರವಸೆಯ ದನಿ ಅಂತರಂಗದಿಂದ ಚಿಮ್ಮಿ ಬಂದಿದೆ.

ಗರ್ಭಗುಡಿಯಾವರಿಸಿ
ನಿಂತ ಶೂನ್ಯವನೊರಸಿ
ಕಟ್ಟು ನವರಂಗವನು!
ಸ್ವಪ್ನಸ್ಥ ಜನಮನದ
ಕಣ್ಣೆವೆಯನೆಚ್ಚರಿಸಿ
ಪದ್ಮ ಪತ್ರದ ಕಲೆಯ
ಭೂಚಕ್ರವನು ಕಡೆಸು
ಕನ್ನಡದ ಕಲಿ ಕೆರಳಿ
ಮೈನಿಮಿರಿ ನಿಲ್ಲಲಿ!
ನಾಡೆಲ್ಲ ಮೇಳವಿಸಿ

ನಾಡಗುಡಿಯೇರಿಸುವ!
ಮತ್ತೆ ಮೊಳಗಲಿ ಶಂಖ
ಕೊಂಬುಕಹಳೆಯ ಕೂಗು!
ತಾಯಿ ಮೂರ್ತಿಯನೆತ್ತಿ
ಕಮಲಪೀಠದೊಳಿರಿಸಿ
ಅಮರ ಗಂಗಾಸ್ನಾನ!
ಪುಷ್ಪ ಪೂಜಾ ಧ್ಯಾನ!
ಪುಣ್ಯ ಪ್ರಣತೆಯ ಜ್ಞಾನ
ನಾಡೆಲ್ಲ ಬಳಸಿ
ತಾಯಿ ಕನ್ನಡದೊಡತಿ
ಗದ್ದುಗೆಯೊಳಿರಿಸಿ! ೩೫

ಕನ್ನಡವನ್ನು ತಾಯಿ ರಾಜರಾಜೇಶ್ವರಿ ಎಂದು ಭಾವಿಸುವ, ಆರಾಧಿಸುವ, ಹರಿದು ಹಂಚಿ ಹೋಗಿರುವ ನಾಡನ್ನು ಮರಳಿ ಕಟ್ಟುವ ಪರಿಕಲ್ಪನೆ ನವೋದಯ ಕಾಲದ ಕವಿಗಳ ಕನಸು. ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯ ಬಂದ ಹೊಸದರಲ್ಲಿ ಈ ಪರಿಕಲ್ಪನೆ ಕವಿಗಳ ನರನಾಡಿಗಳಲ್ಲಿ ಭಗ್ಗನೆ ಹತ್ತಿಕೊಂಡು ತಮ್ಮೆಲ್ಲ ಭವ್ಯ ಕನಸುಗಳನ್ನು ತಮ್ಮ ಕವಿತೆಗಳಲ್ಲಿ ಅವರು ಆವಾಹಿಸಿದ್ದಾರೆ. ಇದು ನಾಡಿನ ಶುಭೋದಯದ ಕನಸು. ಅ ಕನಸಿನಲ್ಲಿ ವಿಹರಿಸುವಷ್ಟಕ್ಕೆ ಅವರು ವಿರಮಿಸಲಿಲ್ಲ. ಮುಂದೆ ಸಾಹಿತ್ಯ ಹಾಗೂ ನಾಡಿನ ಶುಭೋದಯಕ್ಕೆ ನಿಶಾಂತ ಶ್ರಮಿಸಿದ ಬಿ.ಎಂ. ಶ್ರೀಕಂಠಯ್ಯ, ಪಂಜೆ ಮಂಗೇಶರಾವ್, ಗೋವಿಂದ ಪೈ, ಮುಳಿಯ ತಿಮ್ಮಪ್ಪಯ್ಯ, ಕಡೆಂಗೋಡ್ಲು ಶಂಕರಭಟ್ಟ ಕನ್ನಡದ ಅಶ್ವಿನಿ ದೇವತೆಗಳಾದ ಪ್ರೊ. ವೆಂಕಣ್ಣಯ್ಯ ಹಾಗೂ ಎ.ಆರ್. ಕೃಷ್ಣಶಾಸ್ತ್ರಿ, ಆಚಾರ್ಯ ಡಿ.ಎಲ್. ನರಸಿಂಹಾಚಾರ್., ತೀನಂ. ಶ್ರೀಕಂಠಯ್ಯ, ಶಿ.ಶಿ. ಬಸವನಾಳ ಪ್ರೊ. ನಂದೀಮಠ, ಕುವೆಂಪು -ಹೀಗೆ ಕನ್ನಡದ ಈ ತಲೆಮಣೆಗಳ ಪರಿಶ್ರಮದ ಮೇಲೆ ಕನ್ನಡದ ಸೌಧ ನಿರ್ಮಾಣವಾಗಿದೆ.

ನವೋದಯ ಪರಿಸರದ ಕವಿಯಾದ ಟಿ.ಎನ್. ಮಹದೇವಯ್ಯನವರು ಅಕೆಡೆಮಿಕ್ ಪರಿಸರದಲ್ಲಿ ಬೆಳೆಯುವ ಭಾಗ್ಯ ಪಡೆಯಲಿಲ್ಲ. ಅವರು ನಾಡಿನ ಸಾಹಿತ್ಯ ಪರಿಸರದಲ್ಲಿ ಆಗುತ್ತಿದ್ದ ಬದಲಾವಣೆಯನ್ನು ಸೂಕ್ಷ್ಮವಾಗಿ ಗಮನಿಸುತ್ತ ತಮ್ಮ ಆಡಳಿತಾತ್ಮಕ ಪರಿಸರದಲ್ಲಿ ತಮ್ಮ ಪ್ರತಿಭೆ ವಿಕಾಸಗೊಳ್ಳಲು ಸ್ವಂತದ ಪರಿಶ್ರಮವನ್ನು ಆಧರಿಸಿ ತಮ್ಮ ಸೃಜನಪ್ರತಿಭೇಯನ್ನು ಓದಿನ ಮೂಲಕ ಅಭಿವೃದ್ಧಿಪಡಿಸಿಕೊಂಡರು. ಈ ಕವಿಪ್ರತಿಭೆ ಸ್ವಯಂಭುವಾದುದು, ಯಾವ ಸಾಹಿತ್ಯ ಚಳವಳಿಗಳಿಗೂ, ವ್ಯಕ್ತಿಗಳ ಗುಂಪಿನ ಪ್ರಭಾವಗಳಿಗೂ ಒಳಗಾಗದೆ ತನಗೆ ತಾನೇ ವಿಕಸಿತವಾದ ವನಸುಮ.

ಕನ್ನಡ ತಾಯಿಯನ್ನು ತನ್ನ ಸಮಸ್ತ ಸಾಹಿತ್ಯ ಚಟುವಟಿಕೆಯ ಕರ್ತೃತ್ವಶಕ್ತಿಯಾಗಿ ಭಾವಿಸುವ ಕವಿ ಆ ಕನ್ನಡ ತಾಯಿಯಲ್ಲಿ ತನ್ನ ಮನದ ತೊಳಲನ್ನು ಹೇಳಿಕೊಂಡಿರುವರು "ಅರ್ಪಣ"ವೆನ್ನುವ ಕವಿತೆಯಲ್ಲಿ. ತಾನು ಕಟ್ಟಿದ ಹೂಮಾಲೆಯ ಹಿಡಿದು ಕನ್ನಡ ತಾಯಿಯ ಕರುಣೆಗಾಗಿ ಹಂಬಲಿಸಿರುವ ಕವಿಯ ಬೇಡಿಕೆಯಿದು:

ಕನ್ನಡದ ಉಸಿರಿನಲ್ಲಿ ಬದುಕುವತನಕವು ಬದುಕಿ,
ಕನ್ನಡದ ಸಂಸ್ಕೃತಿಯ ಒಡಗೂಡಿ ಒಂದಾಗಿ,
ಕನ್ನಡದ ಉಸಿರಿನಲಿ ನನ್ನ ಸಾವಿರುವಂತೆ
ವರವಿತ್ತು ಹರಸು ಬಾ, ಇನಿತೊಂದು ಸಾಕು!
ಕೈ ಕುಗ್ಗುತಿದೆ ಬಾರ, ಮಾಲಿಕೆಯ ಸ್ವೀಕರಿಸು!
ಕಿರಿದೆಂದು ತೆಗಳದಿರು, ಎದೆಯೊಲವು ಕಿರಿದಲ್ಲ.[೩೬]

ತನ್ನ "ಸೃಜನ" ದಲ್ಲಿ "ಗಾಯಕನ ಕೊರಳಿಲ್ಲ, ಗಾನದಿಂಪಿನಿತಿಲ್ಲ ತಾಳಲಯ ಶ್ರುತಿ ಹಿಡಿದ ರಾಗ ರಚನೆಯು ಇಲ್ಲ. ಹೃದಯಮಂದಿರದಲ್ಲಿ ಮುರಿದೊಂದು ವೀಣೆಯಿದೆ; ತನುವಿನಾಸರೆಯಲ್ಲಿ ನಾಡಿ ನರ ತಂತಿಯಿದೆ., ಝುಂಕೃತಿಯ ನಾದದಲ್ಲಿ ಹೊನಲುಕ್ಕಿ ತುಟಿಬಿಡಿಸಿ ಮನ ನುಡಿದ ತೊದಲನುಡಿ ಸ್ವೀಕರಿಸು"[೩೭] ಎಂದು ಕವಿ ಪ್ರಾರ್ಥಿಸುವಲ್ಲಿ ವಿನಯವಂತಿಕೆಯಿದೆ. ನನ್ನಲ್ಲಿ "ಇಲ್ಲ" ಎನ್ನುವ ನಕರಾತ್ಮಕ ಧೋರಣೆಯೇ ಕವಿಯ ಸಕಾರಾತ್ಮಕ ಗುಣವಾಗಿದೆ. ಏಕೆಂದರೆ, ಕವಿಯ ಸೃಜನಪ್ರತಿಭೆ ಪ್ರತಿಫಲಾಪೇಕ್ಷೆಯಿಲ್ಲದ್ದು, "ಸ್ವಾಂತಸ್ಸುಖಾಯ" ಎನ್ನುವ ಸಕಾರಾತ್ಮಕ ಧೋರಣೆಯದ್ದು.

**ಕಾವ್ಯ ಕರ್ಮಲೋಕ:**

ಮಳೆಯ ನೀರೆಲ್ಲ ಹೊಳೆಯಾಗಿ ಹರಿಯುವುದಿಲ್ಲ, ಹರಿಯದ ಹೊಳೆಗಳೆಲ್ಲ ಲೋಕದ ಕಣ್ಣಿಗೆ ಕಾಣುವುದೂ ಇಲ್ಲ. ಕಂಡ ನದಿಗಳೆಲ್ಲ ದೊಡ್ಡವಲ್ಲ. ಕಂಡ ನದಿಗಳಷ್ಟೆ ನದಿಗಳಲ್ಲ.[೩೮] ಈಗ ದಿವಂಗತರಾಗಿರುವ ಶ್ರೀ ಟಿ.ಎನ್. ಮಹದೇವಯ್ಯನವರು ಕನ್ನಡ ಕವಿತಾ ಪ್ರಪಂಚಕ್ಕೆ ಕಾಣಬೇಕಾದ ಕಾಲದಲ್ಲಿ ಕಾಣಲಿಲ್ಲ. ಕಾಣದಂತೆ ಹರಿದು ಕಣ್ಮರೆಯಾದ ಅವರು ಮುನ್ನೂರಕ್ಕೂ ಮೀರಿದ ಕವನಗಳನ್ನು ೧೯೩೦-೬೦ ಅವಧಿಯಲ್ಲಿಯೇ ಬರೆದಿದ್ದಾರೆ. ಆದರೆ, ಅವೆಲ್ಲವೂ ಹಸ್ತಪ್ರತಿರೂಪದಲ್ಲಿದ್ದು ಅವರ ನಿಧನಾನಂತರ ೧೯೯೦ ರಲ್ಲಿ "ಸಮಗ್ರಕಾವ್ಯ" ರೂಪದಲ್ಲಿ ಪ್ರಕಟವಾಗಿ ಸಾಹಿತ್ಯಲೋಕದ, ಗಮನಕ್ಕೆ ಬಂದಿತು ಎಂಬುದನ್ನು ನಾವು ಮರೆಯಬಾರದು.

ಕನ್ನಡ ಕವಿತೆ ಈಗ ಒಂದು ಬೆಳವಣಿಗೆಯ ಅವಸ್ಥೆಯನ್ನು ಮುಟ್ಟಿ ನವ್ಯ, ನವ್ಯೋತ್ತರ, ಬಂಡಾಯ ಈ ಹಂತಗಳನ್ನೆಲ್ಲಾ ದಾಟಿ ಈಗ ಸ್ಥಗಿತಸ್ಥಿತಿಯಲ್ಲಿ ತೊಳಲುತ್ತಿದೆ. ಟಿ.ಎನ್. ಮಹದೇವಯ್ಯನವರ ಕವಿತೆಗಳು ಅಂದಿನ ದಿನ ಬೆಳವಣಿಗೆಯನ್ನು ಮೈಗೂಡಿಸಿಕೊಂಡ ನವೋದಯದ ಮಾನಸಿಕ ನೆಲೆಯಲ್ಲಿ ಜನ್ಮ ತಾಳಿದವು. ಜೀವನೋತ್ಸಾಹ, ಹೊಸತನದ ಅಭಿವ್ಯಕ್ತಿ, ಛಂದಸ್ಸಿನ ಬಳಕೆಯಲ್ಲಿ ಪ್ರಯೋಗಪ್ರಿಯತೆ ಅಂದಿನ ಕವಿಗಳಲ್ಲಿ ಇದ್ದಷ್ಟು ಈಗ ಇಲ್ಲ. ೧೯೩೦ರ ಅವಧಿಯಲ್ಲಿ ಕಾವ್ಯಾಭಿವ್ಯಕ್ತಿಗೆ ಕವಿಗಳಾದವರು ಎಷ್ಟು ಶ್ರಮಿಸುತ್ತಿದ್ದರೆಂಬುದು ಇಂದಿನವರಿಗೆ ತಿಳಿಯದು.[೩೯] ದಿವಂಗತ ಶ್ರೀ ಟಿ.ಎನ್. ಮಹದೇವಯ್ಯನವರು ಆ ಅವಧಿಯಲ್ಲಿ ತಮ್ಮದೇ ಆದ ಅಭಿವ್ಯಕ್ತಿಗೆ ಕೊರಳು ಹಾಗೂ ಮನಸ್ಸು ಕೊಟ್ಟು ಶ್ರದ್ಧೆಯಿಂದ ಕಾವ್ಯರಚನೆ ಮಾಡಿದರು. ಪ್ರಧಾನವಾಗಿ ಕುವೆಂಪು ಅವರ ಛಂದೋಮಾರ್ಗದ ಪ್ರಭಾವಕ್ಕೆ ಅವರು ಒಳಗಾದಂತೆ ತೋರಿದರೂ ತಮ್ಮ ಎದೆಯ ದನಿಗೆ ನಿಷ್ಠರಾದರು. ವಿಷಯ ವೈವಿಧ್ಯತೆ ಅವರ ಕವನಗಳಲ್ಲಿ ಸ್ಫುಟವಾಗಿದೆ. ಭಾವಗಳಲ್ಲಿ ಒಮ್ಮೊಮ್ಮೆ ಮೊದಲ

ನೋಟಕ್ಕೆ ರವೀಂದ್ರರ, ಕುವೆಂಪುರವರ ನೆನಪನ್ನುಂಟುಮಾಡಿದರೂ ಒಟ್ಟಾರೆ ಅವರ ಕವಿತೆಗಳಲ್ಲಿ ನವೋದಯಕಾಲದ ಸರ್ವಲಕ್ಷಣಗಳೂ ಮೈಗೂಡಿರುವುದನ್ನು ಗುರುತಿಸಬಹುದು.

ಟಿ.ಎನ್. ಮಹದೇವಯ್ಯನವರು "ಕವನ ಕಾಮಿನಿ" ಎನ್ನುವ ಕವಿತೆಯಲ್ಲಿ ತಮ್ಮ ಕವಿತೆಗಳ ವಸ್ತು ಹಾಗೂ ತಮ್ಮ ಕವಿತೆಗಳಲ್ಲಿನ ಸಂಗೀತದ ಸಾಹಚರ್ಯವನ್ನು ಪ್ರಸ್ತಾಪಿಸಿರುವರು.

ಸಪ್ತಸಾಗರ ತಳದ ನವರತ್ನ ಮುತ್ತುಗಳ
ದೀಪ್ತ ಬಾನಿನ ತುದಿಯ ಚಿತ್ರವೈಚಿತ್ರ್ಯಗಳ
ಕೋದು ಕವನದಿ ಕಟ್ಟಿ ಇಂದುಕಲೆ ಬೊಟ್ಟಿಟ್ಟು
ನಿನಗೊಂದು ಹಾರವನು ನಾ ತರುವೆ ರಚಿಸಿ
ಮಿಂಚಿನಂಚನು ನೆಯ್ದು ವಸನ ವಸ್ತ್ರವನುಡಿಸಿ
ಮಿಸುನಿಕಾಂತಿಯ ತೀರ್ಥ ಮಣಿಮುಕುಟ ತೊಡವಿರಿಸಿ
ನಿತ್ಯರೂಪವ ನುಡಿದು ಬಗೆಗಟ್ಟಿ ಬಣ್ಣಿಸುವೆ.
ಷಡ್ಜಋಷಭವ ನುಡಿಸಿ ಗಮಕ ಪಂಚಮ ಹರಿಸಿ
ನವರಾಗ ಗೀತೆಗಳ ತಾಳಲಯವನುಸರಿಸಿ
ಹೊಸರಾಗ ಹೊಸಹಾಡು ಹೊಸಹುಟ್ಟು ಅಹುದೆನಿಸಿ
ಕಸದಿಂದ ರಸವೊಸರಿ ಕಣ್ಕಟ್ಟಿ ನಿಲ್ಲುವಂತೆ
ಪದಬಂಧ ಲಾಲಿತ್ಯ ಮಾಧುರ್ಯ ಮೈವೆತ್ತು
ಸುಸ್ವರದಿ ಹೊರಹೊಮ್ಮಿ ನವರಸದಿ ಬೆರೆತು
ಸತ್ಯಸೌಂದರ್ಯಗಳ ಸಮ್ಮಿಲನ ಝೇಂಕರಿಸಿ
ನಿತ್ಯಗೀತೆಯ ಹಾಡಿ ಮನವೊಲಿಸ ಬಯಸುವೆನು.[೪೦]

ಕಾವ್ಯದಲ್ಲಿ ಪದಬಂಧ, ಲಾಲಿತ್ಯ ಮಾಧುರ್ಯಗಳ ಜೊತೆಗೆ ಷಡ್ಜ, ಋಷಭ, ಗಮಕ, ಪಂಚಮಗಳಿರಬೇಕು ಎಂಬ ಮಾತಿನಲ್ಲಿ ಸಾಹಿತ್ಯಕ್ಕೆ ಸಂಗೀತದ ಕಂಪು ಬೆರೆಯಬೇಕೆನ್ನುವ ಕವಿಯ ಹಂಬಲವನ್ನು ಗುರುತಿಸಬಹುದು. ಈ ಸಂದರ್ಭದಲ್ಲಿ ನೆನಪಾಗುವ ಮತ್ತೊಬ್ಬ ಕವಿಯೆಂದರೆ, ಪು.ತಿ. ನರಸಿಂಹಾಚಾರ್.

ಟಿ.ಎನ್. ಮಹದೇವಯ್ಯನವರಿಗೆ ಶಾಸ್ತ್ರೀಯ ಸಂಗೀತದಲ್ಲಿರುವ ಆಸಕ್ತಿಯ ಕಾರಣದಿಂದಾಗಿ. ಅವರು ವೀಣೆ ನುಡಿಸುವುದನ್ನು ಕಲಿತರು. 'ವೀಣೆಗತಿ' ಕವಿತೆಯಲ್ಲಿ-

ಏಳು ಏಳೆಲೆ ವೀಣೆ!
ಕೊರಲು ಕೊಂಕಿಸು ಜಾಣೆ
ಕೊಳಲ ದನಿ ಇನಿದಾಗಿ

ಈ ನೋಟಕಣೆಯಾಗಿ
ತಾನ ತಾನಕು ಚಿಮ್ಮಿ
ನಾದ ಮಾಧುರ್ಯವನ್ನು
ಗಾನವೇ ಹೊನಲಾಗಿ
ಉಕ್ಕಿ ಹರಿವಂತೆ!
ಏಳೇಳು ಎಲೆ ವೀಣೆ![೪೧]

ಎಂದು ಗಾಯನದಲ್ಲಿ ಕೊಳಲು, ವೀಣೆಗಳು ನಾದೋಪಾಸನೆಗೆ ಪಕ್ಕವಾದ್ಯಗಳಾಗಿ ವಹಿಸುವ ಪಾತ್ರವನ್ನು ಹೇಳಿರುವರು.

ಸ್ವತಃ ವೈಣಿಕರಾಗಿದ್ದ ಟಿ.ಎನ್. ಮಹದೇವಯ್ಯನವರು ಕವಿತೆಯನ್ನು ಕುರಿತು ಮೆಚ್ಚುಗೆಯನ್ನು ಮತ್ತು ಕವಿತೆಯ ಭಾವಕ್ಕೆ ಸಂಗೀತದ ಸ್ಪರ್ಶಗುಣ ಹೊಂದಿಕೆಯಾಗುವ ಮೂಲಕ ಕವಿತೆ ಹೇಗೆ ಸಹೃದಯಮನಕ್ಕೆ ಆಹ್ಲಾದಕಾರಿಯಾಗಬೇಕೆನ್ನುವುದನ್ನು ಈ ಕವನದಲ್ಲಿ ಹೇಳಿರುವರು.

ವಿಚಿತ್ರ ವ್ಯೋಮದ
ವಿಸ್ತೃತ ನೆಲೆಯಲಿ
ಕೆತ್ತಿದ ಕುಸುರಿದ ಕಲೆಯಿಹುದು
ಕುಂಚಿನಲಂಪಿಗೆ
ರಸವೊಸರೆಸೆಯುವ
ಚಿತ್ರವಿಚಿತ್ರದ ಮುಗಿಲಿಹವು
ನಿಶೀಥ ರಾತ್ರಿಯ
ಸುಂದರ ಸ್ವಪ್ನದಿ
ಉಜ್ವಲ ಕಾವ್ಯದ ಕೃತಿಯಿಹುದು
ಅಗಣಿತ ತಾರೆಯ
ಬೆಳಕಿನ ಮಿಲನದಿ
ಕಾವ್ಯಸುಧಾರಸ ಹೊಮ್ಮಿಹುದು.[೪೨]

ಕವಿಯಲ್ಲಿ ಅಂತರ್ಗತವಾಗಿರುವ ನಿಗೂಢಶಕ್ತಿಯ ಅಭಿವ್ಯಕ್ತಿಗೆ ಪ್ರಕೃತಿಯ ಮನೋಹರ ದೃಶ್ಯವೂ ಕಾರಣವಾಗುತ್ತದೆ. ನೆಲ -ಮುಗಿಲುಗಳ ವೈವಿಧ್ಯಮಯವಾದ ಚಟುವಟಿಕೆಗಳು ಕವಿಯ ಕಾವ್ಯಕ್ಕೆ ವಸ್ತುವಾಗುತ್ತವೆ. ಮೇಲಿನ ಕವಿತೆಯಲ್ಲಿ ಕವಿ ಆಕಾಶದ ಅಂಗಳದಲ್ಲಿ ವರ್ಣಜಾಲವನ್ನು ಹರಡಿರುವ ಸೃಷ್ಟಿವ್ಯಾಪಾರದ ಅಪೂರ್ವತೆಯಲ್ಲಿ ಮಹಾನ್ ಶಿಲ್ಪಿಯೊಬ್ಬನ ಕುಸುರಿಕೆಲಸದ ಕಲೆಯನ್ನು ಗುರುತಿಸುವನು. ಆಕಾಶದಲ್ಲಿ ಚೆಲ್ಲಿದ ವರ್ಣದ ಓಕುಳಿಯನ್ನು ಕಂಡು ಚಿತ್ರಕಲಾವಿದನೊಬ್ಬ ಅಲ್ಲಿನ ಚಿತ್ರವಿಚಿತ್ರದ ಮುಗಿಲಿಗೆ ತನ್ನ ಬಣ್ಣಗಳಿಂದ ಜೀವತುಂಬಿದಂತೆ ಕಾಣುವನು. ನಟ್ಟಿರುಳಿನ ದಿವ್ಯಪ್ರಶಾಂತತೆಯಲ್ಲಿ ಸುಂದರ ಸ್ವಪ್ನಗಳನ್ನು

ಕಾಣುವ ಕವಿಯ ಸೃಜನ ಪ್ರತಿಭೆಯನ್ನು ಗುರುತಿಸುವನು. ಆಗಸದ ಲಕ್ಷ ಲಕ್ಷ ತಾರೆಗಳ ಬೆಳಕಿನ ಮಿಲನದಲ್ಲಿ ಕಾವ್ಯದ ಸೆಲೆಯುಕ್ಕುವುದನ್ನು ಕಾಣುವನು.

ಕವಿ ತನ್ನ ಪಾಡಿಗೆ ತಾನು ಲೋಕ ಗುರುತಿಸಲಿ, ಗುರಿತಿಸದಿರಲಿ ತನ್ನ ಎದೆಯ ದನಿಗೆ ನಿಷ್ಠನಾಗಿ ನಿರಂತರವಾಗಿ ಸೃಜನಕ್ರಿಯೆಯಲ್ಲಿ ತೊಡಗುವನು. ಕವಿಯೂ ಎಲ್ಲರಂತೆ ರಾಗ ಭಾವಗಳಿಂದ ಕೂಡಿದ ಲೌಕಿಕ. ತನ್ನ ಕವಿತೆಗಳನ್ನು ಲೋಕ ಮೆಚ್ಚಲಿ ಎನ್ನುವ ಅಂತರಂಗದ ಆಸೆ ಕವಿಗೂ ಇದೆ. ತನ್ನ ಕವಿತೆಯಲ್ಲಿನ ದೋಷಗಳನ್ನು ತಿಳಿಯಹೇಳುವ ಸಹೃದಯ ವಿಮರ್ಶಕರ ಬಗೆಗೆ ಅವನಿಗೂ ಗೌರವವಿದೆ. ಏಕೆಂದರೆ, ಕವಿಯ ಬೆಳವಣಿಗೆಯಲ್ಲಿ ವಿಮರ್ಶಕ ಮಹತ್ವದ ಪಾತ್ರವಹಿಸುವನು "ಹೊಗಳದಿದ್ದರೂ ಸಾಕು ಬೊಗಳಿಕೆಯು ಇರಬೇಕು"[೪೩] ಎನ್ನುವ ಸಾಲಿನಲ್ಲಿ ನಿಷ್ಪಕ್ಷಪಾತ ವಿಮರ್ಶೆಗೆ ಕವಿ ಮನ ಹಾತೊರೆದಿರುವುದನ್ನು ಕಾಣಬಹುದು. ತೆಗಳಿಕೆ ಹೊಗಳಿಕೆಗಳನ್ನು ಸಮಾನವಾಗಿ ಸ್ವೀಕರಿಸಿ ಕವಿ ತನ್ನ ಸೃಜನಕ್ರಿಯೆಯಲ್ಲಿ ಸದಾ ಮಗ್ನನಾಗಿರಬೇಕೆನ್ನುವ ಕವಿಮಾತನ್ನು ಇಲ್ಲಿ ಹೇಳಲಾಗಿದೆ.

ಹೊಗಳದಿದ್ದರು ಸಾಕು
ಬೊಗಳಿಕೆಯು ಇರಬೇಕು
ಬೊಗಳಿ ಬೈದರು ಚಿತ್ತ
ನಾ ಬರೆದೆ ಬರೆದೆ
ಬಿಳಿ ಹಾಳೆ ಕರಿ ಮಸಿಯು
ಹಾಳೆ ಹಾಳೆಗಳು!
ನಾ ಸತ್ತು ಶವವಾಗಿ
ಹಿಡಿ ಮಣ್ಣು ಕೆಳಗುರಳಿ
ಎದೆಯ ಮೇಲೆಳೆದಾಗ
ಕಲ್ಲು ಚಪ್ಪಡಿ ಹಾಸಿ
ಅಲ್ಲಿ ಕಡೆ ಹಾಯ್ಸಿ
ಮಸಣದಂಚನು ಬಿಟ್ಟು
ಮರಳುವಾಗ
ಕೈತುಂಬ ಚೆಲ್ಲಿದರೊ
ನನ್ನದೆಯ ಮೇಲೆಲ್ಲ
ಹಿಡಿ ಹೂವು ಹೊನ್ನು![೪೪]

ಸಾಮಾನ್ಯವಾಗಿ ಪ್ರತಿಯೊಬ್ಬ ಕವಿಯೂ ಪ್ರಕೃತಿಯ ಮನೋಹರವಾದ ಲೀಲಾವಿಲಾಸಗಳನ್ನು ನೋಡಿ ಆಶ್ಚರ್ಯಗೊಳ್ಳುವನು. ಆ ಸೃಷ್ಟಿಲೀಲೆಯ ವಿಚಿತ್ರಗಳು ಅವನ ಕವಿತೆಗಳಿಗೆ ಬತ್ತದ ಸ್ಫೂರ್ತಿ ನೀಡುತ್ತವೆ. ಇಲ್ಲಿ ಕವಿಯು ಪ್ರಕೃತಿ ವ್ಯಾಪಾರವನ್ನು ನೋಡುತ್ತ ಅದರಲ್ಲಿ ತನ್ನ ಇರುವಿಕೆಯನ್ನು ಕಳೆದುಕೊಂಡು, ಒಂದು

ದಿವ್ಯಮನಃಸ್ಥಿತಿಯಲ್ಲಿ ತನ್ನ ಸೃಜನಪ್ರತಿಭೆಯನ್ನು ಮೆರೆಯುವನು. 'ಕವಿವಾಣಿ' ಎಂಬ ಕವಿತೆಯಲ್ಲಿ ಪ್ರಕೃತಿಯಿಂದ ಕವಿ ಪಡೆದ ದಿವ್ಯಾನುಭವವನ್ನು ಹೀಗೆ ಮೈದುಂಬಿ ವರ್ಣಿಸುವನು.

ನಿಶಿದಿವಾ ಉಷೆ ಸಂಜೆ ಸೌಂದರ್ಯ ಸೀಮೆಯಲ್ಲಿ
ಋತುನಿಯಮ ಭೇದಗಳ ವರ್ಣ ವೈಚಿತ್ರ್ಯದಲ್ಲಿ
ತಿರೆಯ ತೆರೆಬಿಚ್ಚಿ ಹರಹಿ ಚಿತ್ರಿಸುತಿರುವ
ನಿನ್ನ ಪ್ರತಿಭೆಯ ಕಲೆಗೆ ಇದೋ ನನ್ನ ಕಾಣಿಕೆಯು![೪೫]

ಪ್ರಕೃತಿ ಋತುನಿಯಮ ಭೇದಗಳ ವರ್ಣವೈಚಿತ್ರ್ಯದಲ್ಲಿ ಲೋಕವ್ಯಾಪಾರದ ತೆರೆಬಿಚ್ಚಿ ಹರಡಿ ಅದನ್ನು ಚಿತ್ರಿಸುತ್ತಿರುವ ಕವಿಪ್ರತಿಭೆಯನ್ನು ಕಂಡು ಕವಿ ಆಶ್ಚರ್ಯ ವ್ಯಕ್ತಪಡಿಸುತ್ತಾನೆ. ಜೀವದ ಆನಂದದಲ್ಲಿ ಸೃಷ್ಟಿಯು ಕವಿ ಮನಸ್ಸಿಗೆ "ನಿಚ್ಚಂ ಪೊಸತು".[೪೬] ದಿನದಿನಕ್ಕೂ ಪ್ರಕೃತಿ ನವನವೀನವಾಗಿ ಕಾಣಬರುತ್ತದೆ. ದೇವನ ಸಾನ್ನಿಧ್ಯವಾದ ಪ್ರಕೃತಿಯು ಕವಿಯ ಮನಸ್ಸಿನ ಮೇಲೆ ಬೀರುವ ಪ್ರಭಾವವನ್ನೇ ಆ ನಿಗೂಢ ರಹಸ್ಯದ ಬೆಡಗನ್ನು, ಸೌಂದರ್ಯವನ್ನು ಟಿ.ಎನ್. ಮಹದೇವಯ್ಯನವರು ಸೊಗಸಾಗಿ ಮೇಲಿನ ಸಾಲುಗಳಲ್ಲಿ ಹೇಳಿರುವರು.

ಮುಂಜಾವಿನ ಸೂರ್ಯೋದಯ ಪ್ರಕೃತಿಯ ನಿತ್ಯವ್ಯಾಪಾರಗಳಲ್ಲಿ ಒಂದು. ಕವಿಗೆ ಅದಷ್ಟೇ ಆಗಿರದೆ ಆಕೆ ಲೋಕದ ನಿದ್ದೆಯನ್ನು ಕಳೆದು ತನ್ನ ವರದಹಸ್ತವನ್ನೆತ್ತಿ ಲೋಕವನ್ನು ಉದ್ಧರಿಸುವ ಲೋಕಮಾತೆ, ದೇವಿಯಾಗಿ ಕಾಣಿಸುವಳು. ಲೋಕದ ಜನತೆಯನ್ನು ಜಡತೆ ಆವರಿಸಿದೆ, ಅದರಿಂದಾಗಿ ಪ್ರಗತಿ ಕಾಣದಾಗಿದೆ. ವೇದಶಾಸ್ತ್ರಗಳೆಲ್ಲ ನಿದ್ರಿಸುತ್ತಲಿವೆ. ತತ್ವಬೋಧೆಗಳೆಲ್ಲ ಎಲ್ಲೋ ಕಣ್ಣುಮುಚ್ಚಿ ನಿದ್ರಿಸುತ್ತಿವೆ. ಇದರ ಪರಿಣಾಮವಾಗಿ ಬಾಳು ಬರಿದಾಗಿದೆ, ಗೋಳು ಹಿರಿದಾಗಿದೆ. ಜನತೆಗೆ ಒಂದು ನಿರ್ದಿಷ್ಟ ಗುರಿಯಿಲ್ಲದೆ ಬದುಕು ಶೂನ್ಯವಾಗಿದೆ. ವಿಜ್ಞಾನದ ಶೋಧ ಬೆರಗು ಹುಟ್ಟಿಸಿದೆ. ಆದರೆ ವಿಜ್ಞಾನದ ಫಲಗಳು ಜನತೆಯ ಬದುಕಿಗೆ ಮಂಗಳಕರವಾಗದೆ ಅದು ಅನಿಷ್ಟಫಲಗಳನ್ನು ನೀಡುತ್ತಿದೆ. ಈ ಘಟ್ಟದಲ್ಲಿ ಸಮುದಾಯದ ಅಭ್ಯುದಯಕ್ಕೆ ಉಷೆ ಮಂಗಳದ ಬೆಳಕು ಚೆಲ್ಲಬೇಕಾಗಿದೆ. ಕವಿಗೆ ಪ್ರಿಯವಾದ ಕೋಗಿಲೆ ಮಂಗಳದ ಮಧುರ ಕೂಜನ ಹೊಮ್ಮಿಸುವ ಇನ್ನೊಂದು ದಿವ್ಯಶಕ್ತಿ -

ಕೋಗಿಲೆಯದೆಲ್ಲಿಯೋ
ಕೂಗುತಿದೆ ದೂರ!
ಉಷೆಯು ಬರಲಿಹಳೆಂದು
ಸಾರುತಿದೆ ದೂರ[೪೭]

ಇಂತಹ ಮಂಗಳದ ವಾತಾವರಣದಲ್ಲಿ ಉಷೆ ಮೂಡಬೇಕೆನ್ನುವುದು ಕವಿಯ ಹಂಬಲ. ಅದಕ್ಕಾಗಿಯೇ ಕವಿ ಉಷೆಗೆ ಆಹ್ವಾನ ನೀಡುತ್ತಿರುವರು-

ಬಾ ಉಷೆಯೇ! ಮೂಡಿ ಬಾ!
ಬಾ ದೇವಿ! ಬಾರೆ!

ಮುಂಬೆಳಗೆ ಮುಂದಿಟ್ಟು
ಜಗದ ನಿದ್ದೆಯ ಕಳೆದು
ವರದಹಸ್ತವನೆತ್ತಿ
ತಿರೆಯ ಹರಸಲು ಬಾರ!
ಮದ್ದು ಗುಂಡಿನ ಗುಡುಗು
ಸಿಡಿಲು ಮಿಂಚುಗಳಲ್ಲಿ
ಯುದ್ಧವಾಹಿನಿ ಹರಿದು
ರಕ್ತಕಾಲುವೆ ಸುರಿದು
ರುಂಡಮುಂಡಗಳುರುಳಿ
ಭೂತ ನಾಟ್ಯದಿ ಲೋಕ
ಬೆದರಿ ಬೆಚ್ಚುತಲಿಹುದು! [೪೮]

ಲೋಕದಲ್ಲಿ ಶಾಂತಿ ಸಮಾಧಾನ ಹರಡಲು ಉಷೆಯ ಆಗಮನವಾಗಬೇಕೆನ್ನುವುದು ಕವಿಯ ಅಂತರಾಳದ ಮೊರೆ. ನವೋದಯಕಾಲದ ಕವಿಗಳು ಯುದ್ಧದ ಭೀಕರ ಪರಿಣಾಮಗಳನ್ನು ಕಂಡವರು; ಸ್ವಾತಂತ್ರ್ಯಪೂರ್ವದ ಕಾಲದಲ್ಲಿ ಬ್ರಿಟಿಷರ ದಬ್ಬಾಳಿಕೆಯಲ್ಲಿ ನೊಂದು ಬೆಂದವರು, ಪ್ರಗತಿಗೆ ವಿರುದ್ಧವಾಗಿ ಸಂಪ್ರದಾಯಗಳು ತಲೆಯೆತ್ತಿದ್ದುದನ್ನು, ಅಜ್ಞಾನ ತಾಂಡವವಾಡುತ್ತಿದ್ದುದನ್ನು ಸ್ವತಃ ಅನುಭವಿಸಿದವರು. ಇವುಗಳಿಂದ ಪಾರಾಗಲು ದೈವವೊಂದೇ ಆಧಾರವೆಂದು ನಂಬಿದವರು. ಅವರಿಗೆ ಉಷೆಯ ಉದಯ ಪ್ರಗತಿಯ ಸಂಕೇತವಾಗಿ ಕಾಣಬರುತ್ತದೆ.[೪೯] ಆ ಭಾವುಕ ಮನಸ್ಸು ಉಷೆಯನ್ನು ದೇವಿಯೆಂದು, ಲೋಕಮಾತೆಯೆಂದು ಭಾವಿಸಿ ಲೋಕದ ಕಷ್ಟಗಳಿಗೆ ಪರಿಹಾರಗಾಣಿಸಲು ಮೊರೆಯಿಡುತ್ತದೆ. 'ಬಾ ಉಷೆಯೇ! ' ಎನ್ನುವ ದೀರ್ಘ ಕವಿತೆ ನವೋದಯಕಾಲದ ಕವಿಗಳ ಮನಸ್ಸನ್ನು ಗ್ರಹಿಸಲು ತೆರೆದ ಕಿಟಕಿಯಾಗಿದೆ. ಈ ಕವಿತೆಯ ರಚನಾಕಾಲ ಸೂಚಿಸಿಲ್ಲ. ಬಹುಶಃ ಸ್ವಾತಂತ್ರ್ಯಪೂರ್ವಕಾಲದ ರಚನೆ ಇದಾಗಿರಬಹುದು.

'ವನಸುಮ' ಕವಿತೆ ಅರಳಿದ ಕುಸುಮವೊಂದನ್ನು ನೋಡಿದ ಕವಿ ಅದನ್ನು ಮನದಣಿಯ ಕಣ್ದಣಿಯೆ ನೋಡಿ ಹಿಗ್ಗುವ ಒಂದು ಮುಗ್ಧ ಚಿತ್ರ. 'ಮುಗಿಲು' ಒಂದು ಶಿಶುಕವಿತೆ. ಆಗಸದ ತುಂಬ ಮೋಡಗಳ ಲೀಲೆ ಕಂಡು ಮಗುವಿನ ಕೋಮಲ ಮನಸ್ಸು ಹಿಗ್ಗಿ ತಾಯಿಯನ್ನು ಕರೆದು ಅದನ್ನು ತೋರಿಸಿ ಸಂತೋಷಪಡುತ್ತದೆ. ಮೋಡಗಳು ಏಕೆ ಹೀಗೆ ಆಗಸದಲ್ಲಿ ಅಲೆಯುತ್ತಿವೆ ಇಳಿದು ಬರಬಾರದೆ ಎಂದು ಮುಗ್ಧವಾಗಿ ಪ್ರಶ್ನಿಸುತ್ತದೆ. ಆಗಸಕ್ಕೆ ಏರಿ ಗಾಳಿಯಲ್ಲಿ ಮೋಡದೊಡನೆ ತೇಲಾಡುವ ಆಸೆ ಮಗುವಿಗೆ. ಆ ಮಗು ತಾಯಿಗೆ ಹೇಳುತ್ತದೆ-

ಮೋಡಗಳ ಸಂದಿಯಲ್ಲಿ ತೂರಿ ಹಾರಾಡುವೆನು
ನಮ್ಮ ಮನೆ ಮೇಲಿಂದ ನೋಡಿದರೆ ಕಾಣುವುದು
ಕೆಲಸದಲ್ಲಿ ನೀನಿರಲು ನಾನೊಬ್ಬ ಹಾರುವೆನು
ಮೇಲಿಂದ ನೋಡುತಲೆ ಕರೆಯುವೆನು ನಿನ್ನನ್ನು

ಕೈಚಾಚು ನೀನಿಲ್ಲಿ ಮೋಡವನು ತೊರೆದಿಟ್ಟು

ನಿನ್ನ ಬಳಿ ಸೇರವೆನು, ಮುಗಿಲಾಟ ಬಲುಚೆಂದ!

ಏನಮ್ಮ! ನೀ ಪೇಳೆ ಚಂಚಲವೇನೆ ಅದು?[೫೦]

ಆ ಮಗುವಿನ ಮುಗ್ಧತೆ ಎಷ್ಟೆಂದರೆ, ಮುಗಿಲುಗಳನ್ನು ಸೆರೆಹಿಡಿದು ತರುವ ಉತ್ಸಾಹ, ತಾಯಿಗೆ ಆ ಮಗು ಹೇಳುತ್ತದೆ-

ಚೆಲುವಾದ ಮೆದುವಾದ ಹಾಸಿಗೆಯ ನೀ ಮಾಡು

ಒದ್ದಾಡಿ ಅದರಲ್ಲಿ ಮೈಮರೆತು ಬಿದ್ದಿರಲು

ಎನಿತಾನಂದವೇ? ಸೊಗಸಲ್ಲವೇನೆ ಅದು?

ಅರಳೆಯೊಲು ಮೃದುವಾಗಿ ಇಹುದಲ್ಲವೇನಮ್ಮ![೫೧]

ಎಂದು ಮುದ್ದು ಮುದ್ದಾಗಿ ಕೇಳುತ್ತದೆ.

'ನಿಶಾದೇವಿ'ಯದು ಕತ್ತಲೆಯ ಪ್ರಪಂಚ. ಆದರೆ ಕವಿಗೆ ನಿಶೆ 'ಸೊಗ', 'ಶಾಂತಿ' 'ಚೇತನ' ಚೆಲುವಿನ ಚಿಹ್ನೆ. ಕವಿಯ ಕಣ್ಣಿಗೆ

ಕಾಲಚಕ್ರಕೆ ಸಿಕ್ಕಿ ನುಚ್ಚಳಿದು ಹೋಗುತಿಹ

ನೂರಾರು ದೇಶಗಳ ನೂರಾರು ಜೀವಿಗಳ

ಏರಿಳಿತ ಉಳಿವುಗಳೆ ನಿಲಯಕ್ಕೆ ನೀ ಸಾಕ್ಷಿ

ವೇಗದಿಂದುರುಳುತಿಹ ಕಾಲಚಕ್ರವ ನೂಕಿ

ಮೌನದಿಂ ಸಾಗುತಿಹೆ ಶಾಂತಿಯನು ಜಗಕಿತ್ತು.[೫೨]

ಎಂದು ಹಾರೈಸುವರು.

ಸರಸಿಜಾಸನ ರಾಣಿ ಸರಸತಿಯು ಕವಿಯ ಪಾಲಿಗೆ ವಿಶ್ವಗಾಯಕಿಯಾಗಿದ್ದಾಳೆ. ವೀಣೆಯ ನುಡಿಸಿ ಚತುರ್ದಶ ಭುವನಗಳಲ್ಲಿ ಸಂಗೀತದ ಅಲೆಯನ್ನು ಹರಡಿ ಮನಸೋಲುವಂತೆ ಮಾಡುವ ಜಾಣ್ಮೆ ವಾಣಿಯದು ಎಂದು "ವಾಗ್ದೇವಿ" ಕವನದಲ್ಲಿ ಕವಿ ತಿಳಿಸವರು.

ಕಾವ್ಯ ಕಲೆಗಳ ಮೂರ್ತಿ ಹೇ ವಾಣಿ ಗೀರ್ವಾಣಿ

ನುಡಿಸೊಮ್ಮೆ ನಿನ್ನ ಮೃದುವೆರಳ ನಖಪಂಕ್ತಿಯಲಿ

ಜ್ಞಾನಮಾತ್ರಕೆ ನಿನ್ನ ಸಪ್ತಸ್ವರ ಸ್ಪರ್ಶದಲಿ

ಮಧುರ ಸಂಗೀತದಲಿ ವಿಶ್ವದೆವೆ ಮುಚ್ಚಿಸುತ

ಉಷೆ ಸಂಜೆ, ನಿಶಿದಿವಾ, ಸೃಷ್ಟಿವಿಲಯಗಳೆಲ್ಲ

ಮೌನಮಂತ್ರವ ನುಡಿದು ಮೈಮರೆದು ಮಲಗುವೊಲು.[೫೩]

ಎಂಬಂತೆ ಬೆರೆಗುಗೊಳಿಸಬಲ್ಲವಳು, ಪ್ರಾಚೀನ ಋಗ್ವೇದದಲ್ಲಿ ಮಂತ್ರಘೋಷವಾಗಿ, ಧರ್ಮ ಶಾಸ್ತ್ರಗಳಲ್ಲಿ ಅಧಿಕಾರಿವಾಣಿಯಾಗಿ ಕಲೆ ಕಾವ್ಯಗಳಿಗೆ ಮೂಕ ಉಸಿರಾಗಿ ರಾರಾಜಿಸುವವಳು. ಇದು ನಾದಬ್ರಹ್ಮನ ಲೀಲೆ.

ಮನುಷ್ಯನು ತನ್ನೊಳಗಿರುವ ಪ್ರತಿಭೆಗೆ ಸೂಕ್ತವಾದ ವಾತಾವರಣ ದೊರಕಿಸಿ ಕೊಂಡಾಗ ಮಾತ್ರ ಅದರ ಬಳಕೆ ಹಾಗೂ ಸಮಂಜಸತೆ ಎಂಬುದನ್ನು ಕವಿಯು "ಜೀವನವದೇನು" ಎಂಬ ಕವನದಲ್ಲಿ ಕೊಳಲನ್ನು ಒಂದು ಪ್ರತಿಮೆಯಾಗಿ ಬಳಸಿಕೊಂಡಿದ್ದಾರೆ.:

ಮಾರುತನು ನಿನ್ನಲ್ಲಿ ಸುಳಿಯದಿರೆ ಎಲೆ ಕೊಳಲೆ
ನಿನ್ನ ಕೇಳುವರಾರು ಬರಿಯ ಬಿದುರೆ
ಮಾರುತನು ಎಲ್ಲೆಲ್ಲು ಎನಿತೆನಿತು ಸುಳಿದರೂ
ಕೊಳಲೊಂದು ಇರದಿರಲು ಗಾನವಿಹುದೆ?[೫೪]

ಒಬ್ಬ ಜ್ಞಾನಿಯು ಒಂದು ರೀತಿಯ ಕೊಳಲು, ಅವನಲ್ಲಿ ಸೊಗಸಾದ ಶಬ್ದಭಂಡಾರವಿದೆ. ಆದರೆ ಪ್ರತಿಭೆಯು ಒಲಿದು ಅದನ್ನು ಕೈಹಿಡಿಯದಿದ್ದರೆ ಕವಿತೆಯ ಹಾಡು ಹೊಮ್ಮಲು ಹೇಗೆ ಸಾಧ್ಯ.[೫೫]

ಅಂದರೆ ಕೊಳಲೇ ಅಮುಖ್ಯವೆಂದಲ್ಲ. ಗಾಳಿ ಎಲ್ಲೆಡೆ ಸುಳಿಯುತ್ತದೆ. ಆದರೆ ಕೊಳಲ ಒಳಗೆ ಸುಳಿದರೆ ಮಾತ್ರ ಗಾಳಿಗೆ ನಾದದ ಮೌಲ್ಯ ಬರುವುದು. ಪ್ರತಿಭೆ ಗಾಳಿಯಂತೆ ಸುಳಿಯಬೇಕಾದದ್ದು ಸಾಹಿತಿಯ ಶಬ್ದವೆನ್ನುವ ಚೈತನ್ಯ. ವೈಣಿಕ ಬರದಿದ್ದರೆ ಹೇಗೆ ವೀಣೆಗೆ ಬೆಲೆಯಿಲ್ಲವೋ, ಹಾಗೆ ವೈಣಿಕನಿಗೆ ಪ್ರತಿಭೆಯಿಲ್ಲದಿದ್ದರೆ ವೈಣಿಕನು ನುಡಿಸುವ ವೀಣೆಯ ದನಿಗೂ ಬೆಲೆಯಿಲ್ಲ.

ವೈಣಿಕನು ಬಾರದಿರೆ ವೀಣೆಯಿದ್ದೇನು?
ಸತಿ ಪತಿಯರೊಲಿಯದಿರೆ ಜೀವನವದೇನು?[೫೬]

ಕವಿ ಹಾಗೂ ಕಾವ್ಯದ ಅಭಿವ್ಯಕ್ತಿಗೆ ಅಗತ್ಯವಾಗಿ ಬೇಕಾದ ಪ್ರತಿಭೆ ಇವುಗಳ ಅವಿನಾಭಾವ ಸಂಬಂಧವನ್ನು ಹೇಳುತ್ತ ಕೊಳಲು ಹಾಗೂ ಅದರೊಳಗೆ ಸುಳಿವ ಮಾಧುರ್ಯದ ನಾದವನ್ನು ಹೋಲಿಕೆಗೆ ಕೊಡುವರು. ಆ ಭಾವವನ್ನು ವಿಸ್ತರಿಸುತ್ತ ಹಾಗೆಯೇ ವೈಣಿಕ ಹಾಗೂ ವೀಣೆಯ ಹೋಲಿಕೆ ಕೊಡುವರು. ಈ ಭಾವಸಾಮ್ಯವನ್ನು ಕವಿ ಕೊನೆಯಲ್ಲಿ ದಾಂಪತ್ಯ ಜೀವನದ ಸಾಫಲ್ಯವಿರುವುದು ಸತಿ-ಪತಿಯರ ಅನ್ಯೋನ್ಯತೆಯಲ್ಲಿ ಎಂಬುದನ್ನು ತಿಳಿಸುವ ಮೂಲಕ ಚಿಂತನೆಗೆ ಒಂದು ಅರ್ಥಪೂರ್ಣ ಸಂಬಂಧ ಕಲ್ಪಿಸುವರು.

ಖಡ್ಗಕ್ಕಿಂತ ಲೇಖನಿ ಮಿಗಲು ಎಂಬ ವಾಕ್ಯವಿರುವಂತೆ ಕವಿಯು ಲೇಖನಿ, ಖಡ್ಗಗಳ ಕುರಿತಾದ ವಿಚಾರಗಳನ್ನು ಕವನದ ಮೂಲಕ ವ್ಯಕ್ತಪಡಿಸಿದ್ದಾರೆ. ಅಂದರೆ ಸೃಷ್ಟಿ-ಲಯಗಳ ಎರಡು ಭಿನ್ನ ಮುಖಗಳ ಪರಿಚಯ ತಿಳಿಸಿದ್ದಾರೆ 'ಕವಿಯ ಲೇಖನಿ' ಎಂಬ ಕವಿತೆಯಲ್ಲಿ.

ಖಡ್ಗ ನಾಶಮಾಡುವ ಸಾಧನವೆನಿಸಿದ್ದು ಏನನ್ನೂ ಸೃಷ್ಟಿಸುವುದಿಲ್ಲ. ರಕ್ತವ ಹೀರುವ ಖಡ್ಗ ಭೂಮಿಯನ್ನೇ ಸ್ಮಶಾನವಾಗಿಸಲು ಶ್ರಮಿಸುವುದು. ಆದರೆ ಕವಿಯ ಲೇಖನಿ ಹಾಗಲ್ಲ:

ಪ್ರಳಯಗರ್ಭದೊಳಡಗಿ ತಾರೆಯಾಗಿಹರೆಲ್ಲ
ಮತ್ತೊಮ್ಮೆ ಸಾವಿನಿಂ ಅಮರಸ್ಪರ್ಶವ ಪಡೆದು,
ಕೃತಿಯ ವೈಖರಿಯಿಂದ, ಕವಿಯ ಲೇಖನಿಯಿಂದ
ಪೊಸತೊಂದು ಲೋಕಮಂ ರಚಿಸಿ ಆಳುವರು
ಕವಿಯ ಕಲ್ಪನೆಯಲ್ಲಿ ಎನಿತೊಂದು ಬಾರಿ
ಅಳಿಯುವರು! ಉಳಿಯುವರು! ಸೃಷ್ಟಿಯಾಗುವರೆಲ್ಲ![೫೭]

ಹೀಗೆ ಕವಿಯ ಲೇಖನಿ ಸತ್ತ ವ್ಯಕ್ತಿಗಳಿಗೂ ಅಮರತೆಯ ಸ್ಪರ್ಶ ನೀಡಿ ಅವರೆಲ್ಲ ಸಾಹಿತ್ಯದಲ್ಲಿ ಜೀವಂತ ವ್ಯಕ್ತಿಗಳಾಗುವಂತೆ ಮಾಡಬಲ್ಲವರು ಕವಿಗಳು. ಕಾವ್ಯದಲ್ಲಿ ಹುಟ್ಟು ಸಾವು ಆಟವಾಗಿ, ನವಸೃಷ್ಟಿ ಮೂಡುತ್ತದೆ.

ಕವಿಯ ದೃಷ್ಟಿಯಲ್ಲಿ ಕತ್ತಿಯದು ಆರ್ಭಟದ ಧ್ವನಿ, ಆಕ್ರಮಣದ ಧ್ವನಿ. ಅದರೆ ಲೇಖನಿಯದು ಅನ್ವೇಷಕ ಗುಣ.[೫೮]

ಸೃಷ್ಟಿಗರ್ಭವ ಹುಗುವ ಆತ್ಮಶಕ್ತಿಯ ಸತ್ವ
..........................................
..........................................
ಅವ್ಯಕ್ತ ಚೇತನವು ವ್ಯಕ್ತವಾಗುವುದು!
ಶೂನ್ಯದಲೆ ನವಸೃಷ್ಟಿ ಮೂಡುವುದು! ಮರೆಯುವುದು
ಕವಿಯ ಸಾಮ್ರಾಜ್ಯದಲ್ಲಿ ಅವನ ಲೇಖನಿಯೆದುರು
ಕೋಟಿ ವೀರರದೆತ್ತ? ಕೋಟಿ ಖಡ್ಗಗಳೆತ್ತ?[೫೯]

ಹೀಗೆ ಕವಿಯು ಖಡ್ಗಕ್ಕಿಂತ ಲೇಖನಿಗೆ ಕತ್ತಿಯ ವಿರುದ್ಧ ಸಮರ ಹೂಡಿ ಶಾಂತಿ, ಸಹನೆ, ಸಹಮತಿತ್ವ ಕಟ್ಟುವ ಕಲೆಗಳ ಸಂಕೇತವಾಗಿ ಚಿತ್ರಿಸಿದ್ದಾರೆ.

ದುಂಬಿಯ ಝೇಂಕಾರವೆ ಕವಿಯ ಕವನಗಳಿಗೆ ಸ್ಪೂರ್ತಿ, ಇಲ್ಲಿ ದುಂಬಿಯ ಜೊತೆಗೆ ಹೃದಯದುಂಬಿಯೂ ಸೇರಿ ಮೊರೆಯುತ್ತಿದೆ. ಈ ಜೀವಭೃಂಗವು

ಪ್ರೇಮ ಶಾಶ್ವತವೆಂದು ಜೀವನವು ಸ್ಥಿರವೆಂದು
ಪ್ರೇಮಗೀತೆಗೆ ಸ್ಥಾಣುಭಾವಮಂ ತುಂಬಿ
ಝೇಂಕಾರದೊಳಾವುದೊ ಶಕ್ತಿಯಂ ಬಂಧಿಸುತ,
ಮೊರೆಯುತಿದೆ! ಮೊರೆಯುತಿದೆ! ಮೊರೆಯುತಿದೆ ಭೃಂಗ
ಸುಪ್ತಿಯೊಳಗೊರಗಿರ್ದ ಕವಿಯ ಹೃದಯವ ತೆರೆದು
ಭಾವಗಳ ಹೊನಲಿಗಾವೇಶಮಂ ತುಂಬಿ,
ಗತಕಾಲದನುಭವದ ಸುಖದ ಸ್ಮೃತಿಯಂ ನೆನೆಸಿ,
ಮೊರೆಯುತಿದೆ ಮೊರೆಯುತಿದೆ ಮೊರೆಯುತಿದೆ ಭೃಂಗ[೬೦]

ಹೀಗೆ ದುಂಬಿಯು ಜಗತ್ತಿನಲ್ಲಿ ಪ್ರೇಮ ಶಾಶ್ವತವೆಂದು, ಕವಿಗೆ ದುಂಬಿಯ ಮೊರೆತ ಹಿಂದಿನ ನೆನಪುಗಳನ್ನು ತರುವುದಾಗಿದೆ. ದುಂಬಿಯ ಮೊರೆತದ ಒಂದೇ ಸ್ವರದಲ್ಲಿ, ಒಂದೇ ಮಾಧುರ್ಯದಲ್ಲಿ ವಿಶ್ವಶಕ್ತಿ ಒಂದಾಗಿರುವ ಸಂಕೇತವನ್ನು ಟಿ.ಎನ್.ಮಹದೇವಯ್ಯ ಕಾಣುವರು. ದುಂಬಿಯ ಝೇಂಕಾರ ಸಾಮಾನ್ಯ ಪರಿಚಿತ ಸಂಗತಿ. ಅದಕ್ಕೆ ಅಸಾಮಾನ್ಯತೆಯನ್ನೂ, ಅದರ ಝೇಂಕಾರದಲ್ಲಿ ಕವಿ ತನ್ನ ಬದುಕಿಗೆ ಸಂಬಂಧಿಸಿದ ಹಳೆಯ ನೆನಪುಗಳನ್ನೂ, ವಿಶ್ವದ ಒಳಿತಿನ-ಸಾಮರಸ್ಯದ ಮಧುರನಾದವನ್ನೂ ಕೇಳುವರು.

'ಲಕ್ಷ್ಮಿ□- ಸರಸ್ವತಿಯರನ್ನು ಕುರಿತ ಕವನವಾಗಿದ್ದು, ಇದರ ಶೀರ್ಷಿಕೆಯಲ್ಲಿ ಭಕ್ತಿಗೀತೆಯ ಭಾವ ಮೇಲ್ನೋಟಕ್ಕೆ ತೋರಿದರೂ ಒಳಹೊಕ್ಕು ಓದುತ್ತ ಹೋದಂತೆ ಲಕ್ಷ್ಮಿ - ಸರಸ್ವತಿಯರ ಸ್ವಭಾವವನ್ನು ಮನುಷ್ಯನ ಸ್ವಭಾವದಲ್ಲಿ ಕವಿ ಓದುಗರ ಗಮನಕ್ಕೆ ತರುತ್ತಾರೆ.

ಶ್ರೀಮಂತೆಯಾದ ಲಕ್ಷ್ಮೀಪೂಜೆಗೆ, ಮೂಲಕಾರಣ ಮೂರ್ಖತೆ, ದುರಾಶೆಯನ್ನು ಕವಿ "ವರಮಹಾಲಕ್ಷ್ಮಿ" ಯಲ್ಲಿ ಗುರುತಿಸಿದ್ದಾರೆ.

ಲೋಕಲೋಚನ ಬಿಗಿದ ನಿನ್ನ ಮೈಮೆಗೆ ಮೆಚ್ಚಿ
ಮನುಜನೆದೆಯಲಿ ನಿಂತ ಆಶೆ ತಂತುವು ಬಲಿತು
ನಿನ್ನ ಚಂಚಲ ದೃಷ್ಟಿಯೊಮ್ಮೆ ಸುಳಿದರೆ ಧನ್ಯ
ಎಂದೆದೆಯು ಹಂಬಲಿಸಿ ಮೋಹಪಾಶಕೆ ಸಿಲ್ಕಿ
ಮೂರ್ಖತೆಯನಾಶ್ರಯಿಸಿ ಓಲೈಸಬೇಕೆ!
ಧನಕನಕರತ್ನಾದಿ ವ್ಯಾಮೋಹದಲ್ಲಿ ಸಿಲ್ಕಿ
ಆತ್ಮದಾಕೃತಿ ಕುಗ್ಗಿ ಕಿರಿದಾಗಬೇಕೇಕೆ? [೬೧]

ಇದು ಕವಿ ಎತ್ತುವ ಪ್ರಶ್ನೆ, ಲಕ್ಷ್ಮೀ ಕೃಪಾಕಟಾಕ್ಷದಿಂದಾಗಿ ಮನುಷ್ಯನ ಅಂತರಂಗದಲ್ಲಿ ಹಣಸಂಪಾದನೆಯ ಸ್ಪರ್ಧಾಭಾವ, ಮತ್ತೊಬ್ಬರೊಡನೆ ಹಗೆತನ ತುಂಬಿದೆ. ರಕ್ತದ ಕೋಡಿ ಹರಿದಿದೆ. ಧರ್ಮ, ನೀತಿ, ಸರಳತೆ, ಪ್ರಾಮಾಣಿಕತೆ, ಸರಳತೆ ಮುಂತಾದ ಭಾವಗಳು ಮನುಷ್ಯರಲ್ಲಿ ಮರೆಯಾಗುತ್ತಿದೆ ಎನ್ನುತ್ತಾರೆ ಕವಿಗಳು.[೬೨]

ಇಂದು ಮನುಷ್ಯ ಮತ್ತೊಬ್ಬ ಮನುಷ್ಯರ ನಡುವಿನ ಸಂಬಂಧಗಳು ಕೇವಲ ವ್ಯಾಪಾರ ಮನೋಭಾವದಿಂದ ಕೂಡಿದೆ.

ಹೃದಯತಂತಿಯ ಮಿಡಿವ ದಿವ್ಯವೀಣೆಯ ದನಿಗೆ,
ಕರಗಲಾಗದ ಎದೆಯು ಸ್ವರ್ಣವರ್ಣವ ಕಂಡು
ಬಾಯ್ಬಿಟ್ಟು ಹಾತೊರೆದು ಹಂಬಲಿಸಿ ಮಿಡುಕಿ
ಧರ್ಮಶಾಸ್ತ್ರಕೆ ಕಲೆಗೆ ತಲೆಬಾಗದಿಹ ಮನಸು
ನೀಲಿಪಚ್ಚೆಯು ರತ್ನ ಮೌಕ್ತಿಕದ ಕಾಂತಿಯಲಿ

ಪುಳಿಕತಾಂಕಿತವಾಗಿ ಸಮ್ಮೋಹನಾಸ್ತ್ರದಲಿ,
ಸುಖ ಸ್ವಪ್ನದುಯ್ಯಾಲೆ ಮಂಚದಲಿ ತೂಗುವುದು.[೬೩]

ಮನುಷ್ಯನ ಸ್ವಭಾವವು ಚಂಚಲವಾಗಿದ್ದು, ಎಷ್ಟೇ ಪಾಂಡಿತ್ಯವಿದ್ದರೂ ಅವನ ಮನಸ್ಸು ಸೆಳೆಯುವುದು ಲಕ್ಷ್ಮಿ ಸಂಪತ್ತಿನಿಂದ ಸಾಧ್ಯವೆಂಬುದನ್ನು ಕವಿ ತಿಳಿಸುತ್ತಾರೆ.

ಶ್ರೀಮಂತ ಲಕ್ಷ್ಮಿಯ ಎದುರಿಗೆ ಸರಸ್ವತಿಗೆ ಸಿಕ್ಕಿರುವುದು ಬಡ ಕುಟೀರ ಮಾತ್ರ.

ಬಡ ಕುಟೀರವೆ ಗತಿಯು ತಾಯಿ ಸರಸತಿ ನಿನಗೆ
ದೀನ ದಾರಿದ್ರ್ಯದಲಿ ಜೀವಕಾವನು ಕಂಡು,
ಸರಳ ಶಾಂತಿಯನುಂಡು ಕಲೆ ಬೆಳಗಬಹುದೆ,[೬೪]

ಇಂದು ಕಲೆಗಳು, ಸೂಕ್ಷ್ಮ ಭಾವಗಳು ಎಲ್ಲ ಬಗೆಯ ಕೋಮಲ ಭಾವುಕಜಗತ್ತು ಹಾಳಾಗುತ್ತಿರುವುದನ್ನು ಕವಿ ಈ ಕವನದಲ್ಲಿ ಗುರುತಿಸಿದ್ದಾರೆ.

ಕವಿ ಒಂದು ವಿಚಿತ್ರ ಸನ್ನಿವೇಶದ ಚಿತ್ರಣವನ್ನು 'ಸಂಸಾರಿ-ತಪಸ್ವಿನಿ' ಎಂಬ ಕವನದಲ್ಲಿ ಚಿತ್ರಿಸಿದ್ದಾರೆ. ಮೊದಲ ಹೆಂಡತಿ ಬದುಕಿರುವಾಗಲೇ ವರ್ಷಗಳ ನಂತರ ಎರಡನೆಯ ಹೆಂಡತಿಯನ್ನು ಸ್ವೀಕರಿಸುವ ಗಂಡುಗಳ ಅಟ್ಟಹಾಸದ ರಭಸದಲ್ಲಿ ಮೊದಲ ಹೆಂಡತಿಯ ಒಳಸಂಕಟ ಯಾರಿಗೂ ಅರ್ಥವಾಗುವುದಿಲ್ಲ. ಆಕೆಯೇನೂ ಪತಿಯನ್ನು ಧಿಕ್ಕರಿಸುವ ಕ್ರಾಂತಿಕಾರಣಿಯಲ್ಲ. ಗಂಡು ನಿರ್ಮಿಸಿದ ಸಮಾಜದ ಸೂತ್ರಗಳಲ್ಲಿ ಈ ವಿಧಿ ಆಕ್ಷೇಪಾರ್ಹ ತಪ್ಪೂ ಅಲ್ಲ.

ಎನ್ನ ಹರಕೆಯ ಹೊತ್ತು ಚರಣ ಪೂಜೆಯಗೈದ
ಹರಕೆ ಸಾಗದು ಇನ್ನು ಸಲಿಸುವಳು ನೀನೆಂದು
ನಾನಿಂದು ಹೊರಗಾದೆ ದೇವ ನೂಕಿದ ಭಕ್ತೆ ನೀ ಸಂಸಾರಿ, ನಾ ತಾಪಸಿ,[೬೫]

ಸಮಾಜಸೂತ್ರಗಳನ್ನು ಒಪ್ಪಿದ ಆಕೆ ತಾನೇ ಸವತಿಯನ್ನು ತಂಗಿಯಂತೆ ಭಾವಿಸಿ ಅವಳನ್ನು ಪತಿಯ ಕೋಣೆಗೆ ಕಳಿಸಿ ಮೊದಲಪತ್ನಿ ಹೊರಬಂದು ನಿಂತಾಗ ಅವಳ ಕಳವಳ ಆರಂಭ.

ಎನಗೆ ದುಗುಡ ಭಾರ ಬಿರಿಯುತಿದೆ ಎದೆಯಮನೆ
ನಿನಗೆ ಸಗ್ಗದ ಸೊಗಸು ಉಬ್ಬುತಿದೆ ಎದೆಯಾಸೆ!
ಸೊಗದುಗುಡಗಳ ಮೀರಿ ತಾಳಲಾರದೆ ನಿಂದ
ನೀ ಸಂಸಾರಿ-ನಾ ತಾಪಸಿ!

ನಿನ್ನ ಬಾಳಿನ ಉಷೆಯ ಮುಂಬೆಳಗೆ ಕರೆಯಿಂದು!
ನನ್ನ ಬದುಕಿನ ಸಂಜೆ ಹಿಂಬೆಳಗೆ ಬರವಿಂದು!
ನೀನಿನ್ನು ಒಳಗಾದೆ ನಾನಿಂದು ಹೊರಗಾದೆ
ನೀ ಸಂಸಾರಿ-ನಾ ತಾಪಸಿ![೬೬]

ಕುರುಡು ಸಮಾಜದ ವ್ಯವಸ್ಥೆಗೆ ಬದ್ಧಳಾದ ಆ ಹೆಂಡತಿ ತನ್ನ ಮೈಮನಗಳಿಗೆ ಮುಪ್ಪನ್ನು ಆಹ್ವಾನಿಸಿಕೊಳ್ಳದ ಜಡಸ್ಥಿತಿಗೆ ತಲುಪುತ್ತಾಳೆ. 'ದೇವ ನೂಕಿದ ಭಕ್ತೆ'[೬೨] ಎಂಬ ಮಾತಿನಲ್ಲಿ ಕವಿ ಆಕೆಗೆ ಇದ್ದ ಪತಿಭಕ್ತಿ ದೈವಭಕ್ತಿ ಎರಡಕ್ಕೂ ಎಸೆದ ತಿರಸ್ಕಾರಭಾವದ ಸೂಚನೆಗಳು ಈ ಕವನದಲ್ಲಿ ಸ್ಪಷ್ಟವಾಗಿ ಮೂಡಿದೆ.

ಕವಿಯ ಕವನದ ಲಹರಿಯ ವಿಶಾಲ ವ್ಯಾಪ್ತಿಯನ್ನು ಹಲವಾರು ಕವನಗಳು ಮೂಲಕ ನೋಡಬಹುದಾಗಿದೆ, ಅದರಂತೆ ಕವಿಯ ದೃಷ್ಟಿ ಮಕ್ಕಳ ಕವಿತೆಗಳ ಕಡೆಯೂ ಸಹ ಹರಿದಿರುವುದನ್ನು 'ಸಾವು ಜೀವ' ಈ ಕವನವನ್ನು ನೋಡಿದಾಗ ತಿಳಿಯುವುದು. ಬೇರೆಲ್ಲ ಕವನಗಳಿಗಿಂತಲೂ ಸಣ್ಣ ಸಣ್ಣ ಖಂಡಗಳ ನಡಿಗೆ ಹಾಗೂ ಅಂತ್ಯಪ್ರಾಸಗಳ ಜೋಡಣೆಯು ಇಲ್ಲಿ ವಿಶೇಷವಾಗಿರುವುದು ಕಂಡುಬರುತ್ತದೆ. ಕವನದ ಅರ್ಥಪೂರ್ಣತೆಯು ಲಯ, ಗೇಯದ ಜೊತೆ ಸೇರಿ ಹಾಡಿನ ಮಟ್ಟಿನಲ್ಲಿದೆ.

ಒಂದು ಹಕ್ಕಿ ಬೆಕ್ಕಿನ ಕೈಗೆ ಸಿಕ್ಕಿದ ಪರಿಯ ದುರಂತದ ಚಿತ್ರಣ ಇಲ್ಲಿದೆ. ಪ್ರಕೃತಿಯಲ್ಲಿ ಒಂದನ್ನು ತಿಂದು ಮತ್ತೊಂದು ಬದುಕುವುದು ಪ್ರಕೃತಿಯ ನಿಯಮ. ಆದರೆ ಅದು ಬದುಕಿನ ಸಂಘರ್ಷವವನ್ನು ತೋರ್ಪಡಿಸುವ ವಿಚಾರವಾಗಿದೆ.[೬೮] ಇಲ್ಲಿ ಕವಿ ಬಲಿಷ್ಠರ ಮುಂದೆ ಶೋಷಿತರ ನಾಶವೆಂಬುದನ್ನು ಹಕ್ಕಿ ಮತ್ತು ಬೆಕ್ಕು ಇವರೆಡರ ನಡುವಣ ಸ್ಪರ್ಧಾತ್ಮಕ ಮನೋಭಾವವನ್ನು ಒಂದು ಮತ್ತೊಂದರ ನಾಶದ ಬಗೆಗಿನ ಆಲೋಚನೆಯನ್ನು ಸಾಂಕೇತಿಕವಾಗಿ ಗ್ರಹಿಸುವರು :

ಒಂದು ಹಕ್ಕಿ ಅಲ್ಲಿ ತಾನೆ
ಹಾರುತ್ತಿತ್ತು!
ಪಕ್ಕ ಎಲುಬು ನೊಂದು ಬೆಂದು
ಕೊರಗುತ್ತಿತ್ತು!
ಉಸಿರು ಅಸುವು ತೂಕ ಮಾಡಿ ತೂಗುತಿತ್ತು
ಕೇಳಿ ಕೇಳದಂತೆ ಬೆಕ್ಕು
ನಡೆಯುತಿತ್ತು.
ಹಗಲು ಇರುಳು ಕಾಲನಂತೆ ಮಿಣುಕುತಿತ್ತು.
ಕಣ್ಣು ನೋಟ ಕ್ರೂರವಾಗಿ ಹೀರುತ್ತಿತ್ತು!
ಸಾವ ಬಯಸಿ ಜೀವವಿಡಿದು
ಹಾಡುತ್ತಿತ್ತು!
ಬದುಕಲಾರೆ ಸಾಯ್ವೆನೆಂದು
ಸುತ್ತುತಿತ್ತು!
ಸಾವು ಜೀವ ಆಟವಾಗಿ
ಸಾಯುತಿತ್ತು!

ಜೀವ ಸಾವು ಲಗ್ಗೆ ಹೂಡಿ
ಹುಟ್ಟುತಿತ್ತು! [೬೯]

ಈ ಕವನವನ್ನು ನಾವು ಸಮಾಜವಾದ ಸಿದ್ಧಾಂತ ಹಾಗೂ ಕಮ್ಯುನಿಸ್ಟ್ ಸಿದ್ಧಾಂತಗಳಿಗೆ ನಡೆಯುತ್ತಿರುವ ಪ್ರಸ್ತುತ ಸಂಘರ್ಷಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಬಹುದಾಗಿದೆ. ವಿಶ್ವದಲ್ಲಿ ಇಂದು ಬಂಡವಾಳಶಾಹಿಗಳು ಒಂದು ಗುಂಪಿನವರಾದರೆ, ಸಮಾಜವಾದಿಗಳದು ಇನ್ನೊಂದು ಗುಂಪು. ಇವೆರಡಕ್ಕೂ ಸಂಪೂರ್ಣ ಭಿನ್ನವಾಗಿ ಬಡವರ ನೆತ್ತರಿನಿಂದ ಬೆಳೆಯುತ್ತಿರುವ, ಹಣವಂತರಾಗುತ್ತಿರುವ ಬಂಡವಾಳಶಾಹಿಗಳ ನಾಶದಿಂದಲೇ ಸಮಾಜದಲ್ಲಿ ನೆಮ್ಮದಿ ಸಾಮರಸ್ಯಪೂರ್ಣ ಬದುಕು ಸಾಧ್ಯವೆನ್ನುವ ಕಮ್ಯುನಿಸಂನ ಹೋರಾಟದ ಹೆಜ್ಜೆಗಳು; ಇದರಲ್ಲಿ ಬಂಡವಾಳಶಾಹಿಗಳ ಕೈಬಲವಾಗಿ ಅದರ ಶೋಷಣೆಯ ನಾನಾಮುಖಗಳನ್ನು ಸಾಂಕೇತಿಕವಾಗಿ ಈ ಕವಿತೆ ಧ್ವನಿಸುತ್ತಿದೆ. ಕಮ್ಯುನಿಸಂ ತತ್ವ ಬಂಡವಾಳಶಾಹಿಗಳ ಬಲಿಷ್ಠಶಕ್ತಿಗೆ ತಲೆಬಾಗುತ್ತಿರುವ ವ್ಯಂಗ್ಯದ, ನೋವಿನ ದನಿ ಈ ಕವಿತೆಯಲ್ಲಿ ಹೆಪ್ಪುಗಟ್ಟಿದೆ.

ಟಿ.ಎನ್. ಮಹದೇವಯ್ಯನವರ ಕಾವ್ಯದ ಅನ್ಯಪ್ರಭಾವಗಳನ್ನು ಗುರುತಿಸುವುದು ಕಷ್ಟದ ಕೆಲಸ. ಏಕೆಂದರೆ, ಅವರೇ ಕೆಲವೆಡೆ ತಾವು ಪಡೆದುಕೊಂಡ ಪ್ರಭಾವವನ್ನು ಒಪ್ಪಿಕೊಂಡರೂ ವಿವರಗಳನ್ನು ದಾಖಲಿಸಿಲ್ಲ. ಅವರು ತಮ್ಮ ಕವಿತೆಗಳ ರಚನಾಕಾಲವನ್ನು ಸ್ಪಷ್ಟವಾಗಿ ದಾಖಲಿಸಿರುವರು. (ಕ್ವಚಿತ್ತಾಗಿ ಕೆಲವೆಡೆ ದಾಖಲಿಸಿಲ್ಲ). ಅವರ ಮೇಲೆ ರವೀಂದ್ರನಾಥ ಠಾಗೂರ್‌ರವರ ಪ್ರಭಾವ ವಿಶೇಷವಾಗಿ ಆಗಿರುವುದು ಅವರ ಉಲ್ಲೇಖಗಳಿಂದಲೇ ಸ್ಪಷ್ಟವಿದೆ. ಆದರೆ, ಅವರ ಯಾವ ಕವಿತೆಗಳಿಂದ ಪ್ರಭಾವಿತರಾಗಿದ್ದರು ಎಂಬುದರ ಸ್ಪಷ್ಟ ವಿವರ ದಾಖಲಿಸುವುದಿಲ್ಲ. ಹೀಗಾಗಿ ತುಲನಾತ್ಮಕ ಅಧ್ಯಯನ ನಡೆಸಲು ಸಾಧ್ಯವಾಗುವುದಿಲ್ಲ. "ಬಾಪೂಜಿ ಅಮರವಾಣಿ" ಎಂಬ ಕವಿತೆಯ ರಚನೆ ೦೩.೦೮.೧೯೪೯ ರಂದು ಆಗಿರುವಂತೆ ದಾಖಲಾಗಿದ್ದರೂ ಅಲ್ಲಿನ ಪುಟ್ಟ ಟಿಪ್ಪಣಿಯಲ್ಲಿ ಈ ಕವಿತೆ "೨೨.೦೬.೧೯೩೫ರ "ಹರಿಜನ" ಪತ್ರಿಕೆಯ ಒಂದು ಬರಹದ ಆಧಾರದ ಮೇಲೆ" ಎಂಬ ಸೂಚನೆ ಕಂಡುಬರುತ್ತದೆ. ಅಂದರೆ ಅವರ ಕವಿತೆ ಅಂದಂದಿನ ಓದಿನ ಪ್ರಭಾವದಿಂದ ಮೂಡಿ ಬಂದದ್ದು ಎಂದು ತೀರ್ಮಾನಿಸುವುದು ತಪ್ಪಾಗುತ್ತದೆ. ಹದಿನಾಲ್ಕು ವರ್ಷಗಳ ಹಿಂದೆ 'ಹರಿಜನ' ಪತ್ರಿಕೆಯ ಒಂದು ಬರಹ ಕವಿತೆಯೊಂದರ ರಚನೆಗೆ ಪ್ರೇರಣೆಯೊದಗಿಸಿತು ಎಂದಾಗ ಬಾಪೂಜಿಯವರ ಆ ಬರಹ ಮುಖ್ಯವಾಗಿರಲೇಬೇಕು. ಆ ಬರಹದಲ್ಲಿನ ಚರ್ಚಿತ ಮುಖ್ಯವಿಷಯವನ್ನು ಟಿ.ಎನ್. ಮಹದೇವಯ್ಯನವರು ತಮ್ಮ ದಿನಚರಿಯಲ್ಲಿ ಟಿಪ್ಪಣಿ ಮಾಡಿಕೊಂಡಿರಬಹುದು. ಅದು ಬಹುಶಃ ಬಾಪೂಜಿಯವರಿಗೆ ಬಹಳ ಪ್ರಿಯವಾದ "ಪ್ರಾರ್ಥನೆ" ಯ ಮಹತ್ವವನ್ನು ತಿಳಿಸುವ ಲೇಖನವಾಗಿರಬಹುದು. ಹೋರಾಟದ ಬದುಕಿನಲ್ಲಿ ಮಹದಾಸೆ ಜೀವಕ್ಕೆ. ಆದರೆ ಎಂದೂ ಆಸೆ ನೆರವೇರದೆ ಸದಾ ನಿರಾಶೆ. ಆ ನಿರಾಶೆಯು "ತುಂಬದಿಹ ಬರಿ ಪಾತ್ರೆ" ಎಂಬ ಮಾತಿನಲ್ಲಿ ವ್ಯಕ್ತವಾಗಿದೆ. [೨೦] ಜೀವನ ಹೋರಾಟದಲ್ಲಿ ಯಶಸ್ಸು ಕಾಣದ ಜೀವವನ್ನು , ಅದರ ನಿರಾಶೆಯನ್ನು "ಪೂರ್ಣತೆಯ ಕಾಣದಿಹ ನಿತ್ಯಯಾತ್ರೆಯ ಪಯಣ" ಎಂದು ಕವಿ ವರ್ಣಿಸುವರು. ಈ ದಟ್ಟ ನಿರಾಶೆಯಲ್ಲೂ ಆಸೆಯ ಬೆಳಕು ಚಿಮ್ಮುತ್ತಿದೆ. ಅದು "ಆತ್ಮನಿರವನು ಬೆಳಗಿ ಬೆಳಕು ಕಾಂಬುದೆ ಗುರಿಯು" [೨೧] ಎಂಬ ಸಾಲಿನಲ್ಲಿ ವ್ಯಕ್ತವಾಗಿದೆ. ಬಡತನದ ಬದುಕಿನಲ್ಲಿ ನಿರಾಶೆ ಕವಿದಾಗ

ಎಲ್ಲ ಯತ್ನವೂ ವ್ಯರ್ಥವೆಂಬ ತೀರ್ಮಾನಕ್ಕೆ ಜೀವ ಬರುವುದುಂಟು. ಆದರೆ ಕವಿಯದು ಆಶಾಭಾವ. ನಮ್ಮೆಲ್ಲ ನೋವು ಸಂಕಟಗಳಿಗೆ ಪರಿಹಾರ ದೇವರಲ್ಲಿ ಮೊರೆ, ಪ್ರಾರ್ಥನೆಯ ರೂಪದಲ್ಲಿ, ಚೈತನ್ಯ ಬತ್ತದಂತೆ ಉತ್ಸಾಹವನ್ನು ತುಂಬಲು ಜೀವ ಪ್ರಾರ್ಥಿಸುತ್ತದೆ. ಪ್ರಾರ್ಥನೆಗೆ ನೋವನ್ನು ಮರೆಸುವ ದಿವ್ಯ ಶಕ್ತಿಯಿದೆ. ಬಹುಶಃ ಬಾಪೂಜಿಯವರು ಪ್ರಾರ್ಥನೆಯ ಬಗ್ಗೆ ಹೊಂದಿರುವ ಆಶಾಭಾವ ಈ ಕವನಕ್ಕೆ ಸ್ಫೂರ್ತಿ ನೀಡಿದಂತೆ ತೋರುತ್ತದೆ.

ಕವಿವರ್ಯ ಠಾಕೂರರ ಪ್ರಭಾವ ಟಿ.ಎನ್. ಮಹದೇವಯ್ಯ ಅವರ ಕವಿತೆಗಳ ಮೇಲೆ ವಿಶೇಷವಾಗಿ ಆಗಿರುವಂತೆ ತೋರುತ್ತದೆ. ಅವರು ಸುಮಾರು ಎಂಟು ಕವಿತೆಗಳಲ್ಲಿ ತಮ್ಮ ಮೇಲೆ ರವೀಂದ್ರ ಪ್ರಭಾವವಾಗಿರುವುದನ್ನು ಒಪ್ಪಿಕೊಂಡಿರುವರು (ನೋಡಿ : ಪುಟ ೫೨, ೧೬೭, ೨೧೧, ೨೧೫, ೨೫೬, ೨೫೮, ೨೬೬, ೪೫೦). "ಮನದ ನುಡಿ" ಕವಿತೆಯು ರವೀಂದ್ರರ ಒಂದು ಭಾವನೆಯಿಂದ ಸ್ಫುರಣಗೊಂಡುದಾಗಿ ಟಿ.ಎನ್. ಮಹದೇವಯ್ಯನವರು ಹೇಳಿಕೊಂಡಿರುವರು (ಪು.೫೨). ಕವಿವರ್ಯ ರವೀಂದ್ರರಿಗೆ ಪ್ರಿಯವಾದ ಕವಿತೆ, ಸಂಗೀತ, ವೀಣೆ, ಟಿ.ಎನ್. ಮಹದೇವಯ್ಯನವರಿಗೂ ಪ್ರಿಯವಾದುದು. ಏಕಾಂತದಲ್ಲಿ ಭಾವಪರವಶವಾಗಿ ಹಾಡುವುದು ಕವಿಗೆ ಹಿಗ್ಗು. ತನ್ನ ಹಾಡನ್ನು ಮೆಚ್ಚಿದ ಸಹೃದಯಿ 'ಹಾಡೊಮ್ಮೆ' ಎಂದು ಆಜ್ಞೆ ಮಾಡಲಿ ಎಂಬ ಆಸೆಯಿಂದ ಕವಿಜೀವ ತುಡಿಯುತ್ತದೆ.[೭೨] ಕವಿ ಜೀವದ ಆಸೆ ಫಲಿಸಿತು. 'ಹಾಡು' ಎಂದು ಆಜ್ಞೆ ಮಾಡಿದಾಗ ಮೈಯೆಲ್ಲ ಸಂತೋಷದಿಂದ ನಲಿದು ಮನಸ್ಸು ಆ ಸಂತಸದಲ್ಲಿ ವಿಹರಿಸಿತು.

ಜೀವನದ ಭಾವನೆಗಳೆಲ್ಲವೂ ಕರಗಿ
ಒಂದೇ ತಾನದಿ ಕೂಡಿ ಸಂಗೀತವಾಗಿ
ಇಂಪಾಗಿ ಪೆಂಪಾಗಿ ಮನದಣಿಯೆ ಸೂಸಿ
ಹೊರಬೀಳಬೇಕೆಂಬ ನಿಡುಬಯಕೆಯಾಂತು
ಕಾಯುತಿಹೆ ಎಂದು ದನಿಮಾಡುವೆನೊ ಎಂದು[೭೩]

ಜೀವ ಕಾತರಿಸಿತು. ಆದರೆ ಹಾಡಲಾಗುತ್ತಿಲ್ಲ. ಕೊರಳನ್ನು ಯಾರೋ ಬಿಗಿಹಿಡಿದಂತಾಗಿದೆ. ಹಾಡುವ ಉತ್ಸಾಹವಿದೆ. ಆದರೆ ಕೊರಳಲ್ಲಿ ತ್ರಾಣವಿಲ್ಲ. ಹೃದಯವೀಣೆ ಝೇಂಕರಿಸುತಿದೆ. ಆದರೆ ಅದೇಕೋ ಹಾಡಲು ಸಾಧ್ಯವಾಗುತ್ತಿಲ್ಲ. ಕವಿತೆ ನಿರಾಸೆ ತನ್ನ ಹಾಡಲಾಗದ ಮನಸ್ಥಿತಿಯ ಬಗ್ಗೆ.[೭೪] ಅದು "ನಿನ್ನ ಮೊಗ ನೋಡುತ್ತ ಕುಳಿತಿರುವೆನಿಲ್ಲಿ, ಎನ್ನ ಕಂಗಳಲಿ ಅಶ್ರು ಹೊರಹೊಮ್ಮುತಿದೆ" ಎನ್ನುವ ಮಾತಿನಲ್ಲಿ ಸಾಂದ್ರವಾಗಿದೆ.

"ನನ್ನ ಮಾಲೆ" ಎಂಬ ಕವಿತೆ ಕವಿ ರವೀಂದ್ರರ ಋಣದಿಂದ ರಚನೆಯಾಗಿದೆ ಎಂದು ಟಿ.ಎನ್. ಮಹದೇವಯ್ಯನವರು ಹೇಳಿಕೊಂಡಿದ್ದರೂ ಈ "ಋಣ" ಯಾವ ರೂಪದ್ದೆಂದು ತಿಳಿದುಬರುವುದಿಲ್ಲ. ತನ್ನ ಬಡಗುಡಿಸಲಿಗೆ ಪರಮಾತ್ಮ ಬರುವನೆಂಬ ಸಂಭ್ರಮ ಭಕ್ತನಿಗೆ, ಪರಮಾತ್ಮನನ್ನು ಇದಿರುಗೊಳ್ಳಲು ಭಕ್ತ ಸಕಲ ಸಿದ್ಧತೆ ಮಾಡಿಕೊಳ್ಳುವನು. ಆದರೆ ಸಂಜೆಯಾದರೂ ಪರಮಾತ್ಮನ ಸುಳಿವಿಲ್ಲ. ಪರಮಾತ್ಮನಿಗಾಗಿ ಹೂವಿನ ಮಾಲೆ ಸಿದ್ಧಪಡಿಸಿಕೊಂಡು ಭಕ್ತ ಕಾಯುತ್ತಿರುವನು. ಸಂಜೆಯಾಗುತ್ತಿದ್ದಂತೆ ಹೂಗಳ ಮಾಲೆ ಬಾಡಿತು.

ಮಾಲೆಯಿಂದ ಒಂದೊಂದೆ ಹೂ ಜಗುಳಿದವು. ಹೂವಿನ ಸುವಾಸನೆ ಬಾಡುವುದರೊಂದಿಗೆ ಹೋಯಿತು. ಭಕ್ತನಿಗೆ ನಾಚಿಕೆಯಾಗಿ ತಲೆತಗ್ಗಿಸಿದನು. ಪರಮಾತ್ಮನ ಸಾಕ್ಷಾತ್ಕಾರವಾಗದಿದ್ದರೂ ಅವನ ಮೇಲಣ ಭಕ್ತಿ, ಪ್ರೇಮ ವಿಶ್ವಾಸ, ಭಕ್ತನಲ್ಲಿ ಕಡಮೆಯಾಗಲಿಲ್ಲ. ಕವಿದ ನಿರಾಶೆಯಲ್ಲಿ ಪರಮಾತ್ಮ ಬರುವನು. ಬಾಡಿದ ಹೂಗಳನ್ನು ತೆಗೆದುಕೊಂಡು ಎಳೆನಗು ನಕ್ಕು "ಎನಿತು ಬಾಡಿತು ಪಾಪ"[೭೫] ಎನ್ನುವನು. "ಕಾಯಿಸಿದೆ ತಪ್ಪಾಯ್ತು"[೭೬] ಎಂದು ಹೇಳಿದ ಪರಮಾತ್ಮ ತನ್ನ ಭಕ್ತನನ್ನು ಮೃದುವಾಗಿ ಎದೆಗಪ್ಪಿಕೊಂಡು ಅವನ ಹಣೆಗೆ ಮುತ್ತಿಟ್ಟ. ಆಗ ಭಕ್ತನ ಮನಸ್ಥಿತಿ ಹೇಗಿರಬಹುದು! ಆ ಧನ್ಯತೆಯ ಕ್ಷಣದಲ್ಲಿ ಕಣ್ಣೀರ್ಗರೆಯುತ್ತ ಕಂಠ ಗದ್ಗದಿಸುತ್ತ 'ನಿನ್ನ ಪ್ರೇಮಕೆ ಸೋತೆ' ಎನ್ನುವನು. ನಿರೀಕ್ಷಣೆ, ದೇವನಿಗಾಗಿ ಸಿದ್ಧತೆ, ಬರುವನೋ ಇಲ್ಲವೋ ಎನ್ನುವ ಕಾತುರತೆ, ನಿರಾಶೆ, ಕೊನೆಗೆ ದೇವನ ಆಗಮನದಿಂದ ಭಕ್ತನ ಮನಸ್ಸಿನಲ್ಲಾದ ಆನಂದ- ಈ ಎಲ್ಲ ಅನುಭವಗಳನ್ನು ಕವಿತೆ ಅಕ್ಷರಗಳಲ್ಲಿ ಕಟ್ಟಿಕೊಡುತ್ತದೆ.[೭೭] ಭಕ್ತ, ದೇವ ಇವರ ನಡುವಿನ ಅನುಪಮ ಸಂಬಂಧವನ್ನು ಓದುಗ ಒಂದು ಕ್ಷಣ ಅನುಭವಿಸುವನು.

"ಕೊಳಲಿನ ಕಿರುಗೀತಿಕೆ" ಕವಿತೆಯೂ ರವೀಂದ್ರ ಕವಿತೆಯೊಂದರಿಂದ ಪ್ರಭಾವಿತವಾದುದು. ಕೃಷ್ಣನ ಕೊಳಲ ಮಧುರ ಗಾನದ ಸೆಳೆತಕ್ಕೆ ಒಳಗಾದ ಮುಗ್ಧೆಯೋರ್ವಳ ಅಂತರಂಗದ ತಳಮಳ ಸಾಂಕೇತಿಕವಾಗಿ ಬಿರುಗಾಳಿ, ತೊರೆಯ ನೀರಿನ ದಡಕ್ಕೆ ಅಪ್ಪಳಿಸುವ ದನಿ, ಹಾದಿಯ ಜನರು ನೋಡಿಯಾರೋ ಎನ್ನುವ ಕಳವಳ. ದೂರದ ನಾವಿಕನ ಹಾಡಿನ ನೀಳ್ದನಿಯೊಂದಿಗೆ ತೆಕ್ಕೆ ಹಾಕಿಕೊಂಡಿರುವ ಕೊಳಲಿನ ಕಿರುಗೀತಿಕೆ- ಇವುಗಳು ಶಾಬ್ದಿಕ ಪ್ರತಿಮೆಗಳಾಗಿ ಒಂದು ಅನುಭವವನ್ನು ಮಾರ್ದವವಾಗಿಸುತ್ತದೆ.

"ವಿಶ್ವ ಗಾಯನ" ಕವಿತೆಯು ಕವಿ ರವೀಂದ್ರರಿಂದ ಪ್ರಭಾವಿತವಾಗಿದೆ ಎಂಬುದು ತಿಳಿದುಬರುತ್ತದೆ. ವಿಶ್ವಗಾಯನ ಅಮರಗೀತೆಯನ್ನು ಮೈಯೆಲ್ಲ ಕಿವಿಯಾಗಿ ಕೇಳುತ್ತಿರುವುದಾಗಿಯೂ, ಆ ಹಾಡು ವಿಶ್ವವನ್ನೇ ಬೆಳಗುತ್ತಿದೆ. ಆಗಸಕ್ಕೆ ಅದು ಹೊನಲಾಗಿ ಹರಿಯುತ್ತಿದೆ. ಪರ್ವತದ ನಿರ್ಝರಿಯಂತೆ! ಕವಿಯ ಮನಸ್ಸು ಆ ದನಿಗೆ ತನ್ನ ದನಿಗೂಡಿಸುವ ಬಯಕೆ. ಆದರದು ಸಾಧ್ಯವಾಗುತ್ತಿಲ್ಲ. ಕವಿ ಹೇಳುವನು :

ಓ ವಿಶ್ವಗಾಯಕನೆ
ನಿನ್ನ ಗಾನದನಂತ
ಸುಸ್ವರದ ಜಾಲದಲ್ಲಿ
ಎನ್ನ ಕಿರಿಯದೆ ಸೇರಿ
ತೇಲಿ ಹೊಗುತಲಿಹುದು
ಭರದಿಂದ ಸಿಲ್ಕಿ[೭೮]

"ಪಾಳುದೇಗುಲ" ಕವಿತೆಯೂ ರವೀಂದ್ರರ ಋಣದಿಂದ ಮೂಡಿದುದಾಗಿ ಟಿ.ಎನ್. ಮಹದೇವಯ್ಯನವರು ಹೇಳಿಕೊಂಡಿರುವರು. ಕವಿತೆಯ ವಸ್ತು ಹಾಳುಬಿದ್ದ ಗುಡಿಯಲ್ಲಿ ಪೂಜೆಯಿಲ್ಲದೆ ವಿಗ್ರಹವೊಂದು ಅನಂತಕಾಲದಿಂದ ನಿಂತಿರುವುದರ ಕುರಿತದ್ದು. ಒಂದು ಕಾಲದಲ್ಲಿ ವೈಭವದಿಂದ ಮೆರೆದ ಅದು ಇಂದು ಕೇಳುವವರಿಲ್ಲದೆ ಮಂತ್ರಘೋಷಗಳಿಲ್ಲದೆ, ಗಂಟೆಗಳ ಸದ್ದಿಲ್ಲದೆ, ಧೂಪದೀಪಗಳಿಲ್ಲದೆ

ಮಂಗಳಾರತಿಯಿಲ್ಲದೆ ನಿಂತಿದೆ. ಕಾಲದ ನಿರಂತರ ಲೀಲೆಯಲ್ಲಿ ಈ ಏಳು ಬೀಳುಗಳನ್ನು ಕವಿ ಇಲ್ಲಿ ಸಾಂಕೇತಿಕವಾಗಿ ಹೇಳುತ್ತಿರುವರು. ಕಲೆಗೆ ಪ್ರೋತ್ಸಾಹವಿಲ್ಲದಿದ್ದರೆ ಶಿಲೆಯ ಮೂರ್ತಿಯನ್ನು ಕಡೆದ ಶಿಲ್ಪಿಗೆ ತೀವ್ರವಾದ ಹತಾಶೆ. ಆ ಹತಾಶೆಯಲ್ಲಿ ಆತ ತಾನು ಕಡೆದ ಮೂರ್ತಿಯನ್ನು ನೀರಿನಲ್ಲಿ ತೇಲಿಬಿಟ್ಟಿದ್ದನ್ನು ಕವಿ ಹೇಳುವರು. ಇವೆಲ್ಲದಕ್ಕೂ ಸಾಕ್ಷಿಯಾಗಿ ಹಾಳುದೇಗುಲದಲ್ಲಿ ಪೂಜೆಯಿಲ್ಲದೆ ನಿಂತ ಮೂರ್ತಿಯ ಬಗ್ಗೆ ವಿಷಣ್ಣ ಭಾವದಿಂದ ಕವಿ ಕಾಲನ ನೃಶಂಸಲೀಲೆಯನ್ನು ನೆನೆಯುವರು.

'ಶ್ರೀಮತಿ' ಕವಿತೆಯು ರವೀಂದ್ರ "ದಿ ಪ್ರಿನ್ಸೆಸ್" ಕವನದ ಆಧಾರದಿಂದ ರಚಿತವಾದುದೆಂದು ಟಿ.ಎನ್. ಮಹದೇವಯ್ಯನವರು ಹೇಳಿಕೊಂಡಿರುವರು. ಈ ಕವಿತೆಯ ವಸ್ತು ಧರ್ಮಸಂಘರ್ಷವನ್ನು ಕುರಿತದ್ದು. ಕವಿತೆ ಬುದ್ಧನು ನಾಡಿನಾದ್ಯಂತ ಭಿಕ್ಷುಗಳೊಡನೆ ಸಂಚರಿಸಿ ಕೊನೆಗೆ ಒಂದು ದಿನ ಕಾನನವೊಂದರಲ್ಲಿ ನೆಲೆಸಿ ತನ್ನ ಸಂದೇಶವನ್ನು ಎಲ್ಲೆಡೆ ಹರಡುತ್ತಿರುವ ದೃಶ್ಯದಿಂದ ಪ್ರಾರಂಭವಾಗುತ್ತಿದೆ. ಕವಿತೆಯೆ ಎರಡನೆಯ ಮಜಲು ಪ್ರಾರಂಭವಾಗುವುದು ಮಗಧ ರಾಜ್ಯದ ಅರಸು ಬಿಂಬಸಾರನು ಬುದ್ಧಗುರುವನ್ನು ವೇಣುವನಕ್ಕೆ ಕರೆದು ತರುವ ದೃಶ್ಯದ ಮೂಲಕ ಗುರುವಿಗೆ ತಿಳಿಯದಂತೆ ಅವನು ಕೊಟ್ಟ ಕುರುಹನ್ನು ಇಟ್ಟು ವಿಶ್ವವಿಖ್ಯಾತ ಶಿಲ್ಪಿಗಳಿಂದ ಸುಂದರವಾದ ಸ್ತೂಪವನ್ನು ನಿರ್ಮಿಸಲು ಆಜ್ಞೆ ಮಾಡುವನು. ಆ ಸ್ತೂಪದಲ್ಲಿ ಸಾಂಪ್ರದಾಯಿಕ ಪೂಜೆ ಪ್ರಾರಂಭವಾಯಿತು. ಗುರುವಿನ ಪಾದಕಮಲಗಳನ್ನು ನೆನೆಯುತ್ತ ಭಕ್ತಾದಿಗಳು ನಮಿಸಿ ಕಾಣಿಕೆ ಸಲ್ಲಿಸಿ ಹರಕೆಯನ್ನೊಪ್ಪಿಸುವರು. ಸ್ತೂಪದ ಬಳಿ ಬಂದು ನಮಿಸಿ ಪೂಜೆ ಸಲ್ಲಿಸುವವರಲ್ಲಿ ಶ್ರೀಮತಿಯೂ ಒಬ್ಬಳಾಗಿದ್ದಳು. ಹೀಗಿರುವಾಗ ಕಾಲಪುರುಷನ ಲೀಲೆ ಆ ಸುಂದರ ಭಕ್ತಿಮಯವಾದ ಪರಿಸರದ ಮೇಲೆ ಭೀಕರವಾಗಿ ಎರಗಿತು. ಬಿಂಬಸಾರನ ಮಗ ಅಜಾತಶತ್ರು ತಂದೆಯನ್ನು ಕ್ರೌರ್ಯದಿಂದ ಕೊಲೆ ಮಾಡಿ ಕೆನ್ನೀರ ಕಾಲುವೆಹರಿಸಿದನು. ನಾಡಿನಲ್ಲಿ ರಕ್ತದ ಕೆಸರಿನಲ್ಲಿ ಹಾದು ಗದ್ದುಗೆಯನ್ನು ಏರಿದನು. ಆತ ನಾಡಿನಲ್ಲಿ ಭಯದ ವಾತಾವರಣ ನಿರ್ಮಿಸಿದ ಬೌದ್ಧ ಅನುಯಾಯಿಗಳಿಗೆ ಖಡ್ಗ ಹಿಡಿದು ಬೆದರಿಸಿದ, ಶೂಲ ತೋರಿ ನಡುಗಿಸಿದ.

ಕವಿತೆಯ ಮೂರನೆಯ ಮಜಲು ಪ್ರಾರಂಭವಾಗುವುದು ಬುದ್ಧ ಗುರುವಿನ ಮನಸ್ಸಿನಲ್ಲಿ ವಿಶ್ವ ಪ್ರೇಮದ ಹೊಳಹು ಹೊಳೆಹೊಳೆದು ಬೆಳಗುತ್ತ ಎಲ್ಲರನ್ನು ಆಕರ್ಷಿಸಿದ್ದಿತೆಂದು ಹೇಳುವುದರಲ್ಲಿ ಆ ಹಂತದಲ್ಲೇ ಅಜಾತಶತ್ರುವಿನ ಆರ್ಯಧರ್ಮದ ಮೇಲಣ ಅಪ್ರತಿಮ ಪ್ರೀತಿ ಬೌದ್ಧಧರ್ಮದ ಮೇಲೆ ಗದಾಪ್ರಹಾರ ಮಾಡಿತು. ಆತ ಹೇಳಿದ "ಬುದ್ಧನಿಗೆ" ಆದ ಜ್ಞಾನೋದಯ ನನಗೆ ತಿಳಿದಿಲ್ಲ. ಅವನು ಕಂಡುಕೊಂಡ ದೈವಸಾಕ್ಷಾತ್ಕಾರದ ಅರಿವು ನನಗಿಲ್ಲ. ಆತ ವೇದಗಳ ಪಾವಿತ್ರ್ಯವನ್ನು ಗೌರವಿಸಲಿಲ್ಲ. ಧರ್ಮ ಹಾಳಾಗುತ್ತಲಿರಲು ಆ ನಾಸ್ತಿಕರು ಇನ್ನು ಬದುಕಲುಂಟೆ? ಆರ್ಯಧರ್ಮದ ಸ್ವರ್ಗಲೋಕಕ್ಕೆ ಕತ್ತಲೆ ಕವಿಯುವುದು ಎಲ್ಲಿಯಾದರೂ ಸಾಧ್ಯವೆ? ಸನಾತನ ಧರ್ಮವನ್ನು ನನ್ನ ಖಡ್ಗದಿಂದ (ಬೆದರಿಸಿ) ಉದ್ಧರಿಸುವೆ". ಹೀಗೆಂದ ಅಜಾತಶತ್ರು ಸ್ತೂಪಗಳನ್ನು ಪೂಜಿಸುವವರ ಕುತ್ತಿಗೆಯನ್ನು ಕತ್ತರಿಸಿದನು. ರುಂಡಗಳನ್ನು ಮುಂಡಗಳನ್ನು ರಕ್ತದಲ್ಲಿ ಅದ್ದಿದನು. ಬೌದ್ಧಗ್ರಂಥ ಭಂಡಾರದಲ್ಲಿದ್ದ ಗ್ರಂಥಗಳನ್ನು ರಾಶಿ ಹಾಕಿ ಅವುಗಳಿಗೆ ಬೆಂಕಿಯಿಟ್ಟನು. ಹೀಗೆ ಅವನ ತಂದೆ ಸ್ವೀಕರಿಸಿದ್ದ ಬೌದ್ಧ ಧರ್ಮ ನೆತ್ತರಿನಲ್ಲಿ ತೇಲಾಡುತ್ತಿತ್ತು. ಅವನು ತನ್ನ ಅರಮನೆಯ ತರುಣಿಯರಿಗೆ ಆಜ್ಞೆ

ಮಾಡುತ್ತ "ವೇದವನ್ನು ರಕ್ಷಿಸಿರಿ, ಬ್ರಾಹ್ಮಣರನ್ನು ಮನ್ನಿಸಿರಿ, ಧರ್ಮಸೂತ್ರವನ್ನು ಹಿಡಿದ ದೊರೆಯನ್ನು ಗೌರವಿಸಿರಿ, ಸನಾತನ ಧರ್ಮವನ್ನು ಕೆಣಕಬೇಡಿ, ಬೆದಕಬೇಡಿ, ಸ್ತೂಪವನ್ನು ಪೂಜಿಸುವವರನ್ನು ಶೂಲಕ್ಕೇರಿಸುವೆನು ಅವರ ನೆತ್ತರನ್ನು ಹಿಂಡುವೆನು" ಎನ್ನಲು ಅವರು ಆ ಎಚ್ಚರಿಕೆಯ ಮಾತು ಕೇಳಿ ನಡುಗಿದರು. ಜೀವವನ್ನು ಬಿಗಿಹಿಡಿದರು, ಹಿಂಜರಿದ ಅವರು ಸ್ತೂಪವನ್ನು ಪೂಜಿಸಲು ಅಂಜಿದರು.

ಈ ಭಯದ ವಾತಾವರಣ ರಾಜನಿಂದಲೇ ನಿರ್ಮಾಣವಾಗಿರುವಾಗ ಶ್ರೀಮತಿ ಅರಸನ ಆಜ್ಞೆಯನ್ನು ನೆನೆನೆನೆದು ನಿತ್ಯವೂ ಕಂಬನಿಗರೆಯುವಳು, ದುಃಖಿಸುವಳು. ಶ್ರೀಮತಿಯ ಅಂತರಂಗದ ತಳಮಳ ಕವಿತೆಯ ನಾಲ್ಕನೆಯ ಮಜಲನ್ನು ಆವರಿಸಿಕೊಂಡಿದೆ. ಆ ದುಃಖದ ಸನ್ನಿವೇಶದಲ್ಲೂ ಅವಳಿಗೆ ಬುದ್ಧದೇವನೇ ಅಸರೆ. ಅವಳು ಬುದ್ಧ ದೇವನನ್ನು ನೆನೆದು ನಿದ್ದೆಯಲ್ಲಿ ಒರಗುವಳು. ಕನಸಿನಲ್ಲಿ ಬುದ್ಧದೇವನು ಶಿಷ್ಯರೊಂದಿಗೆ ವನದ ತಣ್ಣೆಳಲ ತಂಪಿನಲ್ಲಿ ಕುಳಿತು ಬೋಧಿಸುತ್ತಿರುವ ಮನೋಹರ ದೃಶ್ಯವನ್ನು ಕಾಣುವಳು. ಆಕೆ ಕನಸಿನಲ್ಲಿ ಬುದ್ಧ ದೇವನ ಬಳಿಗೆ ಸಾಗಿ ಅವನ ಚರಣಗಳಿಗೆ ಮನದಣಿಯೆ ನಮಿಸುವಳು. ಗುರುದೇವ ನಗುನಗುತ್ತ ಹಸ್ತವನ್ನು ಮೇಲೆತ್ತಿ ಆಕೆಯ ತಲೆಯ ಮೇಲಿಡುವನು. ಅಲ್ಲಿಗೆ ಅವಳ ಕನಸು ಮುಗಿಯುವುದು. ಅವಳ ದಾಸಿಯರು ಅವಳನ್ನು ಕೂಗಿ ಎಚ್ಚರಿಸುವರು. ಕನಸಿನಿಂದ ಎಚ್ಚೆತ್ತು ಅವಳು ಹೊರಬರುವಳು. ಅವಳ ಮನಸ್ಸು ಜಡವಾಗಿತ್ತು. ಯಾವ ಕರ್ಯವನ್ನೂ ಮಾಡಲು ಉತ್ಸಾಹವಿರಲಿಲ್ಲ. ಅಷ್ಟರಮಟ್ಟಿಗೆ ಜಡತ್ವ ಅವಳ ಮನಸ್ಸನ್ನು ಆವರಿಸಿದ್ದಿತು. ಅದರಿಂದಾಗಿ ಉತ್ಸಾಹ ಕುಗ್ಗಿ ಶರೀರ ಭಾರವಾಗಿದ್ದಿತು. ಆ ಮನಸ್ಸಿನ ಜಡತ್ವವನ್ನು ನೀಗಿಕೊಳ್ಳಲು ಅವಳು ಕಾವಲುಗಾರರಿಗೆ ತಿಳಿಯದಂತೆ ಒಬ್ಬಳೇ ಉದ್ಯಾನದೆಡೆಗೆ ಬರುವಳು. ಆಕೆ ಸ್ತೂಪವನ್ನು ಸಮೀಪಿಸಿದಳು. ಒಮ್ಮೆ ಸುತ್ತಲೂ ನೋಡಿದಳು. ಭೂಮಿಯ ಸ್ಪರ್ಶಮಾಡಿದಳು. ಬಾಗಿ ನಮಿಸಿದಳು. ನಿಟ್ಟುಸಿರುಬಿಟ್ಟು ಮೇಲೆದ್ದು ಮುಂದಕ್ಕೆ ಹೆಜ್ಜೆಯಿಡಲು ಹೊರಟಾಗ ಹೃದಯದೊಳಗೆ ಯಾವುದೋ ಶಕ್ತಿಯ ಕೊರತೆ ಜೀವವನ್ನು ಕೊರಗಿಸಿತು, ದುಃಖ ಹೆಚ್ಚಿಸಿತು. ಇಲ್ಲಿಗೆ ಕವನ ಮುಕ್ತಾಯಗೊಳ್ಳುತ್ತದೆ. ಮಗಧ ಇತಿಹಾಸದಲ್ಲಿ ನಡೆದ ಧರ್ಮಸಂಘರ್ಷದ ನೆಪದಿಂದ ಚೆಲ್ಲಿದ ರಕ್ತ, ಜನತೆಯನ್ನು ಕಾಡಿದ ಭೀತಿಯ ಸಾಂಕೇತಿಕ ಪ್ರತಿನಿಧಿಯಾಗಿ ಶ್ರೀಮತಿ ಕವಿತೆಯ ಅವಿಭಾಜ್ಯ ಭಾಗವಾಗಿ ಬರುವಳು. ಅವಳು ಅಜಾತ ಶತ್ರುವಿನ ಅರಮನೆಯ ತರುಣಿಯರಲ್ಲಿ ಒಬ್ಬಳು. ಅವಳ ಶಾಂತಿ ಪ್ರೇಮ ಬುದ್ಧದೇವನ ಆರಾಧನೆಯಲ್ಲಿ ಕಂಡುಬರುತ್ತದೆ. ಅರಸನ ಕಟ್ಟಳೆಯನ್ನೂ ಮೀರಿ ಅವಳು ಗುಟ್ಟಾಗಿ ಸ್ತೂಪದ ಬಳಿ ಬರುವಳು. ಅದಕ್ಕೆ ನಮಿಸುವಳು, ಅವಳಿಗೆ ಸ್ತೂಪ ಕೇವಲ ಶಿಲೆಯ ಕಟ್ಟಡವಾಗಿ ಕಾಣಬರುವುದಿಲ್ಲ. ಅದು ನಿಂತ ನೆಲ ಶಾಂತಿಯ ಪ್ರತಿಪಾದಕನಾದ ಬುದ್ಧನ ನೆನಪಿನ ಅಂಗಳ. ಹೀಗಾಗಿ ಅವಳು ಶಾಂತಿಯನ್ನು ಅರಾಜಕಸ್ಥಿತಿಯಲ್ಲಿ ಬೆಂಬಲಿಸುವಳು. ಸ್ತೂಪಕ್ಕೆ ವಂದನೆ ಸಲ್ಲಿಸುವ ಮೂಲಕ.

ಈ ಕವಿತೆಯ ಅಂತರಾಳದಲ್ಲಿರುವ ಕ್ರೌರ್ಯ ಹಾಗೂ ಶಾಂತಿ ಪರಸ್ಪರ ವಿರುದ್ಧ ಗುಣಗಳು. ಬುದ್ಧನ ಆ ಶಾಂತಿಯ ನಾಡಿನಲ್ಲಿ ಕಾಲನ ಕರಾಳಲೀಲೆ ಹರಿಸಿದ ರಕ್ತದೋಕುಳಿ, ಆ ತಲ್ಲಣದ ಗಳಿಗೆಯಲ್ಲೂ ಶ್ರೀಮತಿ ಪ್ರಾಣಭೀತಿಯನ್ನು ತೆರೆದು ಸ್ತೂಪದ ಬಳಿಗೆ ಹೋಗಿ ನಮಿಸುವುದು ರಾಜನ ಆಜ್ಞೆಯನ್ನು ಪರಿಣಾಮಕಾರಿಯಾಗಿ ಧಿಕ್ಕರಿಸುವುದರ ಸಂಕೇತ. ಇತಿಹಾಸದ ಒಂದು ಘಟನೆಯನ್ನು ಆಧರಿಸಿ ಮನಸ್ಸಿನ ತುಮುಲಗಳನ್ನು

ಮನೋಜ್ಞವಾಗಿ ಬಿಂಬಿಸುವುದರಲ್ಲಿ ಈ ಕವಿತೆ ತನ್ನ ಸಾರ್ಥಕ್ಯವನ್ನು ಕಂಡುಕೊಂಡಿದೆ. ರವೀಂದ್ರ "ದಿ ಪ್ರಿನ್ಸೆಸ್" ಕವಿತೆಯ ಭಾವವನ್ನು ಸಮರ್ಥವಾಗಿ ಟಿ.ಎನ್. ಮಹಾದೇವಯ್ಯನವರು ಕನ್ನಡದಲ್ಲಿ ಅಳವಡಿಸಿರುವರು.

"ನಿನ್ನ ಗೀತೆಯ ಸೋದೆ" ಕವಿತೆಯೂ ರವೀಂದ್ರರ ಕವಿತೆಯೊಂದರ ಭಾವವನ್ನು ಆಧರಿಸಿದೆ. ವಿಶ್ವಾತ್ಮನ ಕೊರಳಿನ ಸವಿದನಿಯನ್ನು "ಅಚ್ಚರಿಯ ಮೌನದಲ್ಲಿ" ಆಸ್ವಾದಿಸುವಲ್ಲಿನ ಕವಿತೆಯ ಧನ್ಯತೆಯಿದೆ. ಅದು ಮನುಕುಲದ ಅನಂತ ಗೀತೆ. ಈ ಗೀತೆಯ ಮಧುರ ನಿನಾದದ ವ್ಯಾಪ್ತಿ ಆ ಗೀತೆಗೇ ತಿಳಿದಿಲ್ಲವೆಂದು ಮುಕ್ತಾಯಗೊಳ್ಳುವ ಕವಿತೆಯ ಭಾವ ವಿಸ್ಮಯಕಾರಿಯಾದುದು.

"ಕಿರುಗತೆ" ಎಂಬ ಕವಿತೆಯೂ ರವೀಂದ್ರರ ಕವಿತೆಯ "ಋಣ" ಕ್ಕೆ ಒಳಗಾಗದೆ. ಕವಿತೆಯ ಹೆಸರೇ ಹೇಳುವಂತೆ ಗುರುಗೋವಿಂದಸಿಂಹರ ಬದುಕಿನಲ್ಲಿ ನಡೆದ ಘಟನೆಯೊಂದರ ಮೆಲುಕು. ಗುರುಗೋವಿಂದಸಿಂಹರು ನದಿಯ ದಂಡೆಯಲ್ಲಿ ಪರ್ಣಕುಟಿಯೊಂದನ್ನು ನಿರ್ಮಿಸಿ ಅಲ್ಲಿ ಧ್ಯಾನಸ್ಥರಾಗಿ ಕುಳಿತಿದ್ದರು. ಓರ್ವ ಶ್ರೀಮಂತ ಶಿಷ್ಯ ಅವರ ಬಳಿ ಬಂದು ನನ್ನ ಸಮಸ್ತ ಸಂಪತ್ತನ್ನೂ ಎರಡು ಬಳೆಗಳ ರೂಪದಲ್ಲಿ ತಮಗೆ ಕಾಣಿಕೆಯಗಿ ತಂದಿರುವೆನು ಎಂದು ಹೇಳಿ ಅವರಿಗೆ ಅವನ್ನು ಒಪ್ಪಿಸಿದ. ಗುರುಗಳು ಒಂದು ಕಂಕಣ ಕೈಗೆ ತೆಗೆದುಕೊಂಡು ಕೈ ಬೆರಳಿನಿಂದ ತಿರುವಿ ಅದನ್ನು ಹೊಳಗೆ ಬಿಸಾಡಿದರು. ಶಿಷ್ಯ ಗುರುಗಳ ವರ್ತನೆ ನೋಡಿ ಬೆದರಿ ಬೆವರಿದ. "ಏನು ಗೈದಿರಿ ಗುರುವೇ ಎಲ್ಲ ಸಿರಿ ಹೋದುದೇ? ಆನು ಗತಿ ಎನಗೆ, ಎಂದು ಕಳವಳಿಸಿ ಕಂಪಿಸಿ ನಿಂತನು" ಮತ್ತೆ ಶಿಷ್ಯ ಹೇಳಿದ ನನ್ನ ಸಂಪತ್ತಿನಲ್ಲಿ ಅರ್ಧ ಹೋಯಿತು. ಅದು ಎಲ್ಲಿದೆ ಎಂಬುದನ್ನು ತಿಳಿಸಿ. ನಾನು ನದಿಯ ತಳಕ್ಕೆ ಹೋಗಿ ಹೇಗಾದರೂ ಮಾಡಿ ಹುಡುಕಿ ತಂದೇತರುವೆನು. ಗುರುಗಳು ಮಾತನಾಡದೆ ಇನ್ನೊಂದು ಕಂಕಣವನ್ನೂ ತೆಗೆದು ಹೊಳೆಯ ಪಾತಾಳಕ್ಕೆ ಬೀಸಾಡಿದರು. ಅನಂತರ ಶಿಷ್ಯನಿಗೆ ಹೇಳಿದರು. "ಅದೇ ನೋಡು ಅಲ್ಲಿ ಆ ನೀರ ಸುಳಿಯಲ್ಲಿ" ಎಂದು. ಈ ಕಥೆ ಗುರುಗಳ ತೀವ್ರವಾದ ಶಕ್ತಿ. ಶಿಷ್ಯನ ಬತ್ತದ ಸ್ವರ್ಣಮೋಹವನ್ನು ಸೊಗಸಾಗಿ ತಿಳಿಯಪಡಿಸುತ್ತದೆ. ಶಿಷ್ಯ ತಂದುಕೊಟ್ಟ ಅಪಾರ ಬೆಲೆಬಾಳುವ ಬಳೆಗಳಲ್ಲಿ ಗುರು ಗೋವಿಂದಸಿಂಹರ ಮನಸ್ಸು ಬಂಧನಕ್ಕೊಳಗಾಗಲಿಲ್ಲ. ಗುರುಗಳಿಗೆ ತನ್ನ ಎಲ್ಲ ಸಂಪತ್ತಿನ ರೂಪವಾದ ಬಳೆಗಳನ್ನು ಒಪ್ಪಿಸಿದ ಮೇಲೂ ಶಿಷ್ಯನ ದುರಾಸೆ ತೊಲಗಲಿಲ್ಲ. ಇಲ್ಲಿ ವ್ಯಾಮೋಹದಿಂದ ಗೆದ್ದವರು ಮತಿಗಳಾದ ಗುರುಗೋವಿಂದಸಿಂಹರು. ಈ ಪುಟ್ಟ ಘಟನೆ ಕಥನರೂಪದಲ್ಲಿದ್ದು ಸ್ವಾರಸ್ಯಕರವಾಗಿದೆ.

"ಶ್ರೀಮತಿ" ಕವಿತೆಗೆ (ಪು.೨೫೮) ಮಾತ್ರ ರವೀಂದ್ರರ ಕವಿತೆಯ ಮೂಲಆಕರ ಸೂಚಿಸಲಾಗಿದೆ. ಉಳಿದ ಯಾವ ಕವಿತೆಗೂ ಟಿ.ಎನ್.ಮಹದೇವಯ್ಯನವರು ಆಕರ ಸೂಚಿಸಿಲ್ಲ. ಆಕರ ಸೂಚಿಸಿದ್ದರೆ ಮೂಲ ಕವಿತೆಯೊಂದಿಗೆ ತುಲನೆ ಮಾಡಲು, ಕವಿಯ ಮೇಲಾದ ಪ್ರಭಾವ, ಸ್ವಂತಿಕೆ ಗುರುತಿಸಲು ಸಾಧ್ಯವಿದ್ದಿತು.

"ದೇವದೂತರ ಹೆಜ್ಜೆ" ಎಂಬ ಕವಿತೆಗೆ ಮೂಲ ಎಚ್.ಡಬ್ಲ್ಯೂ. ಲಾಂಗ್ ಫೆಲೋ ಎಂದು ಟಿ.ಎನ್. ಮಹದೇವಯ್ಯನವರು ಹೇಳಿಕೊಂಡಿರುವರು. ಕವಿತೆ ತೀರಾ ಸರಳವಾದುದು. ನಮಗೆ ಪ್ರಿಯರಾದವರು

ದೇವಲೋಕಕ್ಕೆ ಸಂದಾಗ ಅವರ ನೆನಪು ಮನದಲ್ಲಿ ಮಧುರವಾಗಿರುತ್ತದೆ. ಅವರನ್ನು ಒಮ್ಮೆ ಮನಸ್ಸಿನಲ್ಲಿ ನೆನೆದಾಕ್ಷಣ ಅವರು ತೆರೆದ ಬಾಗಿಲಿನಿಂದ ತೂರಿ ಬರುವರು. ಅವರು ಒಲವಿನ ನಲ್ಲೆಯಾಗಿರಬಹುದು. ಜೀವದ ಗೆಳೆಯರಾಗಿರಬಹುದು. ಅವರನ್ನು ನೆನೆದಾಕ್ಷಣ ಕಾಣಲು ಬರುವರು. ಎಳೆಯಪ್ರಾಯದ ಬಲಶಾಲಿಯಾದ ಹುಡುಗನೊಬ್ಬನು ತನ್ನ ವಯಸ್ಸಿಗನುಗುಣವಾಗಿ ಉನ್ನತ ಗುರಿಗಳನ್ನು ಸಾಧಿಸುವೆನೆನ್ನುವ ಕನಸುಕಾಣುತ್ತ ಬಾಳಿನ ಹಾದಿಯಲ್ಲಿ ಸಾಗುತ್ತ ಮರಣವನ್ನಪ್ಪಿದನು. ತೊಳ್ಬಲವಿಲ್ಲದವರು ಸತ್ಪುರುಷರು ಶಿಲುಬೆಗೇರಿದರು. ಸಾವಿನ ಹಾದಿ ಹಿಡಿದವರಲ್ಲಿ ಕವಿ ತನ್ನ ಬಾಳಸಂಗಾತಿಯನ್ನು ನೆನೆಯುವನು. ಆಕೆ ಪ್ರಾಯದಲ್ಲಿ ಕವಿಯ ಕೈಹಿಡಿದು ಪ್ರೀತಿಯ ಧಾರೆಯನ್ನು ಇನ್ನಿಲ್ಲದಷ್ಟು ಹರಿಸಿ ಸ್ವರ್ಗವನ್ನು ಸೇರಿ ದೇವತೆಯಾದಳು. ತನ್ನ ಬಾಳಗೆಳತಿಯನ್ನು ನೆನೆದಾಗ ಆಕೆ ಸ್ವರ್ಗದಿಂದ ಸದ್ದಿಲ್ಲದೆ ಪುಟ್ಟ ಹೆಜ್ಜೆಗಳನ್ನಿಡುತ್ತಾ ಬರುವಳಂತೆ. ಆಕೆ ಪಕ್ಕದ ಮನೆಯಲ್ಲಿ ಕುಳಿತು ಒಲವಿನೊಡೆಯ ಚಾಚಿದ ಕೈಯಲ್ಲಿ ತನ್ನದನ್ನು ಬೆಸೆಯುವಳಂತೆ. ಆಕೆ ಪಕ್ಕದಲ್ಲಿ ಕುಳಿತು ನನ್ನನ್ನು ನೆಟ್ಟನೆ ನೋಡುವಳು. ಎಳೆಯ ಕಣ್ಣುಗಳನ್ನು ಮುಚ್ಚಿ ಆಕೆ ಕವಿಗೆ ಇರುಳಿನಲ್ಲಿ ದೇವಿಯಂತೆ, ನಗುವ ನಕ್ಷತ್ರವು ಆಗಸದಿಂದ ಭೂಮಿಯ ಕಡೆ ನೋಡುವಂತೆ ಕಾಣಬರುವಳು. ಆ ಮೌನದೇವಿಯ ಮನಸ್ಸು ಇನಿಯನೊಡನೆ ಸುಂಭಾಷಿಸುವುದು. ಆ ದೇವಿಯ ಪ್ರಾರ್ಥನೆ ನಡೆಯುತ್ತಿರಲು ಗಾಳಿಯ ತುಟಿಗಳು ಹರಕೆಯನ್ನು ಹೇಳುತ್ತಿರುವಂತೆ ಕವಿತೆ ಭಾಸವಾಗುವುದು. ಕವಿತೆಯ ಕೊನೆಯ ನಾಲ್ಕು ಸಾಲುಗಳು ಮಹತ್ವದವು:

ಒಂಟಿಗನಾದರು ಮನ ಕುಗ್ಗಿದರೂ
ಬೆಚ್ಚುವ ಬೆದರುವ ಭಯವಿಲ್ಲ.
ಜೀವನ ಗೆಳೆಯರು ಒಲವಿನ ನಲ್ಲೆಯ
ತಿರೆಯೊಳು ಬಾಳಿಯು ಮಡಿದಿರಲು!

ಕವಿ ಪ್ರೀತಿ ಅಮರವೆನ್ನುವುದನ್ನು ಕವಿತೆಯಲ್ಲಿ ಧ್ವನಿಪೂರ್ಣವಾಗಿ ಹೇಳುತ್ತಿರುವನು. ನಾವು ಪ್ರೀತಿಸುವ ವ್ಯಕ್ತಿಗಳು (ಜೀವದ ಗೆಳೆಯರು, ಒಲವಿನ ನಲ್ಲೆ) ನಮ್ಮ ಬಳಿ ಇಲ್ಲದಿದ್ದರೂ ಅವರ ನೆನಪು ಶಾಶ್ವತವಾಗಿರುವುದರಿಂದ ನೆನೆದ ಕ್ಷಣ ಸ್ವರ್ಗದಿಂದ ಬರುವರು, ಮೌನವಾಗಿ ಮಾತಾನಾಡುವರು. ಆದ್ದರಿಂದ ಯಾರೂ ಒಂಟಿಯಲ್ಲ. ಅಗಲಿಕೆಯಿಂದ ಮನಸ್ಸು ಕುಗ್ಗಬೇಕಿಲ್ಲ. ಬೆಚ್ಚುವ ಬೆದರುವ ಭಯವಿಲ್ಲವೆಂದು ಸಮಾಧಾನಿಸುವನು. ಪ್ರಿಯರಾದವರ ಸಾವಿನ ಬಗ್ಗೆ ಮನ ಕುಗ್ಗದಿರುವಂತೆ ಕವಿ ಕೊಡುವ ಸಾಂತ್ವನ ಕವಿತೆಗೆ ಬೇರೊಂದು ಮಜಲು ಕೊಡುತ್ತದೆ. ಸಾವಿನ ಬಗೆಗೆ ಬರೆದ ಈ ಭಾಷ್ಯ ದುಃಖಿಗಳ ಪಾಲಿಗೆ ಒಂದು ಹೊಸ ಆಶಾವಾದಂತಿದೆ.

ಬೈರನ್ ಕವಿಯ Prisoner of Chillon ಎನ್ನುವ ದೀರ್ಘಕವಿತೆಯ ಭಾವಾನುವಾದ "ಸೆರೆಯಾಳು". "ಭಾವಾನುವಾದ" ಎಂಬ ಮಾತನ್ನು ಟಿ.ಎನ್. ಮಹದೇವಯ್ಯನವರೇ ಹೇಳಿರುವರು. ನಾಯಕನ ಸ್ವಗತದೊಂದಿಗೆ ಕಥೆಯ ಸುರುಳಿ ಬಿಚ್ಚುತ್ತದೆ. ತಂದೆಯ ಹಿತಕ್ಕಾಗಿ ಸೆರೆಯಾಳಾಗಿ ಕತ್ತಲೆಯ

ಕೋಣೆಯಲ್ಲಿ ಪ್ರಕೃತಿಯ ಸಂಪರ್ಕ ಕಡಿದುಕೊಂಡು ಕಾಲುಸರಪಳಿ ಹೊತ್ತು ಬಹುಕಾಲ ಸವೆಸಿದ್ದಾಯಿತು. ಮೃತ್ಯುವನ್ನು ಮೋಹಿಸಿ ನಿಂತೆ, ಬಹುಕಾಲ ಸೆರೆಯಾಳಾಗಿ ಇದ್ದುದರಿಂದ ತಲೆಗೂದಲು ನೆರೆತು ಬಿಳುಪಾಯ್ತು. ಮಾಡಲು ಕೆಲಸವಿಲ್ಲದೆ. ಕೈಕಾಲು ಮುದುಡಿದೆ. ಮನುಷ್ಯ ಸಂಪರ್ಕವಿಲ್ಲದೆ ಸೆರೆಮನೆಯಲ್ಲಿ ಜಡತನದಿಂದ ಬೇಸತ್ತು ತಾನು ಆ ಕತ್ತಲೆಯ ಕೋಣೆಯಲ್ಲಿ ಕೊಳೆತು ಕಸವಾಗಿದ್ದೆ. ತಂದೆಯಾದರೂ ತನ್ನ ಅಭಿಮತವಿಡಿದು ಶೂಲವನ್ನೇರಿದ. ಅವನ ವಂಶದಲ್ಲಿ ಬಂದವರು ಏಳುಮಂದಿ ಮಕ್ಕಳು, ಅವನ ಮಕ್ಕಳೂ ಸೆರೆಯಾಗಿ ಕತ್ತಲೆಯ ಕಸವಾದರು. ಏಳುಮಂದಿ ಮಕ್ಕಳಲ್ಲಿ ಉಳಿದಿರುವವನು ನಾನೊಬ್ಬನೆ. ಆರುಮಂದಿ ಸಹೋದರರಲ್ಲಿ ಓರ್ವ ಹುಟ್ಟುವಾಗಲೇ ಸತ್ತ. ಇನ್ನೋರ್ವ ಬೆಂಕಿಯನ್ನು ಪ್ರವೇಶಿಸಿ ಸತ್ತ. ಇಬ್ಬರು ಆಯುಧ ಹಿಡಿದು ಹೋರಾಡಿ ಸತ್ತರು. ವಿಧಿಯ ಅಣಕಕ್ಕೆ ಸಿಕ್ಕಿ ಇನ್ನುಳಿದ ಮೂವರು ಸೆರೆಯಾದೆವು. ಈ ಮೂವರಲ್ಲಿ ನಾನೊಬ್ಬನೇ ಈಗ ಉಳಿದಿರುವವನು. ಈ ಕಥನ ಕವನದ ಮೊದಲ ಭಾಗದಲ್ಲಿ ಬರುವ ದಾರುಣ ಕಥೆಯಿದು.

ಕವನದ ಎರಡನೆಯ ಭಾಗದಲ್ಲಿ ಸೆರೆಮನೆಯ ಚಿತ್ರವನ್ನು ನಾಯಕ ಕೊಡುವನು. ಸೆರೆಯಮನೆಯ ಸುತ್ತ ಹಳೆಯ ಕೋಟೆ. ಅದರೊಳಗೆ ಸೆರೆಮನೆ. ಅಲ್ಲಿ ಏಳು ಕಂಬಗಳು. ಒಳಗೆ ಕತ್ತಲೆ, ಜೌಗುನೆಲ. ಕೋಟೆಯ ಗೋಡೆಯ ಬಿರುಕಿನ ಕಿಂಡಿಯಿಂದ ಹಾದು ಬರುತ್ತಿತ್ತು ಸೂರ್ಯರಶ್ಮಿ. ಅದು ಹೇಗಿತ್ತೆಂದರೆ, ಕತ್ತಲೆಯಲ್ಲಿ ದೀವಟಿಗೆ ಹಿಡಿದಂತೆ ಆ ಜೌಗುನೆಲದಲ್ಲಿ ಬಾಗಿ ಮಿಂಚಿತ್ತು. ಒಂದೊಂದು ಕಂಬಕ್ಕೂ ಒಂದೊಂದು ಬಳೆ. ಆ ಬಳೆಗೆ ಕಬ್ಬಿಣದಿಂದ ಮಾಡಿದ ಸರಪಣಿ. ಅದು ಸೆಳೆಯಾಳನ್ನು ಸಂಕೋಲೆಯಲ್ಲಿ ಬಂಧಿಸಿತ್ತು. ಕಾಲಿಗೆ ಹಾಕಿದ ಸರಪಣಿ ಮುಂದೆ ಹೆಜ್ಜೆ ಹಾಕಿದ್ದೇ ಆದರೆ ತನ್ನ ಗುರುತು ಮೂಡಿಸುತ್ತಿತ್ತು. ಸೆರೆಮನೆಯಿಂದ ಹೊರಗೆ ಬಂದರೂ ಸರಪಣಿ ಕಾಲಿಗೆಲ್ಲ ಸುತ್ತಿಕೊಂಡಿರುತ್ತದೆ. ಚಿಂತೆಯಲ್ಲಿ ಕಳೆದ ದಿನಗಳು ಲೆಕ್ಕವಿಲ್ಲ. ತಿಳಿಯದಂತೆ ಎಷ್ಟೋ ವರುಷಗಳು ಜಾರಿದವು. ನನ್ನ ಸೋದರನೊಬ್ಬ ನಾನು ಬದುಕಿ ಪಕ್ಕದಲ್ಲಿರುವಾಗಲೇ ಬಿದ್ದು ಹೆಣವಾದ ದಾರುಣ ಸಂಗತಿಯನ್ನು ನಾಯಕ ಹೇಳುವನು.



ಮೂರನೆಯ ಭಾಗದಲ್ಲಿ ಸೆರೆಮನೆಯ ಕಲ್ಲಿನ ಗೋಡೆಗಳು, ಕತ್ತಲ ಕೋಣೆ, ಒಂದೊಂದು ಕಂಬದಲ್ಲಿ ಮೂವರನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ಕಬ್ಬಿಣದ ಸರಪಳಿಯಲ್ಲಿ ಒಂದಿಷ್ಟೂ ಅಲುಗದಂತೆ ಬಿಗಿಯಲಾಗಿತ್ತು. ಒಬ್ಬರು ಮತ್ತೊಬ್ಬರನ್ನು ಸಂತೈಸುವಂತಿಲ್ಲ. ಕತ್ತಲೆಯಲ್ಲಿ ನಾವು ಬೇರೆ ಬೇರೆ ಕೈ ಕಾಲನ್ನು ಸಂಕೋಲೆ ಬಿಗಿದು ನಾವು ದೂರವಾಗಿದ್ದರೂ ಅಂತರಂಗದಲ್ಲಿ ಪುಟಿವ ಚೈತನ್ಯದಿಂದ ನಾವು ಒಂದೇ ಆಗಿದ್ದೆವು. ತೀಡುವ ತಂಗಾಳಿ, ಮೋಡಗಳಿಲ್ಲದೆ, ನಿಶ್ಚಲವಾದ ತಿಳಿಯಾದ ಆಕಾಶ, ಬಿಡುಗಡೆಯ ಮರೀಚಿಕೆಯನ್ನು ಹಿಂಬಾಲಿಸಿ, ಮಾತಿನಲ್ಲಿ ನಾವು ಮೂವರು ಪರಸ್ಪರ ಸಂತೈಸಿದೆವು. ಹಳೆಯ ಕತೆಗಳನ್ನು ನೆನಪಿಸಿಕೊಳ್ಳುತ್ತ, ಒಂದಲ್ಲಾ ಒಂದು ದಿವಸ ಬಿಡುಗಡೆಯಾಗಬಹುದೆನ್ನುವ ಆಸೆಯನ್ನು ಬುದ್ಧಿಪೂರ್ವಕವಾಗಿ ಗೆದ್ದು ಏಕಾಂತವನ್ನು ಕೊಲ್ಲಲು ಹಾಡನ್ನು ಹಾಡಿದೆವು. ಹೀಗೆ ದಿನಗಳನ್ನು ಕಳೆದೆವು. ನಮ್ಮ ಶರೀರದ ಶಕ್ತಿಗುಂದಿ ಕೊರಲ ದನಿ ಕುಗ್ಗಿತ್ತು. ಎದೆಗೆ ಬರೆ ಕಟ್ಟಿಂತೆ ದಿನ ಕಳೆದ ಬೇಸರದಿಂದ ನಮಗೆ ಮಾತೂ ಬೇಡವಾಯಿತು. ಎಷ್ಟೇ ಆದರೂ ಸ್ವತಂತ್ರತೆಗೆ ನಾವು ಪರಕೀಯರು. ಆ ಮನೆ ನಮಗೆ ಬಿಡುಗಡೆಯಿಲ್ಲದ ಸೆರೆಮನೆ.

ನಾಲ್ಕನೆಯ ಭಾಗದಲ್ಲಿ ಉಳಿದ ಮೂವರಲ್ಲಿ ಕಿರಿಯವನ ಬಗೆಗೆ ನಾಯಕ ಹೃದಯ ತುಂಬಿ ನುಡಿಯುವನು. ಕಿರಿಯವನು ನನ್ನ ತಂದೆಗೆ ಜೀವ, ತಾಯಿಗೆ ಅವಳ ಕಣ್ಣಿನ ಕಾಂತಿ, ಆ ತಾಯಿಯ ಆಳವಾದ ಪ್ರೀತಿಯನ್ನು ನೆನೆದು ನಾಯಕನ ಹೃದಯ ಮಿಡುಕಿತ್ತು, ಕಂಬನಿ ಕರೆದಿತ್ತು. ಆತ ಬಲುಚೆಲುವ. ದೂರದ ಧ್ರುವಪ್ರಾಂತದಲ್ಲಿ ಒಮ್ಮೆ ಸೂರ್ಯ ಮುಳುಗಿದರೆ ಆರು ತಿಂಗಳು ಕತ್ತಲೆ, ಆದರೂ ಶುಭ್ರ ಧವಳದ ಮಂಜು ಮಿಂಚುವುದು. ಹಾಗೆ ಆತ ನಿರ್ಮಿಲನು, ಚಟುವಟಿಕೆಯಿಂದ ಕೂಡಿರುವವನು, ತನ್ನ ವಯಸ್ಸಿನ ಬೇರೆಯವರು ಜ್ಞಾನವನ್ನು ಪಡೆದು ವಿದ್ಯಾವಂತರಾದರೆ, ತಾನು ಕತ್ತಲೆಯ ಕೋಣೆಯಲ್ಲಿ ಸರಪಣಿಗಳಿಂದ ಬಂಧಿತನಾಗಿ ಇರಬೇಕಾದ ತನ್ನ ಸ್ಥಿತಿಗಾಗಿ ಆತ ದುಃಖಿಸುವನು. ಆ ದುಃಖದಲ್ಲೂ ಸುಖ ಕಂಡು, ಜೀವ ಶಾಂತಿಯ ಬಯಸಿ, ಸ್ವಾತಂತ್ರ್ಯದ ಕನಸು ಕಂಡಿತು.

ಐದನೆಯ ಭಾಗದಲ್ಲಿ ನಾಯಕ ತನ್ನ ಇನ್ನೊಬ್ಬ ತಮ್ಮನ ವ್ಯಕ್ತಿತ್ವದ ಪರಿಚಯ ಮಾಡಿಕೊಡುವನು. ಆತ ಗಟ್ಟಿ ಮನಸ್ಸಿನವನು, ಕಡುಕಷ್ಟಗಳ ಜೊತೆಗಾರ, ಪುಷ್ಟವಾದ ಶರೀರ, ಆತ ಕಾಳಗದಲ್ಲಿ ವೀರ, ವೀರ ಮರಣವು ಆತನಿಗೆ ಸಿಗದೆ ಸೆರೆಮನೆಯ ಸಂಕೋಲೆಯಲ್ಲಿ ಬಂಧಿತನಾಗಿ ಅವನ ಉತ್ಸಾಹ ದಿನದಿನಕ್ಕೆ ಕುಂದುತಿದ್ದಿತು. ನಾನು ಅವನನ್ನು ಎಷ್ಟೇ ಸಮಾಧಾನಿಸಿದರೂ ಅವನಿಗೆ ಶಾಂತಿಯಿಲ್ಲ, ಸುಖವಿಲ್ಲ, ಆತ ಒಳ್ಳೆಯ ಬೇಟೆಗಾರ, ತೋಳ ಜಿಂಕೆಗಳನ್ನು ಬೆನ್ನಟ್ಟಿ ಹಿಡಿಯುವ ಕನಸು ಅವನದು. ಆದರೆ, ಕಾಡುಕಣಿವೆಯ ಕತ್ತಲೆಯ ಆತನ ಬೇಟೆಯ ತಾಣವಾಯಿತು! ಅವನ ಕೈಕಾಲುಗಳಿಗೆ ಬಿಗಿದ ಸರಪಳಿಯ ಬಿಗಿತ ವಜ್ರಬಂಧನವಾಯಿತು.

ಆರನೆಯ ಭಾಗದಲ್ಲಿ ಸೆರೆಯಾಗಿದ್ದ ಸ್ಥಳದ ಕೋಟೆ ಗೋಡೆಯ ಕೆಳಗೆ ಸಾವಿರ ಅಡಿ ಆಳದಲ್ಲಿ ತುಂಬುಹೊಳೆ ಕಂದಕದಲ್ಲಿ ಮರೆತು ತೊರೆತುಂಬಿ ಮೊರೆಯುತ್ತಿರಲು ಕೋಟೆಯ ಒಳಗೆ ಸೆರೆಯಾಳಾಗಿ ಪ್ರಾಣವಿದ್ದೂ ಸ್ಮಶಾನದಲ್ಲಿರುವ ಕೊರಗಿನ ಭಾವ. ಹಗಲಿರುಳು ಹೊಳೆಯ ಅಲೆಯ ಸದ್ದು, ಚಳಿಗಾಲದಲ್ಲಿ ತುಂತುರಿನ ಕೊರೆವ ನೀರು, ಸೆರೆಮನೆಯ ಸರಲುಗಳನ್ನು ತೊಳೆದು ಹರಿಯುತ್ತಲಿತ್ತು. ಅ ತುಂಬು ಹೊಳೆಯ ಅಬ್ಬರ ಸುಳಿವ ಗಾಳಿಯ ಜೊತೆಗೂಡಿ ಆಗಸವನ್ನೂ ಮುಟ್ಟುತ್ತಿತ್ತು. ಹೊಳೆಯ ನೀರಿನ ರಭಸಕ್ಕೆ ಬಂಡೆಗಳು ಕದಲಿದವು. ಭೂಮಿ ಅಲುಗಿತೊ ಎನ್ನುವ ಗಾಬರಿ, ಭ್ರಮೆ, ಅದು ಬಂಧನದಿಂದ ಬಿಡುಗಡೆಯನ್ನು ನೀಡುವುದಾದರೆ ಎಂಬ ಕಾತರ, ಈ ಬಿಡುಗಡೆಯ ಸಂದರ್ಭದಲ್ಲಿ ಸಾವು ಸುಖದಾಯಿಯೆಂದು ಮನಸ್ಸು ಉಲಿಯಿತು.

ಏಳನೆಯ ಭಾಗದಲ್ಲಿ ಕಿರಿಯ ತಮ್ಮನ ಸಾವಿನ ವಿವರಗಳಿವೆ. ಕಿರಿಯ ಸೋದರನದು ಸಹಜ ಸಾವಲ್ಲ. ಆತ ಸ್ವಾತಂತ್ರ್ಯವನ್ನು ಬಯಸಿದ್ದ. ಅದು ದೂರದ ಕನಸೆಂದು ತಿಳಿದಾಗ ಆತ ಮನದಲ್ಲೇ ಕೊರಗತೊಡಗಿದ. ಅವನ ದೃಢಕಾಯ ಬಡವಾಯಿತು. ಅವನು ಉಣಿಸನ್ನು ಅತ್ತ ನೂಕಿದನು ಸಾಯುವ ಅಪೇಕ್ಷೆಯಿಂದ. ಮೇಕೆಹಾಲಿಗೆ ಕಂದಕದ ಜರಿನೀರು ಬೆರಸಿ ಕುಡಿಯಲು ಕೊಟ್ಟರು, ಒಣಗಿದ ರೊಟ್ಟಿ ಎಸೆದರು, ಅದು ಮೃಗದ ಬದುಕು, ಸ್ವಾತಂತ್ರ್ಯವಿಲ್ಲದ ಗುಲಾಮಿ ಬದುಕು, ಸಂಕೋಲೆಯ ಬದುಕು, ಅವನಿಗೆ ಬೇಡವಾಗಿದ್ದಿತು, ತಡಮಾಡದೆ ಕಿರಿಯನೂ ಶವವಾದ. ನನ್ನ ಕಣ್ಣೆದುರಿಗೇ ಸಾವು ಅವನನ್ನು ಆಕ್ರಮಿಸಿತು. ನಾನು ಅವನಿಗೆ

ಕೈನೀಡಿ ನೆರವು ನೀಡಲು ಸಾಧ್ಯವಾಗಲಿಲ್ಲ. ಕಾಲಿನ ಸರಪಳಿಯನ್ನು ಒದರಿ ಅವನ ಬಳಿ ಸೇರಲು ಪ್ರಯತ್ನಿಸಿದೆ. ಹೋರಾಡಿ ವಿಫಲನಾದೆ. ನನ್ನ ಕಿರಿಯ ಸೋದರನ ಕಾಲಿನ ಸಂಕೋಲೆ ಬಿಚ್ಚಿದರು. ಪಕ್ಕದಲ್ಲೇ ಒಂದು ಹಳ್ಳತೋಡಿದರು. ಜವುಗು ನೆಲದಲಿ "ಬಿಸಿಲು ಬೀಳುವ ನೆಲದಿ ಮುಚ್ಚಿರಣ್ಣಾ" ಎಂದು ಹಲುಬಿ ಬೇಡಿದೆ. "ಸಾವಿನೊಳಗಾದರೂ ಬಿಡುಗಡೆಯ ಕಲಿಗೆ ಸ್ವಾತಂತ್ರ್ಯವಿರಲೆಂದು!" ರಾಜನ ಕಡೆಯವರು ತೆಗಳಿ ನಕ್ಕರು, ಕಡೆಗೆ ಅಲ್ಲೇ ಹುಗಿದರು. ಬಯಸಿ ಬೇಡಿದ ಸ್ವಾತಂತ್ರ್ಯ ಕಡೆಗೂ ಅವನಿಗೆ ಸಿಗಲೇ ಇಲ್ಲ. ಅದೊಂದು ಹೃದಯವಿಹೀನರು ಮಾಡಿದ ಕೊಲೆ.

ಎಂಟನೆಯ ಭಾಗ ನಾಯಕನ ಕಿರಿಯ ತಮ್ಮನ ಸಾವಿನಿಂದ ಜರ್ಝರಿತವಾದ ಮನದ ಮೌನ ರೋದನ ಎದೆ ನಡುಗಿಸಿಬಿಡುತ್ತದೆ. ಆ ಕಿರಿಯ ತಮ್ಮ ಎಲ್ಲರೊಂದಿಗೆ ಸ್ನೇಹಭಾವದಿಂದಿರುವ ಚೆಲುವ ಚೆನ್ನಿಗ. ಸುಖದಲ್ಲಿ ಬೆಳೆದವನು. ತಂದೆಯ ಅತ್ಯಂತ ಪ್ರೀತಿಗೆ ಪಾತ್ರನಾಗಿದ್ದ ಆತ ಅವನ ಜೀವದುಸಿರಾಗಿದ್ದ. ನಾಯಕನಿಗಿದ್ದ ಕೊನೆಯ ಆಸೆಯೊಂದೆ. ಕಿರಿಯ ಸೋದರನ ಬಿಡುಗಡೆಗಾಗಿ ನಾಯಕ ಜೀವ ಹಿಡಿದಿದ್ದ. ಅದು ದೂರದ ಕನಸೆಂದು ತಿಳಿದ ಕಿರಿಯ ತಮ್ಮ ದಿನದಿನವೂ ಕೊರಗಿ ಸೊರಗಿ ಬೆಂಡಾದ. ಸಾವಿನ ನಾನಾ ರೂಪಗಳನ್ನು ನಾಯಕ ಕಂಡಿರುವನು. ಕಿರಿಯ ತಮ್ಮ ಪ್ರಭುತ್ವದ ನಿರ್ದಯ ತೀರ್ಮಾನಕ್ಕೆ ಬಲಿಯಾದ. ಅವನ ಸಾವನ್ನು ನೋಡಿಯೂ ತಡೆಯದೆ ಮನಸ್ಸು ನಿತ್ಯವೂ ಮೌನದಲ್ಲಿ ಕೊರಗಿತ್ತು. ಮೊಗ್ಗು ಮುದುಡಿದಂತೆ, ಹೂವು ಸೊರಗಿದಂತೆ ಕಿರಿಯ ತಮ್ಮ ಸಣ್ಣಗಾದ, ಅವನ ಕಣ್ಣಿನಲ್ಲಿ ನೀರಿಲ್ಲ. ಚಿಕ್ಕವಯಸ್ಸಿನಲ್ಲೇ ಆತ ಪ್ರಾಣಬಿಟ್ಟ. ಅವನು ನಿತ್ಯವೂ ಕೊರಗುವುದನ್ನು ನಾನು ನೋಡಲಾರದೆ ನೋಡಿದೆ, ಭಯದಲ್ಲಿ ನಾನು ಕಿರುಚಿದೆ. ಆವುದೋ ಉದ್ವೇಗದ ಕ್ಷಣದಲ್ಲಿ ನಾಯಕ ಬಂಧನದ ಸರಪಳಿಯನ್ನು ಕಿತ್ತೆಸೆದು ಕಿರಿಯ ತಮ್ಮನೆಡೆಗೆ ಧಾವಿಸಿದ. ಆದರೆ ಅವನು ಇರಲಿಲ್ಲ. ಸತ್ತ ತಮ್ಮನ ಕೈಯೆತ್ತಿ ತನ್ನ ಕೈಯೊಳಗಿಟ್ಟು ನಾಯಕ ಸುಮ್ಮನೆ ಕುಳಿತ. ಬೀಸುವ ಚಳಿಗಾಳಿ ಕೈ ಕೊರೆಯುತ್ತಿತ್ತು. ಅದಕ್ಕೆ ಚಲಿಸುವ ಶಕ್ತಿಯಿರಲಿಲ್ಲ. "ಆಸೆ ಬರಿ ಬಯಲಾಗಿ ಬಯಕೆ ಬರಿ ಕನಸಾಗಿ ಮನ ಮಿಡುಕಿ ಪಡೆಯದಲೆ ಇಂತೇತಕೀ ಬದುಕು?" ಎಂದು ನಾಯಕ ಪ್ರಶ್ನಿಸುವನು. ಬೇಡವಾದರೂ ಬದುಕು ನಾ ಸಾಯಲಾರೆ! ಭೂಮಿಯ ಮೇಲೆ ಬದುಕುವ ಆಸೆ ಸ್ವಲ್ಪವೂ ಇಲ್ಲ. ಆದರೂ ಶುಭದ ಘಳಿಗೆಯ ನಿರೀಕ್ಷೆಯಲ್ಲಿ ನಂಬಿಕೆ ಹೊಂದಿ ನಾಯಕ ಸಾಯದೆ ಉಳಿದಿರುವನು.

ಹೃದಯವಿದ್ರಾಕವಾದ ಕಥೆ-ಕಥನಗೀತೆ-ಸೆರೆಯಾಳು. ಏಳು ಜನ ಸೋದರರಲ್ಲಿ ಹಿರಿಯನಾದ ಕಥಾನಾಯಕ ಸೆರೆಯಾಳಾದ ತನ್ನ ಹಾಗೂ ಆರು ಮಂದಿ ಸೋದರರ ದುರಂತ ಕಥೆಯನ್ನು ಮನಮಿಡಿಯುವಂತೆ ನಿರೂಪಿಸಿರುವರು. ಅವನ ಕಣ್ಣಮುಂದೆಯೇ ಆರು ಮಂದಿ ಸೋದರರು ಮರಣವನ್ನಪ್ಪಿದರು. ಕಿರಿಯ ತಮ್ಮನ ಸಾವು ಈ ಕಥನಗೀತದಲ್ಲಿ ವಿಶೇಷ ಸ್ಥಾನ ಪಡೆದಿದೆ. ನಾಯಕ ಸೆರೆಯಾಳಾಗಿ ಎಲ್ಲರ ಸಾವಿಗೆ ಸಾಕ್ಷಿಯಾಗಿರುವನು. ಅವನ ಹೃದಯ ವಿಶೇಷವಾಗಿ ರೋದಿಸಿರುವುದು ಕೊನೆಯ ತಮ್ಮನ ಸಾವಿನ ಸಂದರ್ಭದಲ್ಲಿ. ಕತ್ತಲೆಯ ಕೂಪದಲ್ಲಿ ಕೈಕಾಲು ಸರಪಳಿಯಿಂದ ಬಂಧಿಸಲ್ಪಟ್ಟವನಾಗಿ ಬಹುಕಾಲ ಸೆರೆಯಾಳಾಗಿ ಕಾಲ ಕಳೆದಿದ್ದರೂ ಅವನ ಬಿಡುಗಡೆಯ ಕನಸು ಮನದಲ್ಲಿ ಜೀವಂತವಾಗಿದೆ. "ನಾ ಸಾಯಲಾರೆ! ತಿರೆಯಾಸೆಯಿನಿತಿಲ್ಲ! ಆದರೂ ನಂಬಿಹೆನು. ಸಾಯದಲೆ ಉಳಿದಿಹೆನು! ಬೇಡವಾದರೂ ಬದುಕು" ಎನ್ನುವ

ಅವನ ಆಶಾವಾದ ಕವಿತೆಯಲ್ಲಿ ಹೆಪ್ಪುಗಟ್ಟಿದೆ. ಟಿ.ಎನ್. ಮಹದೇವಯ್ಯನವರು ಬೈರನ್ ಕವಿಯ "Prisoner of Chillon" ಎನ್ನುವ ಕವಿತೆಯ ಭಾವಾನುವಾದವನ್ನು ಸೊಗಸಾಗಿ ಮಾಡಿರುವರು. ಕವಿತೆಯ ಮೂಲಭಾವವನ್ನು ಗ್ರಹಿಸಿ ಕನ್ನಡಕ್ಕೆ ತರುವಲ್ಲಿ ಅವರ ಕವಿಪ್ರತಿಭೆ ಕಳೆಗಟ್ಟಿದೆ.

ಓಸ್ಕರ್ ವೈಲ್ಡ್‌ನಿಂದ ಪ್ರೇರಿತವಾದ ಕವಿತೆ "ಹುಷ್" ಸಾವಿನ ಜಿಜ್ಞಾಸೆಯನ್ನು ಅದು ಮಾಡಿದರೂ ಪರಿಣಾಮಕಾರಿಯಾಗಿಲ್ಲ. ಟಿ.ಎನ್. ಮಹದೇವಯ್ಯನವರು ಮೇಲಿಂದ ಮೇಲೆ ಸಾವಿನ ಹೊಡೆತವನ್ನು ತಮ್ಮ ಬದುಕಿನಲ್ಲಿ ಕಂಡವರು, ಅದರ ದಾರುಣತೆಯನ್ನು ಅನುಭವಿಸಿದವರು. ಈ ಜೀವನ ಮೀಮಾಂಸೆಯಲ್ಲಿ ಸಾವು ಅವರ ಕವಿತೆಗಳಲ್ಲಿ ಪ್ರಸ್ತಾಪಿತವಾಗುತ್ತದೆ.

ಟಿ.ಎನ್. ಮಹದೇವಯ್ಯನವರ ಅನುವಾದಿತ ಕವಿತೆಗಳನ್ನು ಪ್ರತ್ಯೇಕವಾಗಿ ಅಭ್ಯಾಸ ಮಾಡುವಾಗ ಒಂದು ಮಾತನ್ನು ಗಮನಿಸಬೇಕು. ಅವರ ಅನುವಾದಿತ ಕವಿತೆಗಳಲ್ಲಿ ಎರಡಕ್ಕೆ ಮೂಲವನ್ನು ಸೂಚಿಸಿದರು. ಇನ್ನುಳಿದುದಕ್ಕೆ ಕೊಟ್ಟಿಲ್ಲ. ಅವು ಯಾವ ರೀತಿಯಲ್ಲಿ ಕನ್ನಡಕ್ಕೆ ಬಂದಿವೆಯೆಂಬುದು ಕುತೂಹಲದ ಪ್ರಶ್ನೆ. ಅವರು ಚಿಕ್ಕ ವಯಸ್ಸಿನಲ್ಲೇ ಮರಣ ಹೊಂದಿದರು. ಹೀಗಾಗಿ ಅವರ ಕವಿತೆಗಳಿಗೆ ಮೂಲವನ್ನು ಹುಡುಕುವುದು ಸಾಹಸದ ಕೆಲಸ. ಪ್ರೇರಣೆ, ಪ್ರಭಾವ, ಭಾವಾನುವಾದ ಹೀಗೆ ಬೇರೆ ಬೇರೆ ರೂಪಗಳಲ್ಲಿ ಅನುವಾದಗಳು ಬಂದಿವೆ. ಮೂಲದೊಂದಿಗೆ ಟಿ.ಎನ್.ಮಹದೇವಯ್ಯನವರ ಕವಿತೆಯನ್ನು ಅಧ್ಯಯನ ಮಾಡಿದಾಗ ಮಾತ್ರ ಪ್ರಭಾವ, ಪ್ರೇರಣೆ ಭಾವಾನುವಾದಗಳ ಸತ್ವ ತಿಳಿಯುತ್ತದೆ.

**ಪ್ರಕೃತಿಲೋಕ:**

ನವನವೋನ್ಮೇಷಶಾಲಿನಿಯಾದ ಪ್ರಕೃತಿ ಮಾನವನ ಜೀವನಕ್ಕೆ ಚೇತೋಹಾರಿ. ದಿನ ದಿನವೂ ಬದಲಾಗುತ್ತಿರುವ ರಮ್ಯವಾದ ಪ್ರಕೃತಿ ಮಾನವನಿಗೆ ಮಾರ್ಗದರ್ಶಿಯೂ ಹೌದು. ಅದು ನಿಂತ ನೀರಿನಂತಲ್ಲ, ಸಾಗರದಂತಹ ಗಾಂಭೀರ್ಯವನ್ನು ಹೊಂದಿದೆ. ನಿತ್ಯನೂತನವಾಗಿ ಹರಿಯುವ ಹೊಳೆಯ ಲವಲವಿಕೆ ಹಾಗೂ ವೈವಿಧ್ಯವನ್ನು ಹೊಂದಿದೆ. ತನ್ನ ಬಳಿ ಬರುವ ಎಲ್ಲ ಜೀವಿಗಳನ್ನು ಬೆಳಗಿಸುವ, ಬೆಳೆಸುವ ಮೃದು ಮಾತೃಹೃದಯ ತಿಳಿದಿದೆ. ಎಲ್ಲ ರೀತಿಯಲ್ಲಿಯೂ ಮಾನವ ವಿಕಾಸಕ್ಕೆ ಸಹಕಾರಿಯಾದ ಪ್ರಕೃತಿ, ಕವಿಹೃದಯವನ್ನು ಬೇಗ ಸೆಳೆಯುವುದು. ತನ್ನನ್ನು ಆರಾಧಿಸುವ ಕವಿ ಜೀವಿಯನ್ನು ಪುನೀತನನ್ನಾಗಿಸುವುದು. ಪ್ರಪಂಚದ ಎಲ್ಲ ಭಾಷೆಯ ಕವಿಗಳು ಒಂದಲ್ಲ ಒಂದು ರೀತಿಯಲ್ಲಿ ಪ್ರಕೃತಿಯನ್ನು ಕುರಿತು ತಮ್ಮ ಕಾವ್ಯಗಳಲ್ಲಿ, ಕವಿತೆಗಳಲ್ಲಿ, ಹಾಡಿರುವುದುಂಟು. ಸೂಕ್ಷ್ಮಗ್ರಾಹಿಯಾದ ಕವಿಚೇತನ ಪ್ರಕೃತಿಯ ರಮ್ಯತೆಯನ್ನು, ಅದರ ಭಯಂಕರತೆಯನ್ನು ಗಮನಿಸಿ, ಆಕರ್ಷಿತನಾಗಿ ಹಾಡಿ ನಲಿಯುವುದರಲ್ಲಿ ಆಶ್ಚರ್ಯವಿಲ್ಲ. ತನ್ನನ್ನು ಸ್ಪರ್ಶಿಸುವ ಎಲ್ಲ ಚೇತನಗಳನ್ನು ಚೊಕ್ಕವಾಗಿಸುವ ಮಾಂತ್ರಿಕಶಕ್ತಿ ಪ್ರಕೃತಿಯದು. ಈ ಶಕ್ತಿಯಲ್ಲಿ ಸಿಕ್ಕಿ ವಿಹರಿಸಿ, ತನ್ನ ಭೂಮ ಭಾವನಾಮ ಅಭಿವ್ಯಕ್ತಿಯ ಮೂಲಕ ಕವಿಯಾದವನು ತನ್ನನ್ನು ಬೆಳಗಿಸಿಕೊಳ್ಳಬೇಕು. ಇಂತಹ ಬೆಳವಣಿಗೆಯನ್ನು ಟಿ. ಎನ್. ಮಹದೇವಯ್ಯನವರ ಕೆಲವು ಪ್ರಕೃತಿ ಕವನಗಳಲ್ಲಿ ಕಾಣಬಹುದು.

ಕವಿ ವಿಶ್ವಾತ್ಮನಾದ ದೇವರನ್ನು ಕಲ್ಲು ಮಣ್ಣು, ಕಟ್ಟಿಗೆ, ಲೋಹಗಳ ರೂಪದಲ್ಲಿ ಗುಡಿ ಗುಂಡಾರಗಳಲ್ಲಿ ಕಾಣಬಯಸುವುದಿಲ್ಲ. ಅವನಿಗೆ ಪ್ರಕೃತಿಯೇ ದೇವರು:

ತಾರೆ ನೀಹಾರಿಕೆಯು
ಗ್ರಹಕೋಟಿ ತಂಡಗಳು
ನಿನ್ನ ನಿಲವಿನೊಳಡಗಿ
ಬಟ್ಟ ಬಯಲಾಗಿರಲು
ಆವ ಗುಡಿಯನು ಕಟ್ಟಿ
ಆವ ಮೂರ್ತಿಯನಿರಿಸಿ
ಅರ್ಚಿಸಲಿ ದೇವ! [೯೦]

ವಿಶ್ವದ ಚೈತನ್ಯಶಕ್ತಿಗಳಾದ ನಕ್ಷತ್ರಗಳು ಜ್ಯೋತಿಃಪಟಲ, ಗ್ರಹಕೋಟಿಗಳು ಆ ಜಗನ್ನಿಯಾಮಕನಲ್ಲಿಯೇ ಸೇರಿಹೋಗಿ ಬಟ್ಟಬಯಲಾಗಿರುವಾಗ ಇನ್ನು ದೇವರನ್ನು ಯಾವ ರೂಪದಲ್ಲಿ ಅರ್ಚಿಸಲಿ ಎನ್ನುವ ಆಶ್ಚರ್ಯ ಕವಿಯದು.[೯೧] ಮನುಷ್ಯನ ಹೃದಯದಲ್ಲಿ ಪರಮಾತ್ಮ ನೆಲೆಸಿದ್ದಾನೆ. ಅವನು ಗುಹೇಶ್ವರ-ಎಂದು ವಿಚಾರಮಾಡುವುದಾದರೆ, ಅವನು ಅಲ್ಲೂ ಇಲ್ಲ. ಮನುಷ್ಯನ ಸಮ್ಮಿಳಿತ ಭಾವಗಳಲ್ಲಿ ಆ ಪರಮಾತ್ಮ ಅಡಗಿ, ಮನುಷ್ಯನೇ ಮರೆಯಾಗುತ್ತಿರುವಾಗ ಯಾರ ಹೃದಯದಲ್ಲಿ ನಿನ್ನನ್ನು ಹುಡುಕಿ ಪೂಜಿಸಲಿ ಎನ್ನುವ ಸಂದಿಗ್ಧ ಕವಿಯದು. ಗಂಗೆ ಗೋದಾವರಿ ಯಮುನೆ ಕಾವೇರಿ ನದಿಗಳನ್ನು ದೇವರೆನ್ನುವ ಸಂಪ್ರದಾಯಸ್ಥ ಮನಸ್ಸು ಅದನ್ನು ಒಪ್ಪಿಕೊಂಡಿದೆ. ಆದರೆ ಜಲವು ದೇವರೆಂದು ಭಾವಿಸಲು ಸಾಧ್ಯವಿಲ್ಲ. ಏಕೆಂದರೆ, ಸಮುದ್ರದ ತೆರೆಯಲ್ಲಿ ಒದ್ದೆಯಾಗಿ ನದಿಯ ನೀರಿನಲ್ಲಿ ನಿಂತು, ಭಯಂಕರ ಅಲೆಗಳನ್ನು ಹೊಂದಿರುವ ಕಡಲಾಗಿ ನೀನು ಅಲ್ಲಿ ಪ್ರಳಯನಾಟ್ಯವನ್ನಾಡುವಾಗ ಯಾವ ಗಂಗೆಯನ್ನು ಪಾಪಪರಿಹಾರಾರ್ಥವಾಗಿ ತಂದಿರಿಸಲು ಸಾಧ್ಯ ಹೇಳು? ಎನ್ನುವ ಸಂದೇಹ ಕವಿಯದು. ಪ್ರಕೃತಿಯ ಬಳುವಳಿಯಾದ ಅಶ್ವತ್ಥ, ಬನ್ನಿಮರಗಳು, ತುಳಸಿಗಿಡ ಇವನ್ನು ದೇವರೆಂದು ಲೌಕಿಕ ಶ್ರದ್ಧಾವಂತ ಮನಸ್ಸು ಒಪ್ಪಿಕೊಂಡಿದೆ. ಬನಗಳಲ್ಲಿನ ಪುಷ್ಪಗಳಲ್ಲಿ , ಅವುಗಳ ಕಂಪಿನಲ್ಲಿ, ಚೆಲುವಿನಲ್ಲಿ ನೀನು ಅಡಗಿದ್ದೀಯೆ ಎಂದು ಭಾವಿಸುವುದಾದರೆ, ಯಾವ ಹೂವನ್ನು ಕಿತ್ತುತಂದು ಯಾರ ಚರಣದಲ್ಲಿಟ್ಟು ಪೂಜಿಸಲಿ ಎನ್ನುವ ಪ್ರಶ್ನೆ ದೇವನಲ್ಲಿ ಕವಿಯದು. ವಿಶ್ವವನ್ನು ಬೆಳಗುವ ಕೋಟಿನಕ್ಷತ್ರಗಳ ರೂಪದಲ್ಲಿ ನೀನು ಲೋಕವನ್ನು ಬೆಳಗಿಸುತ್ತಲಿರುವೆ ಎಂದು ಭಾವಿಸೋಣವೆಂದರೆ ಅದು ಸುಳ್ಳು. ಏಕೆಂದರೆ, ಕಣ್ಣು ಮಿಟುಕಿಸಿ ನಗುವ ನಿನ್ನ ಬೆಳಕೇ ಬೆಳಕು. ಅದರ ಮುಂದೆ ಕೋಟಿನಕ್ಷತ್ರಗಳ ಪ್ರಭೆಯಲ್ಲಿ?[೯೨] ಹೀಗಿರುವಾಗ ಯಾವ ದೀಪವನ್ನು ಹಚ್ಚಿ ಯಾರ ಪಕ್ಕದಲ್ಲಿಟ್ಟು ಬೆಳಗಿಸಲಿ ಎನ್ನುವ ಪ್ರಶ್ನೆ ದೇವನಲ್ಲಿ ಕವಿಯದು. ಸೂರ್ಯ ಚಂದ್ರರು ಲೋಕವನ್ನು ಹಗಲು ರಾತ್ರಿ ಬೆಳಗುತ್ತ ತಮ್ಮ ಪ್ರಭೆಯನ್ನೇ ಧೂಪವಾಗಿ ಅರ್ಪಿಸುತ್ತಿರುವಾಗ ನಾನಿನ್ನಾವ ದೇವರಿಗೆ ಯಾವ ಧೂಪಹಾಕಲಿ, ಯಾರನ್ನು ಪೂಜಿಸಲಿ, ಯಾರಿಗೆ ಮಂಗಳಾರತಿ ಬೆಳಗಲಿ

ಎಂದು ಕವಿ ದೇವನನ್ನು ಪ್ರಶ್ನಿಸುವನು. ಸೂರ್ಯೋದಯ ಸೂರ್ಯಾಸ್ತಮಾನ ಕಾಲದಲ್ಲಿ ಸುಂದರಿಯರು ಮಂಗಳಗೀತೆಯನ್ನು ಹಾಡುತ್ತಿರುವರು. ಆದರೆ, ಸೂರ್ಯದೇವನಾದರೂ ಸದಾ ಸಂಚಾರಿ. ಲೋಕದ ಈ ಹುಚ್ಚಾಟಗಳನ್ನು ನೋಡಿ ತಾಂಡವನೃತ್ಯವನ್ನಾಡುವ ನಟರಾಜನಾದ ನೀನು ನಗುವೆ. ಕವಿಯಾದ ನಾನು ಯಾವ ರೀತಿಯಲ್ಲಿ, ಯಾರ ಸಂತೋಷಕ್ಕೆಂದು ಹಾಡಲಿ ತಾನು ಹೇಗೆ ತೃಪ್ತಿಪಡಿಸಲಿ ಹೇಳು ದೇವಾ![೬೩] ಎಂದು ಕವಿ ಕೇಳುವನು.

'ಪೂಜೆ' ಎನ್ನುವ ಕವಿತೆ ಹಲವು ಕಾರಣಗಳಿಗಾಗಿ ಮಹತ್ವದ್ದು. ಕವಿ ಸ್ಥಾವರರೂಪದ ನಾಮ ರೂಪ ಕ್ರಿಯೆಗಳನ್ನು ಹೊಂದಿರುವ ಗುಡಿಗಳಲ್ಲಿ ಪೂಜೆಗೊಳ್ಳುವ ದೇವರನ್ನು ದೇವರು ಎಂದು ನಂಬಿಲ್ಲ. ಕವಿ ನಾಮ ರೂಪ ಕ್ರಿಯೆಗಳಿಲ್ಲದ ವಿಶ್ವಾತ್ಮನಾದ ಚೈತನ್ಯಶಕ್ತಿಯನ್ನು 'ದೇವರು' ಎಂದು ಭಾವಿಸಿದಂತಿದೆ. ಲೋಕವು ಆ ದೇವರನ್ನು ಮನುಷ್ಯರೂಪದಲ್ಲಿ, ಸಮುದ್ರ ನದಿಯ ರೂಪದಲ್ಲಿ, ವನಸುಮದ ರೂಪದಲ್ಲಿ, ನಕ್ಷತ್ರಗಳ ರೂಪದಲ್ಲಿ, ಹಗಲು ರಾತ್ರಿ ಲೋಕವನ್ನು ಬೆಳಗುವ ಸೂರ್ಯ ಚಂದ್ರರ ರೂಪದಲ್ಲಿ, ಉಷಃಕಾಲ ಸಂಧ್ಯಾಕಾಲಗಳ ರೂಪದಲ್ಲಿ ಕಾಣಬಯಸುತ್ತದೆ; ಅವರನ್ನು ದೇವರೆಂದು ಪೂಜಿಸಿ, ಸ್ತುತಿಸಿ ತೃಪ್ತಿಪಟ್ಟುಕೊಳ್ಳುತ್ತದೆ. ಆದರೆ, ಇದಕ್ಕೆ ತದ್ವಿರುದ್ಧವಾಗಿ, ವಿಶ್ವಾತ್ಮನ ಪೂಜೆಯನ್ನು ನಾನು ಹೇಗೆ ಮಾಡಲಿ?[೬೪] ಆ ವಿಶ್ವಾತ್ಮನನ್ನು ಹೇಗೆ ಹಾಡಿ ಹೊಗಳಲಿ ಎನ್ನುವ ಪ್ರಶ್ನೆ ಕವಿಯದು. ಆ ಪ್ರಶ್ನೆಯಲ್ಲಿ ಉತ್ತರವೂ ಅಡಗಿದೆ. ಪರಮಾತ್ಮ ಸರ್ವವ್ಯಾಪಿಯಾಗಿರುವಾಗ, ಸರ್ವ ಜೀವಗಳಲ್ಲೂ ನೆಲೆಸಿರುವಾಗ ಪರಮಾತ್ಮನನ್ನು ಜಡರೂಪದಲ್ಲಿ ಕಾಣುವುದು, ಪೂಜಿಸುವುದು, ಸ್ತುತಿಸುವುದು ಸಾಧ್ಯವೇ ಇಲ್ಲ. ಆ ಚೈತನ್ಯಶಕ್ತಿ ಎಲ್ಲೆಲ್ಲಿ ಕಾಣಬರುತ್ತದೆಯೋ ಅಲ್ಲೆಲ್ಲ ದೇವನ ಸಾನ್ನಿಧ್ಯವಿರುತ್ತದೆ. ಅದಕ್ಕೆ ಮಣಿದಿದೆ ಕವಿಚೇತನ. ವಿಶ್ವಾತ್ಮನ ವಿರಾಡ್ರೂಪವನ್ನು ಮನಸ್ಸಿಗೆ ತಂದುಕೊಳ್ಳುವ, ಅದಕ್ಕೆ ಮೂಕವಾಗಿ ತಲೆಬಾಗಿ ನಮಿಸುವ ಕವಿಯ ಚಿಂತನೆ ಅತ್ಯಪೂರ್ವವಾದುದು.

ಸೂರ್ಯನ ಅರುಣ ಕಿರಣಗಳಲ್ಲಿ, ಬಿರಿದ ಹೂವಿನ ಸುವಾಸನೆಯಲ್ಲಿ, ಮಧುರವಾದ ಸಂಗೀತದ ತರಂಗಗಳಲ್ಲಿ ವಿಶ್ವಾತ್ಮನ ಇರವನ್ನು ಕಾಣುವ ಕವಿಯ ಚಿಂತನೆ ಭವ್ಯವಾದುದು. 'ಪೂಜೆ' ಎನ್ನುವ ಹೆಸರಿನ ಹಿಂದಿನ ಕವನದ ಭಾವವನ್ನು ಇನ್ನಷ್ಟು ವಿಸ್ತರಿಸುವ ಪ್ರಯತ್ನವನ್ನು ಅದೇ ಹೆಸರಿನ ಇನ್ನೊಂದು ಕವನದಲ್ಲೂ ಕವಿ ಮಾಡಿರುವರು. ಕವಿತೆಯ ವಿನೂತನ ಭಾವದಂತೆ ಆದರ ಅಭಿವ್ಯಕ್ತಿ ಕ್ರಮದಲ್ಲಿನ ವಿಸ್ಮಯವೂ ಗಮನಸೆಳೆಯುತ್ತದೆ:

ಆರ ಕಾಂತಿಯು ಮೊದಲು
ಮುಂಬೆಳಗಿನಂತೈದಿ
ಅರುಣಕಿರಣವನೆರಚಿ
ದೀಪ್ತಿಗೊಳಿಸಿತೊ ಜಗವ!
ಅರುಸಿರು ಬಾಳ್ಮೊದಲ

ಮಂದಮಾರುತನಂತೆ
ಬಿರಿದ ಹೂವಿನ ಕಂಪು
ತಂದೆರಚಿ ತುಂಬಿಸಿತೊ
ಗಮಗಮನೆ ಇಳೆಯ!
ಆರ ವಾಣಿಯು ಮೊದಲು
ವೀಣೆಯಿಂಚರದಂತೆ
ನಾಡಿ ರೋಮಗಳಲ್ಲಿ
ಮಿಡಿದು ಮಿಡಿಯುತಲಿತ್ತೊ
ಮಧುರಸಂಗೀತವನು
ಝೇಂಕಾರ ಪೂರದಲಿ!
ಅವನ ಚರಣದೊಳೆನ್ನ
ಹೃದಯಕುಸುಮವನಿರಿಸಿ
ಭಕ್ತಿಪ್ರಣತೆಯನೆತ್ತಿ
ನಮಿಸಿ ನುತಿಸುವೆನು.[೯೫]

ಪ್ರಕೃತಿಯಲ್ಲಿ ಮಿಡಿಯುವ ಅವ್ಯಕ್ತ ಚೇತನವು ಒಂದೆ. ಆದರೆ, ಅದು ಪ್ರಕೃತಿಯಲ್ಲಿ ಹಲವು ರೂಪಗಳಲ್ಲಿ ಅಂದರೆ ಚಿಗುರು, ಲತೆ, ಎಲೆ, ಹೂವುಗಳಲ್ಲಿ ವ್ಯಕ್ತವಾಗುತ್ತದೆ. ಆಶ್ಚರ್ಯವೆಂದರೆ, ಚೈತನ್ಯ ಒಂದೇ ಆದರೂ ಅದು ಪ್ರಕಟಗೊಳ್ಳುವ ಪ್ರಕೃತಿಯ ಭಿನ್ನ ಭಿನ್ನ ರೂಪಗಳು ಬೇರೆ ಬೇರೆ. ಮತ್ತೂ ಆಶ್ಚರ್ಯವೆಂದರೆ, ಒಂದು ಚಿಗುರಿನಂತೆ ಮತ್ತೊಂದು ಚಿಗುರು ಇರುವುದಿಲ್ಲ; ಒಂದು ಲತೆಯಂತೆ ಮತ್ತೊಂದು ಲತೆ ಇರುವುದಿಲ್ಲ; ಒಂದು ಎಲೆಯಂತೆ ಮತ್ತೊಂದು ಎಲೆ ಇರುವುದಿಲ್ಲ; ಒಂದು ಹೂವಿನಂತೆ ಮತ್ತೊಂದು ಹೂವು ಇರುವುದಿಲ್ಲ; ಕಂಪಿನಲ್ಲೂ ಮಾಧುರ್ಯದಲ್ಲೂ ಭಿನ್ನತೆ. ಹೀಗೆ ವೈವಿಧ್ಯತೆಯನ್ನು ಪ್ರಕೃತಿಯಲ್ಲಿ ಒಡಮೂಡಿಸುವ ಆ ವೈಚಿತ್ರ್ಯವನ್ನು ಕವಿಯ 'ಸತ್ತು ಚಿತ್ತು ಆನಂದ!'[೯೬] ಎನ್ನುವ ಕವಿತೆಯಲ್ಲಿ ನೋಡುವೆವು.

'ಕೋಗಿಲೆ' ಕವಿಗೆ ಪ್ರಿಯವಾದುದು. ಏಕೆಂದರೆ, ಪ್ರಶಾಂತ ಪ್ರಕೃತಿಯಲ್ಲಿ ಪಂಚಮಸ್ವರದಿಂದ ಎಲ್ಲ ನಾದವನ್ನೂ ಮೀರಿ ಕೋಗಿಲೆ ಹಾಡುತ್ತದೆ. ಅದು ಕವಿಯ ಮನವನ್ನು ಕದ್ದಿದೆ. ಕವಿ ತನಗೆ ಮೆಚ್ಚುಗೆಯಾದ ಕೋಗಿಲೆಯನ್ನು 'ವಸಂತನ ಸಿರಿವೈಭವದ ತುಂಬುರ'[೯೭] ಎಂದು ಕರೆದಿರುವನು. ನೋಡಲು ಚಂದವಿಲ್ಲದ ಕಾಗೆಯನ್ನು ಹೋಲುವ ಆ ಕೋಗಿಲೆಯ ಕಂಠದಲ್ಲಿ ಮಾಧುರ್ಯ ಹೇಗೆ ಬಂದಿತು? ಎನ್ನುವ ಅಚ್ಚರಿ. ಕವಿಗೆ. ಆ ಆಶ್ಚರ್ಯಮುಗ್ಧ ಸ್ಥಿತಿಯಲ್ಲಿ ಆ ಕೋಗಿಲೆಯನ್ನು ಪ್ರಶ್ನಿಸುವನು:

ನಿರ್ಮಲಾಕಾಶದಾ ನೀಲವರ್ಣದಡಿಯಲಿ
ಹರಿವ ತಿಳಿನೀರಿನ ತರಂಗಿಣಿಯ ತೀರದಲಿ

ನಂದನವನದ ಸೊಬಗ ಕೀಳ್ಗೈವ ಕೋಗಿಲೆಯೆ
ನಿನ್ನಿಂಚರದ ಸೊಬಗು; ನಿನ್ನ ಗಾನದ ಸೊಗಸು
ಎಲೆಹಕ್ಕಿ! ನಿನ್ನ ವಾಣಿಯೊಳೇನಿನಿತು ಮೋಹ?[೬೮]

(ಕೋಗಿಲೆ)

'ಮನುಷ್ಯ ಜೀವನ' ಎನ್ನುವ ಕವಿತೆಯಲ್ಲಿ ಬದುಕಿನಲ್ಲಿ ಹಾದುಹೋಗುವ ಮೂರು ಹಂತಗಳು-ಬಾಲ್ಯ, ಯೌವನ ಹಾಗೂ ಮುಪ್ಪನ್ನು ಕವಿ ಪ್ರಕೃತಿಯ ಜೊತೆ ಹೋಲಿಸುವನು. ಅವನ ಪ್ರಕಾರ

**ಬಾಲ್ಯ -**

ಮೂಡಣ ಬಾಂದಳದೆಳೆಚಂದ್ರನಂತೆ
ಪ್ರವಹಿಸುವ ತಿಳಿಜಲದೆಳೆತೊರೆಯಂತೆ
ಬೀಸುವ ಮಧುರತರ ಮರುತನಂತೆ
ಉಷೆಯ ಮಸಕು ಬೆಳಕಿನಂತೆ ಬಾಲ್ಯವು.

**ಯೌವನ -**

ರಾಮಚಂದ್ರನಮೃತವರ್ಷದಂತೆ
ಗಿರಿವನದ ಓಲಬ್ಬರಿಪ ಸವಿಯಂತೆ
ತೀಡುವ ಚಂಡತರ ಮಾರುತನಂತೆ
ಬೇಸಿಗೆಯ ಉರಿಬಿಸಿಲಂತೆ ಯೌವನ.

**ಮುಪ್ಪು -**

ಪಡುವಣ ಬಾಂದಳದಿಳಿ ಚಂದ್ರನಂತೆ
ಶರಧಿಯಲೆಗಳನು ಕಾಂಬ ನದಿಯಂತೆ
ತುಹಿನಗಿರಿಯ ಕಠಿಣ ಮಾರುತನಂತೆ
ತುಹಿನಗಮನದ ತೆರವಿಹುದು ಜರವು.[೬೯]

ಪ್ರಕೃತಿಯಲ್ಲಿ ಜೀವತುಂಬಿ ಸಮಸ್ತವೂ ನಲಿದು ಹಾಡುತ್ತಿರುವಾಗ ಆ ನಲಿವು ಭಾವಜೀವಿಯ ಮನಸ್ಸನ್ನೂ ತಟ್ಟಬೇಕು. ಆದರೆ ಕವಿಯ ಮನದಳಲು ಬಾಹ್ಯಪ್ರಪಂಚದ ಪ್ರಕೃತಿಯ ಸೊಗಸನ್ನು ಅನುಭವಿಸಲು ಬಿಡುತ್ತಿಲ್ಲ. ಕವಿಗೆ ಬೇಸಿಗೆಯ ಎಳೆಬಿಸಲು ಆಹ್ಲಾದಕರವಾಗಿಲ್ಲ, ಸಿಡಿ ಬೆಂಕಿಯಂತಿದೆ; ತಂಬೆಲರು ನಡುಗಿಸುವ ಚಳಿಗಾಳಿಯೆನಿಸಿದೆ; ಕೋಗಿಲೆಯು ವಸಂತನ ಮಡಿಲಿನಲ್ಲಿ ಸಂಭ್ರಮದಿಂದ ಹಾಡುತ್ತಿರುವುದು ಕಿವಿಗಳಿಗೆ ಕರ್ಕಶವಾಗಿದೆ. ಮನಸ್ಸಿನ ದುಗುಡ ದುಮ್ಮಾನಗಳಿಂದಾಗಿ ಕವಿಗೆ ವಸಂತನ ಬನದ ಸಿರಿಯೆಲ್ಲ ವಿಕೃತಿಗಳಾಗಿ ಕಾಣಬರುತ್ತವೆ. ಕವಿ ತನ್ನ ಮನದ ಅಳಲನ್ನು, ಅದರ ಆಳವನ್ನು ಮೂಡಣದ ಬಾನಿನಲ್ಲಿ ತೇಲಿಬರುವ ಸೂರ್ಯ; ಕೌಮುದಿಯ ಹರಡಿ ಸುಧೆಯನ್ನು ಚೆಲ್ಲುತ್ತಿರುವ ಚಂದ್ರ; ಆಗಸದಲ್ಲಿ ಮಿನುಗುವ ತಾರೆಗಳು,

ಸೊಬಗಿನ ಉಷೆ-ನಿಷೆಯರು ನನ್ನ ಎದೆಯ ಗವಿಯಲ್ಲಿ ಅಡಗಿರುವುದನ್ನು ತಿಳಿಯಬಲ್ಲರೆ? ನಾನು ಮೌನವಾಗಿ ನೆನೆಯುತ್ತ, ಮನಸ್ಸಿನ ದುಃಖದ ಹೊರೆಹೊತ್ತು ಅದರ ಭಾರದಿಂದ ಕುಗ್ಗುತ್ತಿರುವೆ, ಭೀತಿಯಿಂದ ನಾನು ಕಣ್ಣೀರು ಸುರಿಸುತ್ತ ನಡುಗುತ್ತಿರುವೆ ಎಂದು ಕವಿ ನಿವೇದಿಸುವನು ('ಮನದಳಲು').[೧೦೦]

'ಕವಿಯದೊಂದು ಅನುಭವ' ವೈಯಕ್ತಿಕವಾದುದು; ಅದು ಸೌಂದರ್ಯೋಪಾಸಕನಾದ ಕವಿಯ ಮನಸ್ಸಿನ ಭಾವಗಳ ಸಾಲುದೀಪಗಳು. ಹಗಲು ಕಳೆದು ಕತ್ತಲೆ ಬೆಳೆಯುತ್ತ ಹೋದಂತೆ 'ಧೂಮ್ರವರ್ಣದ ಹೊಗೆಯ ಮೆಲ್ಲ ಮೆಲ್ಲನೆ ಹರಡಿ, ಇಳೆಯ ಬಿತ್ತರದ ನಿಶೆಯ ಸೆರಗನು ಚಾಚಿ, ನಸುಮಬ್ಬು ಮಬ್ಬಾಯ್ತು? ಆವರಿಸಿ ಪಸರಿಸಿತು'[೧೦೧] ಎನ್ನುವನು. ಮನೆಯಿಂದ ಹೊರಬಂದು ಒಂದು ಮರುಳುದಿಣ್ಣೆಯ ಮೇಲೆ ನಿಂತು ಸೃಷ್ಟಿಸೌಂದರ್ಯದಲ್ಲಿ ಶಾಂತಿಯ ಸೊಗಸನ್ನು ಕಂಡು ಆ ಸವಿಯನ್ನು ಸವಿದು ಮೈಮರೆತು ಕಪ್ಪು ನೀಲಿಗಳಿಂದ ಕವಿದ ಆಗಸದ ಕಡೆಗೆ ಕವಿ ನೋಡುವನು:

ಚಿಗಿತ ವನದಲಿ ಕುಸುಮ ಬಿರಿದು ಅರಳುವ ತೆರದಿ,
ಒಂದಾದ ಮೇಲೊಂದರಂತೆಲ್ಲ ಚುಕ್ಕಿಗಳು,
ಕಳೆಯ ಕಿರಣವ ಸೂಸಿ ಕಿರಿದಾಗಿ ಕಂಗೊಳಿಸಿ,
ತಿಳಿಯಾಗಿ ಬಿಡಿಯಾಗಿ ಮೂಡಿದವು ನಭದಲ್ಲಿ;
ಶಾಂತಿಯಾಡುತಲಿತ್ತು
ಹಕ್ಕಿಗಳ ದನಿಯಿಲ್ಲ
ಮತ್ತಾವ ಸದ್ದಿಲ್ಲ
ಎತ್ತಲೆತ್ತಲು ಮೌನ![೧೦೨]

ಕವಿಯ ಮುಖದಲ್ಲಿ ನಗೆ ಕಾಣಿಸಿಕೊಂಡು ಅಲ್ಲೇ ಅಡಗಿತು. ಕವಿ ಸಂತಸದಲ್ಲಿ ಮರಳುಗುಡ್ಡೆಯ ಮೇಲೆ ಮಲಗಿ ಆಗಸದತ್ತ ನೋಡಿದ. ಅಷ್ಟರಲ್ಲಿಯೇ ಚಂದ್ರಮಂಡಲ ಕಾಣಿಸಿಕೊಂಡಿತು. ಮಬ್ಬು ಕ್ರಮೇಣ ಇಳಿಯುತ್ತ ಬಂದು ಕೆಂಪು ಏರಿತು. ಆಗ ಆಗಸದಲ್ಲಿ ಆದ ಒಂದು ವಿಸ್ಮಯವನ್ನು ಕವಿ ಕಂಡ:

ಪೂರ್ವದಿಶೆಯಲಿ ಛಾಯೆ ದೂರ ಸರಿಯುತಲಿತ್ತು!
ಕೆಂಪು ನಸುಗೆಂಪಾಗಿ ಕೊನೆಗೆಲ್ಲ ಬೆಳಕಾಯ್ತು!
ಮೆಲ್ಲಮೆಲ್ಲನೆ ಏರಿ, ಧೂಮ್ರವರ್ಣವ ನುಂಗಿ,
ಶುಭ್ರಜ್ಯೋತಿಯ ಬೀರಿ, ಚಂದಿರನು ಬೆಳಗಿದನು!
ಜೊನ್ನೊರೆಯು ತಿಳಿಯಾಗಿ, ಚೆಲುವಾಗಿ ಪೆರ್ಚಿ,
ತಿರೆಯ ತಲೆಯಂ ತೊಳೆದು ಸೊಗಸಾಗಿ ಪಸರಿಸಿತು!
ಚಿಗಿದು ಚಿಮ್ಮಿದ ಕಿಡಿಯು ಚೆಲುಕಾಂತಿ ತೋರುವೊಲು,
ತಾರೆಗಳು ಮಿನುಗಿದವು

ಚಂದ್ರಮನು ಬೆಳಗಿದನು
ತಿರೆಯು ಉಬ್ಬಿತು ನಲಿದು![೧೦೩]

ಕವಿಯು ಆ ದಿವ್ಯಕ್ಷಣದ ಸುಖವನ್ನು ಅನುಭವಿಸುತ್ತ ಮೈಮರೆತು ಮಲಗಿರಲು ಅವನ ಕಣ್ಣಿಗೆ ಪ್ರಕೃತಿ ಹಿಮಗಿರಿಯ ಪರ್ವತಶ್ರೇಣಿಯಲ್ಲಿ ತಪಸ್ಸನ್ನು ಮಾಡುತ್ತಿರುವ ಋಷಿಯ ಸುತ್ತಲಿನ ಗಾಢವಾದ ಮೌನ, ನೀರವತೆ, ನಿಷ್ಪಂದವನ್ನು ನೆನಪಿಸುತ್ತದೆ. ಕವಿ ಹೃದಯವೆಲ್ಲವು 'ಭಾವದಂಬುಧಿಯ ತೀರದಲ್ಲಿ ಅರಳುತಿರೆ'[೧೦೪] ಅವನಲ್ಲಿ ರೋಮಾಂಚನವಾಯಿತು. 'ಓಂ ಶಾಂತಿಮಯ ಸೃಷ್ಟಿ! ದಿವ್ಯತರಮಾಗಿಹುದು'[೧೦೫] ಎಂಬ ಉದ್ಗಾರ ಹೊರಹೊಮ್ಮುವುದು. ಕವಿಯು ಸುತ್ತ ಮತ್ತೆ ನೋಡಿದನು. ಅವನ ಧ್ಯಾನಸ್ಥ ಮನಸ್ಸು ಒಂದು ಅದ್ಭುತ ಸುಖದಲ್ಲಿ ತೇಲಾಡಿತು:

ಪಾಲ್ಗಡಲ ತೆರೆಯುರುಳಿ ಮುಗಿಲಿನಂಚಿನಲಿಳಿದು
ಗಿರಿ ತೊರೆಯ ಕಾನನವನೆಲ್ಲವನು ಮುಸುಗಿರಲು
ಮಳೆಹನಿಗೆ ಬಾಯ್ದೆರೆದ ಚಾತಕದ ತೆರದಿಂದೆ,
ಜೊನ್ನವಕ್ಕಿಯು ಕಾದು ಕುಳಿತಿರಲು ಬನದಿ,

ಸಿರಿಯು ಸಾರಿತು ಬಳಿಗೆ
ಸುಧೆಯು ಬಿದ್ದಿತು ಬಾಯ್ಗೆ!
ಉಬ್ಬುವಾನಂದದಲಿ
ಸೊಗದ ಸಂಭ್ರಮದಲ್ಲಿ
ಹಿಗ್ಗಿ ಕೂಗಿತು ಹಕ್ಕಿ![೧೦೬]

ಆ ಹಕ್ಕಿಯ ಮಧುರ ಕೂಗಿಗೆ ಕವಿಯ ಧ್ಯಾನ ಭಂಗವಾಯಿತು. 'ಏನಿದೀ ಗದ್ದಲವು?' ಎಂದು ಕೇಳಿತು ಕವಿಯ ಮನಸ್ಸು. ಕವಿ ಸುತ್ತ ನೋಡಿದನೊಮ್ಮೆ. ಹಕ್ಕಿಯ ದನಿ ಶಾಂತಿಗೆ ಭಂಗವನ್ನುಂಟುಮಾಡಿತ್ತು. ಕವಿ ಶಬ್ದದೆಡೆ ಮನವಿಟ್ಟು ಹೃದಯವನು ಬಿಗಿದಿಟ್ಟು ಕಿವಿಗೊಟ್ಟು ಆಲಿಸುತ್ತ ಭಾವವನ್ನು ನೂಕಿದನು. ಹಕ್ಕಿ ಕೂಗುತ್ತಲಿತ್ತು. ಆ ಸದ್ದು ಆ ಮೌನಪ್ರಪಂಚದಲ್ಲಿ ಹರಡುತ್ತ ಹೋಯಿತು. ಇದರ ಜೊತೆಗೆ ನಿರ್ಮಲಾಕಾಶದಲ್ಲಿ ನೀಲಿಮೆಯ ಮಧ್ಯದಲ್ಲಿ ಕ್ರಿಮಿಕೀಟಗಳ ಸದ್ದು ಗುಡುಗು ಸಿಡಿಲುಗಳಂತೆ ಆ ನೀರವಪ್ರಪಂಚದಲ್ಲಿ ಗಲಭೆಯೆಬ್ಬಿಸಿತು. ಶಬ್ದ ಬೆಳೆದು ಹೆಚ್ಚುತ್ತಾ ಹೋದಂತೆ ಕವಿ 'ಸೃಷ್ಟಿಯೆಲ್ಲವು ಶಬ್ದ ಬರಿ ಶಬ್ದ'ಮಯವೆ ಎಂದು ಉದ್ಗರಿಸಿದ. ಆ ದಿವ್ಯ ಮೌನದಲ್ಲಿ ಕಳೆದ ಸುಖದ ಸ್ವಪ್ನವು ಅಳಿದು ಸದ್ದೊಂದೆ ನರ್ತಿಸಿತು. ಆಗ ಕವಿಯ ಮನಸ್ಸು 'ಮತ್ತೆ ಬಾರದೆ ಮೌನ ಒಮ್ಮೆ'[೧೦೭] ಎಂದು ಕಾತರಿಸಿತು. ಈಗ ಈ ಶಬ್ದಪ್ರಪಂಚದಲ್ಲಿ ಪ್ರಕೃತಿಯ ರಮ್ಯತೆ ಕವಿಗೆ ರುಚಿಸದೆ ಹೋಯಿತು. ಎತ್ತಲಾದರು ನಡೆದು ಶಾಂತಿಯನರಸುವೆನೆಂದು ಕವಿ ಅಲ್ಲಿಂದ ಎದ್ದು ಮನೆಯ ಕಡೆಗೆ ತೆರಳುವನು.

ಮೇಲಿನ ಕವಿತೆಯು ಶುದ್ಧ ಸೌಂದರ್ಯೋಪಾಸನೆಯ, ಭಾವಜೀವಿಯಾದ ಕವಿಯ ಒಂದು ಅನುಭವ. ಶಾಂತಿಪ್ರಿಯನಾದ ಕವಿ ಒಂದು ಸಂಜೆಯ ಪ್ರಕೃತಿ ವ್ಯಾಪಾರದಲ್ಲಿ ಶಾಂತಿಯನ್ನು ಅರಸಿದನು. ಅಲ್ಲಿ ಅದು ದೊರೆಯಿತು. ಆದರೆ ಅದು ಶಾಶ್ವತವಲ್ಲ, ಇರುಳಿನ ಗಾಢ ಮೌನದಲ್ಲಿ ಹಕ್ಕಿಗಳ ಕೂಗು, ಕ್ರಿಮಿಕೀಟಗಳ ಸದ್ದು ಆ ದಿವ್ಯಶಾಂತಿಗೆ ಭಂಗತಂದಿತು. ಸೌಂದರ್ಯದ ಆರಾಧನೆಗೆ ಶಬ್ದಪ್ರಪಂಚವು ಅಡ್ಡಿಯುಂಟುಮಾಡುತ್ತದೆನ್ನುವುದು ಪ್ರಕೃತಿಯ ಆರಾಧಕರ ಆರೋಪ. ಶಾಂತಿ ಹಾಗೂ ಶಬ್ದ ಪರಸ್ಪರ ವಿರುದ್ಧ ಗುಣಗಳು. ಕವಿ ನಿಸರ್ಗದ ಜೊತೆ ಅನುಭೂತಿ ಹೊಂದುವುದು ಶಬ್ದಮಾಲಿನ್ಯದಿಂದ ಬಿಡುಗಡೆ ಹೊಂದಿ ಶಾಂತಿಯನ್ನು ಅನುಭವಿಸುವುದಕ್ಕಾಗಿ. 'ಕವಿಯದೊಂದು ಅನುಭವ' ಕವಿತೆಯ ವಸ್ತು ಶಾಂತಿಯನ್ನು ಅರಸುತ್ತ ಹೊರಟ ಕವಿಯೊಬ್ಬನ ಅನುಭವವನ್ನು ದಾಖಲಿಸಿದೆ.

'ಸಮಾಧಾನ' ಎನ್ನುವ ಕವಿತೆ ಕಾಲಚಕ್ರದ ಸುತ್ತುವಿಕೆಯಲ್ಲಿ ಬದಲಾವಣೆ ಪ್ರಕೃತಿಯಲ್ಲಷ್ಟೇ ಅಲ್ಲ ಮನುಷ್ಯರ ಜೀವನದಲ್ಲೂ ಆಗುತ್ತಲಿದೆ. ಈ ಬದಲಾವಣೆ ಅನಿವಾರ್ಯ. ಕತ್ತಲೆ-ಬೆಳಗು, ಅಮಾವಾಸ್ಯೆ-ಪೌರ್ಣಮಿ, ಹೇಮಂತ-ಚೈತ್ರ ಇವು ಪ್ರಕೃತಿಯಲ್ಲಿ ಸಹಜ ವ್ಯಾಪಾರ. ಗಿಡದಲ್ಲಿ ಚಿಗುರು ಕಾಣಿಸಿಕೊಂಡು, ವೃಕ್ಷಗಳಲ್ಲಿ ಬಳ್ಳಿ ನಳನಳಿಸಿ ಬೆಳೆದಾಗ ಬಾಳಿನಲ್ಲಿ ಸಂತಸ ಚಿಮ್ಮುತ್ತದೆ. ಬಾಡಿದ ಗಿಡಮರಗಳಲ್ಲಿ ಜೀವಸಂಚಾರವಾಗುತ್ತದೆ. ಇದು ಪ್ರಕೃತಿಯ ನಿಯಮ. ಇದಕ್ಕಾಗಿ ಅಳುಕುವುದೇಕೆ? ಹಿಂಜರಿಯುವುದೇಕೆ? ಎಂದು ಕೇಳುವ ಕವಿ ಮನುಷ್ಯಜೀವನದಲ್ಲೂ ಈ ಬದಲಾವಣೆ ಕಾಣಿಸಿಕೊಳ್ಳುತ್ತದೆ. ಇಂದು ಕೀಳಾಗಿರುವವರು ನಾಳೆ ಮೇಲಾಗುವರು. ವಿಧಿಯ ಕ್ರೂರಲೀಲೆಯಲ್ಲಿ, ಚಿಂತೆಯಲ್ಲಿ ಜೀವವು ಬೆಂದು ಕಷ್ಟವನ್ನು ಅನುಭವಿಸಿದರೂ ಸೊಗವು ಬರದಿರುತ್ತದೆಯೇ?[೧೦೮] ಎಂಬ ಆಶಾವಾದ ಪ್ರಕಟವಾಗಿದೆ:

ನಿಟ್ಟುಸಿರ ಸಂತೈಸಿ
ಕಣ್ಣೀರ ಕಳೆದಿರಿಸಿ
ಸವಿಬಾಳು ಬರದೆ?
ಬಾಳಗೋಳನು ದೂಡಿ
ನಲಿವೆವೊಂದು ದಿನ![೧೦೯]

ಈ ಕವಿತೆ ಕಾಲಚಕ್ರದ ಲೀಲೆಯನ್ನು ಹೇಳುವಂತಿದ್ದರೂ ಸೊರಗಿದ ಚೈತನ್ಯಕ್ಕೆ ಸಾಂತ್ವನ ನೀಡುವಂತಿದೆ. ಹಾಗೆಯೇ ಕವಿಗೆ ಸಾಮಾಜಿಕ ಸಮಸ್ಯೆಯಾಗಿರುವ ದಲಿತರ ಪರವಾದ ಆಶಾವಾದ ಬಸವಣ್ಣನವರ ಸಮಾನತೆಯ ಕ್ರಾಂತಿಕಾರಕ ಬೀಜಮಂತ್ರದಿಂದ ಪ್ರಭಾವವಾಗಿರಬಹುದು. 'ಕಾಲಚಕ್ರವು ಸುತ್ತಿ ತಿರುಗುತಿಹುದಿಲ್ಲಿ, ಕೀಳು ಮೇಲಾಗುವುದು ದಿನವೊಂದೆ ಸಾಕು'[೧೧೦] ಎನ್ನುವ 'ಸಮಾಧಾನ' ಕವಿತೆಯ ಸಾಲಿನಲ್ಲಿ ಆಶಾವಾದ ಮಡುಗಟ್ಟಿದೆ.

ಕವಿಯ ಪಾಲಿಗೆ ಸೂರ್ಯೋದಯ ಚಂದ್ರೋದಯಗಳಂತಹ ಪ್ರಕೃತಿ ವ್ಯಾಪಾರಗಳು ಕೇವಲ ಸೌಂದರ್ಯೋಪಾಸನೆಯ ಸ್ತರದಲ್ಲೇ ನಿಂತುಬಿಡುವುದಿಲ್ಲ. ಅವು ಮನುಷ್ಯ ಜೀವನದ ಏಳು ಬೀಳಿಗೂ

ಅನ್ವಯವಾಗುತ್ತವೆ. 'ಬಾ ಉಷೆಯೇ!' ಎನ್ನುವ ಕವಿತೆಯಲ್ಲಿ ಕವಿ ಅರುಣೋದಯವನ್ನು ಸ್ವಾಗತಿಸುತ್ತಿರುವುದು ಹೀಗೆ:

ಬಾ ಉಷೆಯೆ! ಮೂಡಿ ಬಾ
ಬಾ ದೇವಿ, ಬಾರ!
ಮುಂಬೆಳಗ ಮುಂದಿಟ್ಟು
ಜಗದ ನಿದ್ದೆಯ ಕಳೆದು
ವರದ ಹಸ್ತವನೆತ್ತಿ
ತಿರೆಯ ಹರಸಲು ಬಾರ![೧೧೧]

ಜನತೆ ಜಡನಿದ್ರೆಗೊಳಗಾಗಿ ಮಲಗಿದೆ, ಬತ್ತಿದ ಚೈತನ್ಯದಿಂದಾಗಿ ಪ್ರಗತಿ ಕನಸಾಗಿದೆ. ಈ ಜಡತ್ವ ಕವಿದಿರುವುದು ಮನುಷ್ಯನಿಗಷ್ಟೇ ಅಲ್ಲ, ಜ್ಞಾನಶಾಖೆಗಳಾದ ವೇದಶಾಸ್ತ್ರಗಳಿಗೂ ಕವಿದಿದೆ ಎನ್ನುವ ನೋವು ಕವಿಯದು:

ವೇದ ಶಾಸ್ತ್ರಗಳೆಲ್ಲ
ನಿದ್ರಿಸುತಲಿಹವಿನ್ನು
ತತ್ವ ಬೋಧೆಗಳೆಲ್ಲ
ಕಣ್ಮುಚ್ಚುತಿಹವೆಲ್ಲೊ!

ಬಾಳು ಬರಿದಾಗಿಹುದು
ಗೋಳು ಹಿರಿದಾಗಿಹುದು
ಗುರಿಯ ಕಾಣದೆ ಸುತ್ತಿ
ಅಂಧವಾಯಿತು ದೃಷ್ಟಿ!

ವಿಜ್ಞಾನ ಶೋಧನೆಗೆ
ಮೂಕವಾಗಿದೆ ವಿಶ್ವ!
ಸಂಶಯದ ತುಮುಲದಲಿ
ವಿಪ್ಲವದ ಉರಿಯೆದ್ದು
ಕಾಡುಬೀಡಿಗೆ ನೂಕಿ
ಕಣ್ಮುಚ್ಚುತಿಹುದು
ಮಬ್ಬಾಗುತಿದೆ ಬುದ್ಧಿ
ಕನಸು ನನಸಿನ ಭ್ರಾಂತಿ![೧೧೨]

ಆದರೂ ಕವಿಯ ಆಶಾವಾದ ಪ್ರಗತಿಯ ಕಡೆಗೆ. ಕವಿದ ಮಬ್ಬಿನಲಿ ಮೈಮರೆತ ಜಡರಿಗೆ ಚೈತನ್ಯವಾಹಿನಿಯಾಗಿ ಕೋಗಿಲೆಯ ಮಧುರಧ್ವನಿ ಉಷೆಯ ಆಗಮನದ ಸೂಚನೆ ನೀಡುತ್ತಿದೆ. ಉಷೆಯ

ಆಗಮನದೊಂದಿಗೆ ಮನುಷ್ಯನ ಬದುಕಿನಲ್ಲಿ ಆಗಬೇಕಾದ ಬದಲಾವಣೆ ಕವಿಯ ಆಶಯವಾಗಿದೆ. ಈ ಬದಲಾವಣೆಯ ಅಗತ್ಯವಾದರೂ ಏನು? ಎಂಬುದಕ್ಕೆ ಕವಿ ಕೊಡುವ ಕಾರಣಗಳು ಹೀಗಿವೆ:

ಮದ್ದು ಗುಂಡಿನ ಗುಡುಗು
ಸಿಡಿಲು ಮಿಂಚುಗಳಲ್ಲಿ
ಯುದ್ಧವಾಹಿನಿ ಹರಿದು
ರಕ್ತಕಾಲುವೆ ಸುರಿದು
ರುಂಡ ಮುಂಡಗಳುರುಳಿ
ಭೂತನಾಟ್ಯದಿ ಲೋಕ
ಬೆದರಿ ಬೆಚ್ಚುತಲಿಹುದು.
ಯಂತ್ರ ಚೀತ್ಕಾರದಲಿ
ಕಣ್ಮುಚ್ಚುತಿಹುದಿನ್ನು
ಬರಿಗನಸೆ ಸುತ್ತುತಿದೆ
ಕಡಲ ತೆರೆಗಳ ಮೇಲೆ
ಹಡಗು ಸಿಡಿದಂತಾಗಿ;
ಇರುಳ ಕಗ್ಗವಿಯಲ್ಲಿ
ದಾರಿಯಳಿದಂತಾಗಿ;
ಕಠಿಣ ಪರ್ವತವೇರಿ
ಕಾಳ ಕತ್ತಲೆಯಲ್ಲಿ
ಮಿಡುಕುವಂತಾಯ್ತು!
ಎಲ್ಲಿ ಹೋಗುತಲಿಹೆವೊ![೧೧೩]

ಮನುಷ್ಯನ ನೆಮ್ಮದಿಯನ್ನು ಕೊಚ್ಚಿ ಕೆಡಹಲು ಯುದ್ಧಗಳು ಬಂದುವು; ರಕ್ತದ ಕಾಲುವೆ ಹರಿಸಿದುವು. ಪಾಶ್ಚಾತ್ಯ ದೇಶಗಳಲ್ಲಿ ಆಧುನಿಕ ಯಂತ್ರಗಳ ಆಗಮನದೊಂದಿಗೆ ಆ ದೇಶದ ಸಮಗ್ರ ಆರ್ಥಿಕ ಪ್ರಗತಿಯ ದಿಕ್ಕನ್ನೇ ಬದಲಿಸಿದುದು ಒಂದು ಮುಖವಾದರೆ, ಪ್ರಗತಿಯ ಜೊತೆಗೆ ಮನುಷ್ಯನ ಬದುಕಿನ ನಿರಾಳತೆಗೆ ಭಂಗತಂದುದು ಅದರ ಇನ್ನೊಂದು ಮುಖ. ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯೋತ್ತರ ದಿನಮಾನಗಳಲ್ಲಿ ಕವಿ ಭಾರತೀಯ ಬದುಕಿನಲ್ಲಿ ಯುದ್ಧ ಹಾಗೂ ಯಂತ್ರಗಳ ಆವಿಷ್ಕಾರದೊಂದಿಗೆ ಗಿರಣಿಗಳು ತಲೆಯೆತ್ತಿದ್ದು ಉಂಟುಮಾಡಿರುವ ನೆಮ್ಮದಿಭಂಗ ಮತ್ತು ಜಡತ್ವವನ್ನು ಕವಿ ಗಮನಿಸಿರುವರು. ಈಗ ಮನಸ್ಸುಗಳನ್ನು ಕವಿದಿರುವ ಮಬ್ಬನ್ನು ನಿವಾರಿಸಬೇಕಾಗಿದೆ. ಅದಕ್ಕಾಗಿ ಕವಿ ಬದಲಾವಣೆಯ ಹರಿಕಾರಳಾದ ಉಷೆಯನ್ನು 'ದೇವಿ'ಯಾಗಿ ಸ್ವಾಗತಿಸುತ್ತಿರುವರು:

ವ್ಯಕ್ತ ಅವ್ಯಕ್ತದಲಿ
ಎನಿತೆನಿತೊ ಅಡಗಿಹುದು

ಕತ್ತಲೆಯ ರಾತ್ರಿಯಲಿ
ಏನೂ ಕಾಣದಿದೆ
ಬಾ ಉಷೆಯೆ! ಮೂಡಿ ಬಾ!
ಬಾ ದೇವಿ! ಬಾರ!
ಪ್ರಗತಿರೂಪಿಣಿಯಾಗಿ
ಕಲೆಯ ಕಣ್ಮಣಿಯಾಗಿ
ಪ್ರಾಚ್ಯ ಪಾಶ್ಚಾತ್ಯಗಳ
ನೊಂದು ಬೆಂದೆದೆಗಳಿಗೆ
ಶಾಂತಿಯುಣಿಸಾಗಿ
ಬಾ ಬೆಳಗಿನೆಲೆ ರಮಣಿ
ನಾವು ಹಾಡುವೆವಿಂದು
ಸ್ವಾಗತದ ಗೀತೆಯನು!
ಕುಸುಮರಾಶಿಯನೆರಚಿ
ನಾವು ಪೂಜಿಸಲಿಹೆವು
ಮಿಂದು ಮಡಿಯನು ಉಟ್ಟು
ನಾವು ಅರ್ಚನೆಗೆಂದು
ಸಿದ್ಧರಾಗುವ ತೆರದಿ
ಎಚ್ಚರಿಸಿದೆ ಬಾರೆ![೧೧೪]

ಕವಿಯ ಈ ನಿಲವು-ಉಷೆಯನ್ನು ದೇವಿಯಾಗಿ ಬಂದು ಮನುಷ್ಯರನ್ನು ಕವಿದಿರುವ ಜಡತೆಯನ್ನು ತೊಲಗಿಸುವಂತೆ ಪ್ರಾರ್ಥಿಸುತ್ತಿರುವುದು-ನವೋದಯ ಕಾಲದ ಮನೋಭಾವದ್ದು. ನಾಡಿನ ಸ್ವಾತಂತ್ರ್ಯಹೋರಾಟ ಸಂದರ್ಭದಲ್ಲಿ ಭಾರತವನ್ನು ಕರ್ನಾಟಕವನ್ನು ಮಾತೆಯಾಗಿ ಕಂಡು ಸ್ವಾತಂತ್ರ್ಯ ಸಿಗಲು ಕೃಪೆಮಾಡಬೇಕೆಂದು ಬೇಡುವ ಮನಸ್ಸು, ಬೆಳಕು ಹರಿಸಲಿರುವ ಉಷೆಯನ್ನು ಕವಿದ ಮಬ್ಬಿನಿಂದ ನಮ್ಮನ್ನು ಪಾರುಮಾಡು ಎಂದು 'ದೇವಿ'ಯಾಗಿ ಕಂಡು ಪ್ರಾರ್ಥಿಸುವ ಮನಸ್ಸು ಭಾವುಕತೆಯೇ ಪ್ರಧಾನವಾದ ನವೋದಯಕಾಲದ ಒಂದು ಶ್ರದ್ಧೆಯ ಪ್ರತೀಕವಾಗುತ್ತದೆ. ಟಿ.ಎನ್. ಮಹದೇವಯ್ಯನವರು ನವೋದಯಕಾಲದ ಪ್ರತಿನಿಧಿಯಾಗಿರುವುದರಿಂದ ಆ ಕಾಲಮಾನದ ಕನಸು, ಶ್ರದ್ಧೆ, ನಂಬುಗೆ ಮೂರ್ತಿಮತ್ತಾಗಿ ಅವರಲ್ಲಿ ಆವಿರ್ಭವಿಸಿದೆ. ಮನುಷ್ಯನ ಬದುಕಿನ ನೆಮ್ಮದಿಗೆ ಕಾರಣವಾಗಿ ಬರಬಹುದಾದ ಪರಿವರ್ತನೆಯ ತಂಗಾಳಿ ಕವಿಯ ಮಹತ್ವದ ಆಶಯವಾಗಿದೆ. ಅದು ಕವಿತೆಯ ಪ್ರಾರಂಭದ ಸಾಲುಗಳಲ್ಲಿ ಕವಿತೆಯ ಹಲವು ಮಜಲುಗಳಲ್ಲಿ ಪುನರಾವರ್ತಿಸಿರುವುದರಲ್ಲಿ ಸ್ಪಷ್ಟವಾಗಿ ವ್ಯಕ್ತವಾಗಿದೆ . ಇದೇ ಭಾವ 'ನಿಶಾದೇವಿ' ಕವಿತೆಯಲ್ಲೂ ಬಂದಿದೆ. 'ಎಲೆ ದೇವಿ ವಿಶ್ವದಲಿ ಶಾಂತಿಯನು ಸ್ಪಷ್ಟವಾಗಿ ಬೀರುತ್ತ ನಲವಿಂದ

ಬಾ ನಿನ್ನ ಸಮ್ರಾಜ್ಯವಾಳು ಬಾ' ಎಂದು ಕರೆ ನೀಡುವನು. 'ಉಷಾ' ಕವಿತೆಯಲ್ಲೂ ಸಂಜೆಯನ್ನು 'ದೇವಿ'ಯಾಗಿ ಸಂಬೋಧಿಸುತ್ತ ಪ್ರಕೃತಿ ವ್ಯಾಪಾರ ಸಮಕಾಲೀನ ಬದುಕಿನ ವೈರುಧ್ಯಗಳಿಗೆ ಪರಿಹಾರ ಸೂಚಿಸುವ ದೇವಿಯ ಕಡೆಗೆ ಕವಿತೆಹೊರಳಿ ಬಿಡುತ್ತದೆ . 'ವೇಗದಿಂದೋಡುತಿಹ ಕಾಲಪುರುಷನ ತಡೆದು ಮೃದುವಚನಗಳನಾಡಿ ಮೈದಡವಿ ಮುಂದಿಟ್ಟ ಪ್ರಳಯಕಾಲದ ಭೇರಿ ತಾಡನದ ಸದ್ದಳಿಸಿ ಶಾಂತಿಯನ್ನು ಬೀರುತ್ತ ತೇಲುತ್ತ ಬಾ ದೇವಿ ಎಂದು ಕವಿ ಉಷೆಯನ್ನು 'ದೇವಿ'ಯಾಗಿ ಮನುಜರ ಕಷ್ಟಗಳ ಪರಿಹಾರಕ್ಕೆ ಬರಲು ಆಹ್ವಾನಿಸುತ್ತಾನೆ.[೧೧೫]

ಕವಿಗೆ ವನಸುಮವನ್ನು ಕಂಡಾಗ ಅದರ ಸುವಾಸನೆಯನ್ನು ಸವಿಯಬೇಕೆನ್ನುವ ಆಸೆ, ಆದರೆ ಮನಸ್ಸು ಹಿಂಜರಿಯುತ್ತದೆ. ಕವಿಗೆ ಆ ವನಸುಮದ ಚೆಲುವು ಜಡವಲ್ಲ, ಚೇತನವನ್ನು ಹೊಂದಿರುವುದಾಗಿ ಭಾಸವಾಗುತ್ತದೆ. ಚೆಲುವು ನನಗಾಗಿ ಏಕೆ ಬಲಿಯಾಗಬೇಕು? ಚೇತನವು ನನಗಾಗಿ ನಾಶವಾಗಬೇಕೇನು? ಎಂದು ಸಮಾಧಾನ ತಂದುಕೊಳ್ಳುವನು. 'ಚೆಲುವೆಂಬುದಿರುವತನಕ ಚೇತನದ ಕಳೆಯಿಹುದು' ಎಂಬ ದಿವ್ಯಸಂದೇಶ ಮನದಲ್ಲಿ ಥಟ್ಟನೆ ಹೊಳೆಯುತ್ತದೆ ('ಚೇತನದ ಚೆಲುವು'). ಈ ಭಾವದ ಮುಂದುವರಿಕೆಯನ್ನು 'ವನಸುಮ' ಕವಿತೆಯಲ್ಲಿ ನೋಡುವೆವು. ವನಸುಮದ ಚೆಲುವೂ ಇರಬೇಕು, ಚೇತನವೂ ನಾಶವಾಗಬಾರದು. ಅದಕ್ಕಾಗಿ ಒಂದು 'ಸುವರ್ಣಸೂತ್ರ' ಕವಿಮನದಲ್ಲಿ ಮೂಡುತ್ತದೆ:

ಇರಲಿ ಬಿಡು ನೋಡುವೆನು
ಗಿಡದೊಳಿರು ಬಹುಕಾಲ
ನಾನಿಲ್ಲೆ ನಿಲ್ಲುವೆನು
ಮನದಣಿಯೆ ಕಣ್ದಣಿಯೆ
ನೋಡುತಲೆ ಹಿಗ್ಗುವೆನು
ತನಿರಸವನೀಂಟುವೆನು.[೧೧೬]

(ವನಸುಮ)

ಹೂವು ದಿನದಿನವೂ ನಸುಕಿನಲ್ಲಿ ಅರಳುತ್ತದೆ, ತಂಗಾಳಿಯ ಸೆಳೆತದಲ್ಲಿ ಅದು ನಲಿನಲಿದು ಕುಣಿಯುವುದು; ಆಗಸದಲ್ಲಿನ ಚಿಕ್ಕೆಗಳು ಕತ್ತಲೆಯಲ್ಲಿ ಸೊಬಗು ನೀಡುತ್ತವೆ. ಆಗಸದ ಆ ಪುಟ್ಟ ತಾರೆಗಳು ಅಲ್ಲಿ ತೇಲುತ್ತವೆ, ಹೊಳೆಯುತ್ತವೆ. ಸಂಜೆಯಾಗುತ್ತಲೇ ಹೂವುಗಳು ಬಾಡಿ ಗಿಡದಿಂದ ಉದುರಿ ಬೀಳುವವು; ಸೂರ್ಯೋದಯವಾಗುತ್ತಿರುವಂತೆಯೆ ಆಗಸದ ಆ ಚುಕ್ಕಿಗಳಿಗೆ ಅಳಿಗಾಲ. ಆದರೂ ಮರುದಿನ ಹೂವು, ನಕ್ಷತ್ರಗಳು ನಸುಕಿನಲ್ಲಿ ಇರುಳಿನಲ್ಲಿ ಕಾಣಿಸಿಕೊಳ್ಳುತ್ತವೆ. ಇದು ಪ್ರಕೃತಿ ಲೀಲೆ. ಈ 'ರೀತಿ'ಯನ್ನು ಮಾನವನಿಗೆ ಅನ್ವಯಿಸುವ ಕವಿ ಈ ಸೃಷ್ಟಿಕ್ರಿಯೆಯಲ್ಲಿ ಒಂದು ಅದ್ಭುತ ವಿನ್ಯಾಸವನ್ನು ಗುರುತಿಸುವನು. ಕವಿ ವಿಚಾರಮಾಡುವಂತೆ ಜೀವನು ಅಜ್ಞಾನದ ಮುಸುಕುಹಾಕಿಕೊಂಡಿದ್ದಾಗ ಅವನನ್ನು ಎಚ್ಚರಿಸಲು ದೇವನು ಎಷ್ಟೊಂದು ಕುರುಹು (ಚಿಹ್ನೆ)ಗಳನ್ನಿರಿಸಿದ್ದಾನೆ ಈ ಪ್ರಪಂಚದಲ್ಲಿ. ಇಲ್ಲಿ ಕವಿ ಪ್ರಕೃತಿಲೀಲೆಯನ್ನು ವಿಶ್ವಲೀಲೆಯಾಗಿ ಹೊರಳಿಸುವ ರೀತಿ ಸೊಗಸಾಗಿದೆ:

ತಿರೆಯ ರಂಗವೆ ನರನ ನಾಟ್ಯಮಂದಿರವಾಯ್ತೆ
ದುಗುಡವನು ಸುರಿದಳೆವ ಬಾಳೆ ಬಯಲಾಯ್ತೆ
ಮನವನು ಮುಸುಕಿನಿಂದೆಚ್ಚರಿಸಲೆಂದು
ಎನಿತೊಂದು ಕುರುಹುಗಳನಿರಿಸಿರುವೆ ದೇವ!
ಸೊಗವಿದ್ದರೇನಾಯ್ತು? ಅಳಲು ತಿರುಳಾಗಿಹುದು!
ಕುರುಹುಗಳನರಿತವನು ಕಿರಿಹೂವು ಮೀರುವನು
ಆಗಸದ ಚುಕ್ಕಿಗಳ ಕಿರಿಬೆಳಕನಡಗಿಸುತ
ತೊಲಗುವನು ಬೆಳಗುವನು ಹೊಳೆದು ಬಾಳುವನು
ಕುರುಹು ನೆರವಾಗುತಿರೆ
ಬದುಕು ಬೆದರುವುದೇನು?[೧೧೭]

(ಜೀವನ ಕುರುಹು)

ಕವಿಯಾಗಿ ಟಿ. ಎನ್. ಮಹದೇವಯ್ಯನವರು ಪ್ರಕೃತಿಯ ಉಪಾಸಕರಾಗಿ ಅರಳಿನಿಂತ ಹೂವುಗಳ ಬಾಹ್ಯಸೌಂದರ್ಯದ ವರ್ಣನೆ ಮಾಡಲು ಹೋಗುವುದಿಲ್ಲ. ಉದಾಹರಣೆಗೆ 'ಕಮಲ' ಮತ್ತು 'ಗುಲಾಬಿಹೂವು' ಕವಿತೆಗಳನ್ನು ನೋಡಬಹುದು. 'ಕಮಲ' ಕವಿತೆಯಲ್ಲಿ ಕವಿಗಳು ಕಮಲವನ್ನು ಯಾವುದಕ್ಕೆ ಸಂಕೇತವಾಗಿಸಿದ್ದಾರೆ, ಕಮಲಕ್ಕೂ ದೇವರಿಗೂ ಇರುವ ಸಂಬಂಧ, ವೇದಾಂತಕ್ಕೂ ಕಮಲಕ್ಕೂ ಇರುವ ಸಂಬಂಧ-ಇವುಗಳ ಬಗೆಗೆ ಜಿಜ್ಞಾಸೆ ನಡೆಸಿದ್ದಾರೆ. ಕವಿತೆಯ ಕೊನೆಯಲ್ಲಿ

ಕಳೆಯಿರಲಿ ಸೊಗದುಗುಡಗಳು ದೂರವಾಗಿರಲಿ!
ರಾಗಗಳ ಬಣ್ಣನೆಯು ಬೇಡವೆಮಗಿಂದು
ಅಂಗಗಳ ಸಿಂಗಾರ ಸೊಗಸುಗಳು ಹಾಗಿರಲಿ!
ಪ್ರೇಮಮಂತ್ರದ ಹಾಡಿನಿನಿಗೊರಲೆ ಸಾಕು!
ಕಮಲದೊಳು ಕೂಡಿರುವ ನೇಸರನ ಒಲವಿರಲಿ!
ವಿಶ್ವವನು ಬಂಧಿಸಲು ಸೂತ್ರವನು ಪೋಣಿಸುತ
ಜೀವಿಗಳ ಬಂಧನದ ತಂತುವಾಗಿರಲಿ[೧೧೮]

ಎಂದು ಬಣ್ಣಿಸುವರು. 'ಗುಲಾಬಿ ಹೂವು' ಕವಿತೆಯಲ್ಲಿ ದೇವಶಿಲ್ಪಿಯ ಅದ್ಭುತಸೃಷ್ಟಿ ಗುಲಾಬಿ ಎಂದು ವರ್ಣಿಸುತ್ತ, ಆ ಹೂವಿನ ಸೌಂದರ್ಯದಲ್ಲಿ ಕವಿ ಒಂದು ಅಲೌಕಿಕ ಶಕ್ತಿಯನ್ನು ಗುರುತಿಸುವರು:

ಏನು ಚೆಲುವಿನ ಬೀಡು ಏನು ಜೀವದ ಹೊಳಪು
ಬಣ್ಣ ಬಣ್ಣಿಸಲರಿಯೆ ಕಲೆಯ ಕಲ್ಪಿಸಲರಿಯೆ
ಸೊಬಗ ಸಾರುವ ಸುಮದ ಆಸುವು ಭಾವಕೆ ದೂರ
ನೋಡಿ ಹಿಗ್ಗುತ ನಲಿದು ಹೂವಾಗಬೇಕೆಂಬೆ![೧೧೯]

'ಕಮಲ' 'ಗುಲಾಬಿ ಹೂವು' ಕವಿತೆಗಳಿಗಿಂತ ಭಿನ್ನವಾದದ್ದು ಪಾರಿಜಾತಪುಷ್ಪ. 'ಪಾರಿಜಾತ' ಎನ್ನುವ ಕವಿತೆಯಲ್ಲಿ ಆ ಹೂವಿನ ದಿವ್ಯ ಸೌಂದರ್ಯ ಹಾಗು ಬಹುಕಾಲ ನಿಲ್ಲದ ಅದರ ಚೆಲುವು ಇವುಗಳನ್ನು ಕವಿ ಸೊಗಸಾಗಿ ಹೇಳಿರುವನು:

ದಳವೆಲ್ಲ ನಿಮಿರಿಹವು
ಎಲ್ಲ ಗಾಡಿಯ ತೊಟ್ಟು
ಕಂಪೇನೊ ಚೆಲ್ಲುತಿದೆ
ಗರತಿಯೊಲವನು ಹೋಲಿ!
ಮುಟ್ಟಿ ಮುದ್ದಿಡಲೆಂದು
ಕಾತರಿಸುತಿರೆ ಮನವು
ಕೈಚಾಚಿ ಹಿಂಜರಿದೆ!
ಮುಟ್ಟಿ ಬಿಟ್ಟರೆ ಸಾಕು
ಬಾಡಿ ಸೊರಗುವೆ ನೊಂದು!
ಮುಟ್ಟದಿರೆ ಮನವಿರದು
ಮುಟ್ಟುವೆನೆ ಬಾಳ್ಕಿರಿದು!
ಕಂಡು ಬಿಟ್ಟಿರಲಾರೆ
ಕಾಣದೆದೆ ತವಕಿಪುದು![೧೨೦]

ಅಲ್ಪಾಯುವಾದ ಆ ಕೋಮಲ ಪಾರಿಜಾತದ ಬಗೆಗೆ ಕವಿಗೆ ಚಿಂತೆ. 'ಏಕೆ ಬಂದೆಯೊ ಭುವಿಗೆ! ಹೋಗಬಾರದೆ ತಿರುಗಿ! ಸಗ್ಗದಾರಾಮದೆಡೆ!' ಎಂದು ಕವಿ ನೊಂದು ನುಡಿಯುವನು.[೧೨೧] ಪ್ರಮುಖವಾಗಿ ಭಾವಜೀವಿಯಾದ ಕವಿ ಪ್ರಕೃತಿಯ ಎಲ್ಲ ಮುಖಗಳನ್ನು ಕಂಡುಂಡು ಅಭಿವ್ಯಕ್ತಗೊಳಿಸಿ ತನಗೆ ತಾನೇ ನಲಿಯುವನು.

'ಲಿಪಿ-ತಾರೆ' ಟಿ. ಎನ್. ಮಹದೇವಯ್ಯನವರ ಸುನೀತಗಳಲ್ಲಿ ಒಂದಾಗಿದೆ. ಸಾಮಾನ್ಯವಾಗಿ ಸುನೀತ ಎಂಬುದು ಸಾನೆಟ್ಟಿನ ಕನ್ನಡರೂಪ. ಇದನ್ನು ಅಷ್ಟಷಟ್ಪದಿ ಎಂದು ದ.ರಾ. ಬೇಂದ್ರೆ ಹಾಗೂ ಮಾಸ್ತಿಯವರು ಕರೆದಿದ್ದಾರೆ.

'ಲಿಪಿ-ತಾರೆ' ಇದೊಂದು ಅತ್ಯಂತ ಧ್ವನಿಪೂರ್ಣವಾದ ರೂಪಕವಾಗಿರುವ ಸಮಾಸಪದವಾಗಿದೆ. ಲಿಪಿ ಮತ್ತು ತಾರೆ ಎಂಬ ರೂಪಕದ ಮೂಲಕ ಅನಂತಕಾಲವನ್ನು ಹಾಗೆಯೇ ಅನಂತಕಾಲದ ಗರ್ಭದೊಳಗೆ ಅಡಗಿರುವ ಇತಿಹಾಸವನ್ನು, ಆ ಇತಿಹಾಸದ ಒಂದು ಖಂಡವಾಗಿ ಬರುವ ಮಾನವ ಜೀವನ ರೂಪಿಸಿರುವ ಸಂಸ್ಕೃತಿ-ಧರ್ಮಗಳನ್ನು ಇದು ಧ್ವನಿಸುವಂತಿದೆ.

ಒಂದೆರಡು ತಾರೆಗಳು ಅನಂತಾನಂತವಾಗಿ ಹಿಗ್ಗುತ್ತಾ ಹೋಗಿ ನಕ್ಷತ್ರ ಮಂಡಲಗಳೆನಿಸಿ, ತಾರೆ ನೀಹಾರಿಕೆ ಎಂಬ ಪದಪುಂಜ ಎನಿಸುವವು. ಇವುಗಳ ಬೆಳಕಿನ ಒಳಗೆ ಎಷ್ಟೋ ಕಲ್ಪಾಂಶಗಳ ಇತಿಹಾಸ ಇನ್ನೂ ನಿದ್ರಿಸುತ್ತ

ಇದೆ ಎಂಬಲ್ಲಿ ಬೆಳೆಯಲಿರುವ ಇತಿಹಾಸದ ಧ್ವನಿಯೂ ಅಡಗಿರುವುದನ್ನು ಕಾಣಬಹುದು. ಲಿಪಿ-ತಾರೆ ಬೆಳಗುವಾಗ ಅದರ ಬೆಳಕಿನಲ್ಲಿ ಅನಂತವಾದ ಕಾಲ ನಿಧಾನವಾಗಿ ಸುರುಳಿ ಬಿಚ್ಚಿಕೊಳ್ಳುತ್ತದೆ. ಆ ಅನಂತಕಾಲದಲ್ಲಿ ಎಷ್ಟು ಮಕುಟಗಳು ಎಷ್ಟೊಂದು ಸಿಂಹಾಸನಗಳು, ಗದ್ದಿಗೆಗಳು, ಎಷ್ಟೊಂದು ಸಾಮ್ರಾಜ್ಯಗಳ ಐಶ್ವರ್ಯ ಎಂದು ಎಣಿಸಹೋದರೆ ಅದು ಅಸಾಧ್ಯವಾಗುತ್ತದೆ. ಮನುಜಕುಲವನ್ನುದ್ಧರಿಸುವ ಹಳೆಯ ಕತೆಯ ಕವಲುಗಳು ಎಷ್ಟು ಎಂದರೆ ಅದು ಗಣನೆಗೆ ಸಿಕ್ಕುವುದಿಲ್ಲ. ಇದೇ ಅರ್ಥವನ್ನೇ

ಮನುಜಕುಲದೇಳಿಗೆಯ ಹಳೆಯ ಕತೆ ಕವಲೆನಿತೊ
ಕಾವ್ಯ ಕಲೆ ಸಂಸ್ಕೃತಿಯ ಹುಟ್ಟು ಸಾವೆನಿತೊ[೧೨೨]

ಎಂಬುದು ಸೂಚಿಸುತ್ತದೆ. ಮಾನವೇತಿಹಾಸ ಆರಂಭವಾದಂದಿನಿಂದ ಹುಟ್ಟಿ ಸತ್ತ ಕಾವ್ಯ-ಕಲೆ-ಸಂಸ್ಕೃತಿಗಳ ಲೆಕ್ಕವೇ ಸಿಕ್ಕುವುದಿಲ್ಲ. ಇಂಥ ಮಾನವ ಇತಿಹಾಸವನ್ನು ನಿತ್ಯ ವೀಕ್ಷಕರಾಗಿ ನಿಂತು ನೋಡುತ್ತವೆ ಈ ತಾರೆ ಬಳಗ:

ನಿತ್ಯ ವೀಕ್ಷಕರಾಗಿ ನಿಂತ ತಾರೆ ಬಳಗ
ಅಜಕೋಟಿ ವರ್ಷಗಳ ಕಿರಿಯ ಕಂದಮ್ಮಗಳೆ!
ಆಕೃತಿಯೊ ಬಲುಕಿರಿದು ಕಾಲ ಪರಿಮಿತಿಯೆನಿತು
ಋಗ್ವೇದ-ಅವೆಸ್ಥಾ-ಕೊರಾನ್ ಬೈಬಲ್ಲೆನಿತೊ
ಎನಿತೊ ಭಾರತ ಚೀನಾ ಗ್ರೀಸು ರೋಮು ಈಜಿಪ್ಟ್!
ಕಾಲ ಇತಿಹಾಸದಲಿ ಆಗಸದ ಕಾವ್ಯದಲಿ
ಸಾಲುಪುಟ ತುಂಬುತಿಹ ಅಕ್ಕರೆಯ ಮಕ್ಕಳಿವು
ಚಿರಕಾಲ ಮಿನುಗದೊಡೆ ತೆರೆಯ ಕತೆ ಬರಿಶೂನ್ಯ![೧೨೩]

ಬಹುದೂರದಲ್ಲಿರುವ ನಕ್ಷತ್ರ ಆಕೃತಿ ಸಣ್ಣದಾಗಿರುವುದನ್ನು ಗುರುತಿಸಿ, ಕಾಲ ಪರಿಮಿತಿಯನ್ನು ಅದರೊಂದಿಗೆ ಯೋಚಿಸುತ್ತಾ ಆ ಲಿಪಿ-ತಾರೆ ಕಾಲಮಿತಿಯಲ್ಲಿ ಎರಡು ರೀತಿಯ ಸಂಸ್ಕೃತಿ ಧಾರೆಗಳು ಹರಿದಿವೆ. ಒಂದು ಧಾರೆ ಋಗ್ವೇದ, ಅವೆಸ್ಥಾ, ಕೊರಾನ್, ಬೈಬಲ್ ಮೊದಲಾದ ಧರ್ಮದ ಬೆಳಕುಗಳನ್ನು ಒಳಗೊಂಡಿದ್ದು, ಇನ್ನೊಂದು ಧಾರೆ ಭಾರತ, ಚೈನಾ, ಗ್ರೀಸ್, ರೋಮ್, ಈಜಿಪ್ಟ್ ಮೊದಲಾದ ದೇಶಗಳನ್ನ ಒಳಗೊಂಡದ್ದು.[೧೨೪] ಲಿಪಿ-ತಾರೆ ರೂಪಕ ತಾರೆ ಲಿಪಿಯಾದದ್ದು ಲಿಪಿ-ತಾರೆಯಾಗಿ ಮಾನವನ ಸಾಧನೆಯತ್ತ ನಮ್ಮ ಗಮನವನ್ನು ಸೆಳೆಯುತ್ತದೆ.

'ಕಲ್ಲತ್ತಿ' ಹೆಸರೇ ಸೂಚಿಸುವಂತೆ ಈ ಕವನದ ವಸ್ತು ಕಲ್ಲತ್ತಿ ಗಿರಿಯ ಮೇಲೆ ಹತ್ತುವ ನಿರೂಪಕನ ಭಾವನೆಗಳ ಅಭಿವ್ಯಕ್ತಿ. ಕವಿ ಬೆಟ್ಟವನ್ನು ಏರುವ ಸನ್ನಾಹದಲ್ಲಿದ್ದಾಗ ಕಂಡದ್ದು ಎರಡು ದೃಶ್ಯಗಳು

ಸುಳಿದು ಮೊರೆದು ಸುತ್ತಿ ಸರಿದು
ಬಳುಕಿ ಬಾಗಿ ತಿರುಗಿ ಮುರಿದು
ಹಾರಿ ಧುಮುಕಿ ಗುಡುಗಿ ಹರಿವ
ನೊರೆಯ ತೊರೆಯ ಝರಿಯ ಕಂಡು

-ಇವು ಕವಿಯ ಮನಸ್ಸನ್ನ ಸೆಳೆಯುತ್ತವೆ. ಜೊತೆಗೆ ಪರ್ವತಾರೋಹಣ ಸಾಹಸಕ್ಕೆ ಹಿನ್ನೆಲೆ ವಾದ್ಯ ಒದಗಿಸುವ ಕ್ರಿಮಿಕೀಟಗಳ ಗಾಯನರವ. ಮೇಲೇರಿದಾಗ ತೇಲುತ್ತಿರುವ ಬಿಳಿಮುಗಿಲ ಮಾಲೆ. ದೀರ್ಘಕಾಲದ ತಪಸ್ಸಿನಿಂದ ಶಾಂತತೆ ನೆಟ್ಟುನಿಂತ ಗಿರಿಪಂಕ್ತಿಗಳು.

ದೂರದಿಕ್ಕಿನನಂತದಲ್ಲಿ
ಸಾಲುಗಿರಿಯ ಸಾಲನೇರಿ
ಬೂದುಬಣ್ಣದಿಂದ ತೊಡೆದು
ಶಾಂತವಾಗಿ ದೀರ್ಘವಾಗಿ
ರಿಸಿಯ ತಪದ ಮೌನ ತಳೆದು
ನೆಟ್ಟಿ ನಿಂತವು[೧೨೫]

ನೆರಳು-ಬೆಳಕುಗಳ ಆಟ ಮನಮೋಹಕ! ಬರುಬರುತ್ತ ಮೋಡ ದಟ್ಟವಾಗಿ, ಗಾಳಿ ಕುಳಿರಾಗಿ ಬೆಟ್ಟವೆಲ್ಲ ಆಕಾಶವೇ ಆಗಿ ಬಿಡುತ್ತದೆ; ಮಂಜಿನ ರಾಶಿಯಂತೆ ಮೋಡ ತುಂಬಿ ಎಲ್ಲವೂ ಬಿಳಿಮಯವಾಗುತ್ತವೆ. ಮುಂದಿನ ದಾರಿ ಅದೃಶ್ಯವಾಗುವಷ್ಟು ಮಂಜಿನ ಆಟ.

ಉಳಿದ ಸೃಷ್ಟಿ ಚಿತ್ರವಾಗಿ
ಎಂದು ಕಾಣದಂಥ ನೋಟ
ಕನಸಕಟ್ಟಿ ತೇಲಿ ಬಿಟ್ಟ
ಮುಗಿಲ ಮನೆಯ ಮಂಜಿನಾಟ
ಮಂಕು ಕವಿಯಿತು.[೧೨೬]

ಈ ಚಿತ್ರಗಳು ಒದಗಿಸಿದ ಮಾನಸಿಕ ಸಂತೋಷಕ್ಕೆ ಆಘಾತ ತಂದ ಆಯಾಸ. ಮಾನಸಿಕ ನೆಲೆಯಿಂದ ಭೌತಿಕ ನೆಲೆಗೆ ತಲುಪುವ ಈ ಕಲಾಯಾತ್ರೆ ಸ್ಮರಣೀಯವಾದದ್ದೆ ಎನ್ನಬಹುದು.

ಗಿಡದ ಹಸಿರು, ಅರಳಿದ ಹೂವು ದಿಗ್ದೆಶಗಳು ದುಂಬಿಗೆ ಹೇಗೆ ಪ್ರಿಯವೊ ಕವಿಭೃಂಗಕ್ಕೂ ಈ ಬಗೆಯ ಸೀಮೋಲ್ಲಂಘನ, ಸತತ ಹಾರಾಟ, ಲೋಕಾನುಭವದ ಕೊಳದಲ್ಲಿ ಈಜುವಾಸೆ ಇದ್ದೇ ಇರುತ್ತದೆ ಎಂಬುದನ್ನು ಕವಿ 'ಮೊರೆಯುತಿದೆ ಭೃಂಗ' ಎಂಬ ಪದ್ಯದಲ್ಲಿ

ಸುಮದ ಕಂಪಿಗೆ ಸೋತು ಪ್ರಣಯಭಾರದಿ ಕುಗ್ಗಿ,
ಹಿಡಿದು ಮುತ್ತಿಡಲೆಳೆಸಿ ಮೊರೆಯುತಿದೆ ಭೃಂಗ!
ಸುಸ್ತಿಯೊಳಗೊರಗಿರ್ದ ಕವಿಯ ಹೃದಯವ ತೆರೆದು
ಭಾವಗಳ ಹೊನಲಿಗಾವೇಶಮಂ ತುಂಬಿ;
ಗತಕಾಲದನುಭವದ ಸುಖದ ಸ್ಮೃತಿಯಂ ನೆನೆಸಿ,
ಮೊರೆಯುತಿದೆ............... ಭೃಂಗ![೧೨೭]

ಅದು ಕಾಲದೇಶಗಳನ್ನ ಮೀರಿದ ಒಂದು ವಿಶ್ವಶಕ್ತಿಯನ್ನು ಕಾಣುವ ಹಂಬಲ ಹೊತ್ತು ಹಾರಾಡುತ್ತದೆ ಎಂಬದು ಕವಿಯ ಭಾವ ಈ  ಕವನದಲ್ಲಿ ಹೊಮ್ಮಿದೆ.

ಉಷೆ ಶಕ್ತಿದಾಯಿನಿ, ಚೈತನ್ಯರೂಪಿಣಿ, ಕತ್ತಲಿನ ಗರ್ಭವನ್ನು ಸೀಳಿ ಮೂಡುವ ಬೆಳಕಿನ ಮುಂಗೋಳಿ: ಎಲ್ಲ ಕಲ್ಮಷಗಳನ್ನು ಕಳೆದುಕೊಂಡು ಶಾಂತವಾಗಿ ನಿಲ್ಲುವ ಮನಸ್ಸಿನ ಸ್ಫೂರ್ತಿ 'ಉಷೆಯ ಸಾಕ್ಷಾತ್ಕಾರ' ಕವನದಲ್ಲಿ

ಹಕ್ಕಿಗಳು ಗೀತೆಯಲಿ ಬ್ರಹ್ಮನಂ ಪಾಡಿದವು
ಹೂವುಗಳು ಚೆಲುವಿನಲ್ಲಿ ಪೂರ್ಣನಂ ತೋರಿದುವು
ಉಷೆಯ ಅಂತರ್ಗೃಹದಿ ಚಿಚ್ಛಕ್ತಿ ಮೂಡುತಲೆ,
ಅರುಣಕಿರಣಚ್ಛಾಯೆ ಮೆಲ್ಲ ಮೆಲ್ಲನೆ ಮೂಡಿ,
ಧವಳಕಾಂತಿಯ ಸತ್ವ ಚೈತನ್ಯಮಂ ಕೂಡಿ,
ಒಂದರೊಳಗೊಂದಡಗಿ ಲಯವಾಗುತಿರಲು
ಸತ್ವರಜತಮ ತತ್ವಗಳನೆಲ್ಲ ದಾಟಿ

ಉಷೆಯ ವರ್ಣನೆಯಲ್ಲಿ ಕವಿಯು ಹೂವುಗಳ ಪೂರ್ಣ ಅರಳುವಿಕೆ, ಹಕ್ಕಿಗಳ ಗೀತೆ-ಇವು ಉಷೆಯ ಒಳಮನೆಯಿಂದ ಹೊರಬಂದಂತೆ ಹಾಗೂ ಅದರ ಕಿರಣಗಳಿಂದ ಕತ್ತಲೆ ಜಾರಿ ಬೆಳಕಿನಲ್ಲಿ ಸೇರಿ, ಬಯಲು ಬಯಲಾಯ್ತು! ಎಂಬುದಾಗಿ ಚಿತ್ರಿಸಿದ್ದಾರೆ.

ಉಷೆ ಬದುಕಿನ ಬೆಳಕನ್ನು ಸೂಚಿಸುವ ಮುಂಗೋಳಿಯಾಗಿ 'ಬಾ ಉಷೆಯೆ' ಕವಿತೆಯನ್ನು ಚಿತ್ರಿಸಿದ್ದಾರೆ. ಈ ಕವನವು ಲೋಕದ ಇಂದಿನ ಬಹುಮುಖೀ ಹಿಂಸಾಚಾರ, ಮೌಲ್ಯಪತನ, ಯುದ್ಧಾಕಾಂಕ್ಷೆ, ವಿಜ್ಞಾನದ ವಿಪ್ಲವ, ಧರ್ಮದ ಹೆಸರಲ್ಲಿ ನಡೆಯುವ ವಂಚನೆಗಳ ಕತ್ತಲೆಯನ್ನು- ಇವೆಲ್ಲವುಗಳ ಅಂತ್ಯಕ್ಕಾಗಿ ಮೂಡಣ ದಿಕ್ಕಿನಿಂದ ಮುಂಬೆಳಗು ಬಂದು ಶಾಂತಿಗೀತೆಯನ್ನು ಹಾಡಲಿ ಎಂಬುದು ಕವಿಯ ಹಾರೈಕೆಯಾಗಿದೆ.

ಇರುಳ ಕತ್ತಲೆಯಲ್ಲಿ
ಕೊರಗಿ ಸೊರಗಿತು ಲೋಕ
ಜಡನಿದ್ರೆಯೊಳಗೊರಗಿ
ಪ್ರಗತಿ ಕನಸಾಗಿತ್ತು!
ಇನ್ನು ಕನಸಾಗಿಹುದು!
ಮುಂಬೆಳಗ ಮುಂದಿಟ್ಟು,
ಜಗದ ನಿದ್ದೆಯ ಕಳೆದು,
ವರದ ಹಸ್ತವನೆತ್ತಿ,
ತಿರೆಯ ಹರಸಲು ಬಾರ!

'ಮೂಡಣ'ದ ಬೆಳಕು ಎಂಬ ಮಾತಿಗೆ ಭಾರತದೇಶದಿಂದ ದೊರೆಯಬಹುದಾದ ವಿಶ್ವಶಾಂತಿಯ ಪ್ರಸಕ್ತಿಯೂ ಬಂದು ಕವಿಯ ಲೋಕಚಿಂತನೆಯ ಸ್ವರೂಪ ನಮಗೆ ಕಾಣುವುದು. ಜಗದ ನಿದ್ದೆಯನ್ನು ಉಷೆ ಕಳೆಯಲಿ ಎಂಬ ಕವಿಯ ಮನದಾಳದ ಹಾರೈಕೆಯಲ್ಲಿ ಶಾಂತಿ ಪ್ರಜ್ಞೆಯ ಪ್ರವಹಿಸುವ ರೀತಿ ಸೌಜನ್ಯವಾಗಿದೆ.

ಪ್ರಕೃತಿಯ ರಮ್ಯದೃಶ್ಯವನ್ನು ಕಂಡಾಗ ಕವಿಯ ಹೃದಯಕುಹರದಲ್ಲಿ ಸುಪ್ತವಾಗಿರುವ ಒಳದನಿ ಹೊರಬರಲು ತಪಿಸುತ್ತದೆ. ಇಂತಹ ಭಾವುಕ ಅಂಶವನ್ನು ಟಿ. ಎನ್. ಮಹದೇವಯ್ಯನವರ 'ರಾಧೆ' ಕವನದಲ್ಲಿ ಕಾಣಬಹುದು. ಬಿಳಿಮುಗಿಲ ಮಂಜು ಮತ್ತು ಬೆಳದಿಂಗಳು ಯಮುನೆಯ ತೀರಕ್ಕೆ ಕವಿಯನ್ನು ಕರೆದೊಯ್ಯುವಂತೆ ಚಿತ್ರಿತವಾಗಿದೆ.

ಚಂದ್ರಿಕೆಯ ಬಾನಿನಲಿ ತಾರೆ ನೀಹಾರಿಕೆಯು
ಬಿಳಿಮುಗಿಲ ಮಂಜಿನಲಿ ಯಮುನೆಯಾ ಕಲಗೀತೆ
ಜನ್ನವಕ್ಕಿಯ ಕೊರಲು ಮನದ ಮಂದಿರದಲ್ಲಿ
ಒಂದು ರೂಪವ ತಳೆದು ಒಂದು ದನಿಯನ್ನು ಕೂಡಿ
ನಿನ್ನ ಹಾಡಲು ಬಯಸಿ ಕವನ ಕಟ್ಟುತಲಿಹುದು.[೧೩೦]

ಅವು ಸ್ಪಷ್ಟರೂಪ ಪಡೆಯಲಾಗದೆ ಅನುಭವಗಳು ಕವಿಯ ಒಳಮನಸ್ಸಿನಲ್ಲಿ ಚೀರುತ್ತದೆ. ಇದು ಕವಿಯು ಕಂಡ ಒಂದು ಒಳ್ಳೆಯ ಕನಸು ಎಂಬಂತೆ ಭಾಸವಾಗುತ್ತದೆ.

ಸ್ಪಷ್ಟವಾದ ಒಂದು ಪ್ರಕೃತಿವಿಲಾಸವನ್ನು ಕಂಡಾಗ ಕವಿಯ 'ಮನಸ್ಸಿನಲ್ಲಿ ಏಳುವ ಭಾವದ ಅಲೆಗಳಾಗಿ ವಿಸ್ಮಯ, ಚಿಂತನ ಮತ್ತು ಆಶಯ ವಿವೇಚನೆ ಇವು 'ಜೋಗದ ಜಲಪಾತ' ಎಂಬ ಕವನದಲ್ಲಿ ಮೂಡಿರುವ ಭಾವಗಳಾಗಿವೆ.

ಮುಗ್ಧಬಾಲೆಯಂತೆ ಹಳ್ಳಿ ಹಳ್ಳಿಗಳಲ್ಲಿ ಸುತ್ತಿ ಬರುವ ಈ ಜಲಕನ್ಯೆ ಅಷ್ಟೊಂದು ಎತ್ತರದಿಂದ ಧುಮ್ಮಿಕ್ಕಲು ಅವಳ ಜೀವನದ ಆಸೆ ಏನಿದ್ದಿತೊ ಹೀಗೆ ಉದ್ಗರಿಸುತ್ತಾನೆ:

ನಿನ್ನ ಕಲೆಯಾಸೆಯಂ ಸೂರೆಗೊಡಲಿಕೆ ಜಗಕೆ
ಮಲಗಿ ನಿದ್ರಿಸುತಿರುವ ಕಲೆಯ ವಾಣಿಯ ಕೆಣಕಿ
ಸಿಡಿಲು ಮಿಂಚಿನ ಮಾಟವಾದರಾಗಲಿ ಎಂದೂ
ಏನಿದ್ದಿತೌ ತಾಯೆ ನಿನ್ನ ಜೀವದ ಆಸೆ
ಕಡೆಗಿಲ್ಲಿ ಬಂದಿಂತು ನಿನ್ನಸುವ ತೆರಲು
ಭೋರೆಂದು ಗರ್ಜಿಸುತ ದಿಕ್ತಟಗಳದುರಿಸುತ
ಅಡಿನೂರರೊಂಭತ್ತು ಅಳತೆಗಳ ಧುಮ್ಮಿಕ್ಕಿ
ಕಡೆಗೆಲ್ಲೊ ಪಾರವಿಲ್ಲದ ದೂರ ಕಡಲ ತಡಿಗೆ.[೧೩೧]

ವಿಶ್ವಶಕ್ತಿಯ ಬೆಳಕು ಕೇಳುವವರು ಗತಿಯಿಲ್ಲದೆ ಬಿದ್ದು ಉರುಳಾಡುತ್ತಿದೆ ಎಂದು ಕವಿ ಉದ್ಗರಿಸುವ ರೀತಿ ಇದು:

ತುಂಬಿಕೊಳಲಾರಿಲ್ಲ, ತುಂಬಿಕೊಳೆ ಅನುವಿಲ್ಲ
ಎದೆಯ ಕಿರುಗುಡಿಯಲ್ಲಿ ಅನಿತು ತಾಣವು ಇಲ್ಲ!
ಒಂದೊಂದು ಹನಿಯಲ್ಲಿ ಹನಿಯ ತುಂತುರಿನಲ್ಲಿ
ಯೋಗಿಗಳ ಬ್ರಹ್ಮವೊ, ಕಲೆಯ ಚೆಲುವಮೂರ್ತಿಯೋ
ವಿಶ್ವಶಕ್ತಿಯ ಬೆಳಕೊ ಬಿದ್ದು ಉರುಳಾಡುತಿದೆ
ಕೇಳುವರೆ ಗತಿಯಿಲ್ಲ![೧೩೨]

ಮತ್ತೊಮ್ಮೆ ಕವಿಗೆ ಹೀಗೂ ಅನಿಸಿದ್ದುಂಟು. ನಿನ್ನ ಚೆಲುವು ವನಸುಮದಂತೆ, ನಕ್ಷತ್ರದ ಹೊಳಪು, ಆದರೂ ಹಾಳಾಗಿ ಹೋಗುತ್ತಿದೆ. ಇಷ್ಟೆಲ್ಲ ಹಚ್ಚ ಹಸರು, ಏಳು ಬಣ್ಣದ ಬಿಲ್ಲು, ಕಿಡಿಕಿಡಿಯಲ್ಲಿ ಜ್ಯೋತಿ ಇಷ್ಟೆಲ್ಲಾ ನಿನ್ನೊಳಗಿರಲು

ಆರಿಲ್ಲದಂತಾಗಿ ಹೋಗುತಿದೆ ಸರ್ವಸ್ವ!
ಆದರೂ ಏಳದಿದೆ ಆವ ಜೀವವು ಕೆರಳಿ!
ಆವ ಜೀವದ ಬೆಳಕು ಸಿಡಿದು ಸಿಡಿಲಾಗದಿದೆ
ಮಿಂಚಿ ಮಿಂಚಾಡಿದೆ! ಓ ತಾಯೆ ಏಕೆ ಬಲಿ
ನಿನ್ನೆದೆಯ ನೋವಿದನು ಆರು ತಿಳಿಯುವರು?[೧೩೩]

ಎಂಬ ಸಂಕಟ ಕವಿಯದು. ಬೆಟ್ಟ ಕಣಿವೆಯ ಮಧ್ಯೆ ಶರಾವತಿಯ ಶೂನ್ಯದಲಿ ಹರಿಯುತ್ತಿರುವ ಬಗೆಗೆ ಕನಿಕರಭಾವ ಮೂಡಿರುವುದು ಈ ಕವನದಲ್ಲಿ ಮನೋಜ್ಞವಾಗಿ ಮೂಡಿಬಂದಿದೆ.

ರಾತ್ರಿಯ ಶಾಂತತೆಯನ್ನು ಕವಿ ಮೆಚ್ಚಿಕೊಂಡಿರುವ ವಿಚಾರಗಳು 'ಕವಿ-ರಾತ್ರಿ' ಕವನದಲ್ಲಿ ಚಿತ್ರಿತವಾಗಿವೆ. ಈ ಕವನದಲ್ಲಿ ರಾತ್ರಿಯ ನೀರವತೆಯನ್ನು ತದೇಕಚಿತ್ತರಾಗಿ ಕವಿ ದೃಷ್ಟಿಸಿರುವ ಭಾವಗಳಿವೆ. ನೀರವರಾತ್ರಿಯಲ್ಲಿ ತಾರೆಗಳು ನೀಲಾಕಾಶದಲ್ಲಿ ಹೊಳೆವ ಚಿತ್ರ ಸೊಗಸು. ಸಂಜೆಯ ಗಲಿಬಿಲಿ ಇಲ್ಲಿಲ್ಲ, ಸುವಾಸನೆಯನ್ನು ಹೊತ್ತು ತೀಡುವ ತಂಗಾಳಿ ಹಿತ ಕೊಡುವಲ್ಲಿ ಧ್ಯಾನಕ್ಕೆ ಸಹಕಾರಿ ನೀರವತೆಯು ಎಂಬಂಶವನ್ನು ಹೇಳಿರುವರು.

ಉಷೆ ಸಂಜೆಯಭಿಸಾರ ಸಾಗಿ ಹೋಗಿದೆ! ರಾತ್ರಿ!
ಬನದ ಬಿನದಕೆ ಕುಣಿವ ಸುಗ್ಗಿ ಸೋಗೆಯು ಇಲ್ಲ
ಚಿಗುರು ಚಿನ್ನದ ಹೂವು ಕಂಪಿಂಪು ಒಂದಿಲ್ಲ.[೧೩೪]

ಅಮಾವಾಸ್ಯೆಯ ನೀರವತೆ ಇವನ ಧ್ಯಾನಕ್ಕೆ ಸಹಕಾರಿ ಎಂಬುದಾಗಿ ರಾತ್ರಿಯ ನೀರವತೆಯನ್ನು ಚಿತ್ರಿಸಿದ್ದಾರೆ.

ಕವಿಯ ಮನಸ್ಸನ್ನು ಸೆಳೆಯುವ ಕೋಗಿಲೆಯ ಹಾಡು ಬೆರಗುಗೊಳ್ಳುವಂತೆ 'ಕೋಗಿಲೆ' ಕವನದಲ್ಲಿ ಚಿತ್ರಿತವಾಗಿದೆ. ಕವಿಯ ಕಣ್ಣಿಗೆ ಕೋಗಿಲೆಯು 'ವಸಂತನ ವೈಭವದ ತುಂಬುರನಂತೆ'[೧೩೪] ಕಾಣುವುದು. ಕೋಗಿಲೆಯ ಧ್ವನಿಗೆ ಕವಿಯು ಪರವಶತೆ ಹೊಂದುವ ವಿಚಾರವನ್ನು ತಿಳಿಸುತ್ತಾರೆ. ಪ್ರಶಾಂತವಾದ ಪ್ರಕೃತಿಯಲ್ಲಿ ಏಳುವ ಎಲ್ಲ ಶಬ್ದಗಳಿಗಿಂತ ನಿನ್ನ ಶಬ್ದ (ಧ್ವನಿ) ನನ್ನ ಮನಸ್ಸನ್ನು ಪರವಶತೆಯತ್ತ ಕೊಂಡೊಯ್ಯುವುದು ಎನ್ನುತ್ತಾರೆ:

ಪ್ರಶಾಂತ ಪ್ರಕೃತಿಯೊಳು ಪಂಚಮಸ್ವರದಿಂದ,
ಎಲ್ಲ ರವವನು ಮೀರಿ, ಎನ್ನ ಮನವನು ಕದ್ದು,
ನೀನುಲಿವೆ; ಗಂಭೀರ ಮೌನತೆಯಲಿಂಪಾದ
ಪೆಂಪಾದ ನಿನ್ನಿಂಚರದಲೆಗಳು ಮೂಡುವುವು.[೧೩೫]

ಸುಂದರವಾದ ವನದಲ್ಲಿ ನಿನ್ನ ಸೊಗಸಾದ ಧ್ವನಿಯ ಸೊಬಗ ಕೇಳಲು ಕಾತರಿಸುತ್ತಿದೆ ನನ್ನ ಈ ಮನ ಎಂದು ಕವಿ ತಮ್ಮ ಭಾವಪರವಶತೆಯನ್ನು ಪ್ರಕಟಪಡಿಸುತ್ತಾರೆ.

ಆ ಮನೆ ಮಲ್ಲಿಗೆಯ ಪೊದೆ, ತನ್ನ ಹಸಿರು ಮೈತುಂಬ ಸುಗಂಧಭರಿತ ಹೂವು, ಬಿರಿದ ಮೊಗ್ಗು ಮತ್ತು ಕಾಯಿ ಮೊಗ್ಗುಗಳನ್ನು ಧರಿಸಿಕೊಂಡು, ಅಂಥದೇ ಪುಟ್ಟ ಸೀರೆಯನ್ನುಟ್ಟು ನಲಿಯುವ ಚೆಲುವೆಯನ್ನು ಕವಿಯ ಕಣ್ಮನಗಳಿಗೆ 'ಮಲ್ಲಿಗೆಯ ಹೊದರು' ಕಂಡಿದೆ. ಆ ಮಲ್ಲಿಗೆಯ ಮುಗಳ ಕುಡಿನೋಟದಲ್ಲಿ ಕವಿ ಮನುಷ್ಯರ ಮಂದಹಾಸವನ್ನು ಕಾಣುತ್ತಾರೆ.

ಹಸುರುಡೆಯ ಮುಸುಗಿನಲ್ಲಿ ನಕ್ಷತ್ರಗಳಂತೆ ಕಳೆಗೊಂಡಿರುವ ಮಲ್ಲಿಗೆಗೆ ನಸುನಗೆಯನ್ನು ಕಲಿಸಿದವರಾರು? ಅದು ಅದನ್ನು ಕಲಿತದ್ದಾದರೂ ಎಲ್ಲಿ? ಈ ಮುಗ್ಧ-ಪ್ರಬುದ್ಧ ಪ್ರಶ್ನೆಯನ್ನು ಎಲ್ಲರೂ ಕೇಳಿದ್ದಾರೆ; ವಿಸ್ಮಯಗೊಂಡಿದ್ದಾರೆ. ಇಲ್ಲಿ ಕವಿ ಪ್ರಶ್ನೆ ಕೇಳಿ ತಮ್ಮದೇ ಸುಂದರ ಉತ್ತರಗಳನ್ನೂ ಕಂಡುಕೊಂಡಿದ್ದಾರೆ. ಮೋಡಗಳ ಮರೆಯಲ್ಲಿ ಅರೆಕ್ಷಣ ಹೊರಜಾರಿ ನಸುನಗೆ ಸೂಸುವ ಚಂದ್ರನನ್ನು ಕಂಡು ಕಲಿತೆಯೇನು? ಎಂದು ಕೇಳುವರು. ಕವಿಸ್ತುತಿಯಿಂದ ಹಿಗ್ಗಿ ಮರದ ತುದಿಯಲ್ಲಿ ಮೆರೆಯುವ ಕೋಗಿಲೆಯನ್ನು 'ನೀನು ಮರದ ಬುಡದಲ್ಲಿದ್ದು ಕಂಡು ಕಲಿತೆಯಾ? ಅಗಲಿದವರು ಕೂಡಿ ತೆಕ್ಕೆಗೊಂಡಿರುವುದನ್ನು, ನಿರ್ಭರ ಹಾಸದಲ್ಲಿರುವುದನ್ನು ಮರೆಯಿಂದ ನೋಡಿ ಕಲಿತೆಯಾ?

ಎಳೆ ಕಂದ ತಾಯ ಬಳಿ ಮೆದುವಾದ ಅಂಕದಲಿ
ಮೈಮರೆತು ನಿದ್ದೆಯೊಳಗೊರಗಿರುವ ಕಾಲದಲಿ
ಎಳೆದುಟಿಯ ತುದಿಯಲ್ಲಿ ಸುಳಿದಾಡಿದಾ ನಗೆಯ
ನೀನೆಲ್ಲಿ ನಿಂತು ನೋಡುತಲಿದ್ದೆಯೋ ಕಾಣೆ.
ಎಂತು ಕಲಿತಿಹೆ ನೀನು ನಸುನಗೆಯ ತೋರಿಕೆಯ?
ಎಲ್ಲ ಮರಗಳು ಮುದದಿ ಚಿಗುರೊಡೆದು ನಿಂತಾಗ
ಎಲ್ಲ ಸುಮಗಳು ಬಿರಿದು ಕಂಪ ಸೂಸುತಿರುವಲ್ಲಿ

ನಸುನಗೆಯ ಬೀರುವುದ ನೀನು ಕಲಿಸಿದಿಯೇನು? [೧೩೭]

(ಮಲ್ಲಿಗೆಯ ಹೊದರು)

ಎಂಬ ವರ್ಣನೆ ಮನೋಜ್ಞವಾಗಿದೆ.

ಇಲ್ಲೆಲ್ಲ ಕಲಿತ ಮುಗುಳನ್ನು ನೀನು ಚಿಗುರೊಡೆದ ಸುಮಭರಿತವಾದ ಉಳಿದೆಲ್ಲ ಮರಕ್ಕೂ ಕಲಿಸಿದೆಯೇನು? ..... ಹೀಗೆ ಪ್ರಶ್ನೆಗಳ ಮೂಲಕವೆ ಉತ್ತರ ಕಾಣುವ, ಮಲ್ಲಿಗೆಯ ಚೆಲುವನ್ನು ತನ್ಮೂಲಕ ವರ್ಣಿಸುವ ಚೆಲುವನ್ನು ಕಾಣುತ್ತೇವೆ.

ಟಿ.ಎನ್. ಮಹದೇವಯ್ಯನವರ ಪ್ರತಿಭೆ ಹಲವು ಸೀಳಿನಲ್ಲಿ ಹರಿದು ಹಂಚಿಹೋಗಿದೆ. ಅವರು ಕವಿಗಳಾಗಿರುವಂತೆ ಒಳ್ಳೆಯ ಚಿತ್ರಗಾರರೂ ಹೌದು. 'ಚಿತ್ರಗಾರ' ಕವಿತೆಯಲ್ಲಿ ಅವರಿಗೆ ಮನದನ್ನೆಯ ರೂಪವನ್ನು ಕ್ಯಾನ್‌ವಾಸಿನಲ್ಲಿ ಸೆರೆಹಿಡಿಯುವ ತವಕ. 'ಕೂಡು ಬಾ ಅರೆಗಳಿಗೆ ತಡವೇನು ಇಲ್ಲ! ನಿನ್ನ ನಿಲವನ್ನು ಕಡೆದು ರೂಹಿಡಿದು ಮೂಡಿಸುವೆ ನನ್ನ ಮನದಲಿ ರೂಪು ಚಿರಕಾಲವಿರಲಿ' [೧೩೮] ಎಂದು ಮನದನ್ನೆಗೆ ಹೇಳುವರು. ಅವಳು ಚಿತ್ರಬರೆಯಲು ಚಿತ್ರಗಾರನಿಗೆ ಬೇಕಾದ ಮೋಹಕ ಭಂಗಿಯಲ್ಲಿ ಕುಳ್ಳಿರಬೇಕು. ಚಿತ್ರಗಾರ ಮನದನ್ನೆಗೆ ಸೂಚನೆ ಕೊಡುವನು:

ಮೊಗದ ನಿಲವೊಂದಿನಿತು ಎಡಕೆ ಬಾಗಲಿ ಸಾಕು
ಹಣೆಗೆ ತಿಲಕವ ತಿದ್ದಿ ಕತ್ತುರಿಯನಿಟ್ಟು
ನುಣುಪು ಕೂದಲು ಹೆಣೆದು ಹೂವಿರಿಸಿ ಸಿಂಗರಿಸಿ
ಇಳಿಬಿದ್ದ ಜಡೆಯಿತ್ತ ತುಸು ಬಲಕೆ ಸುಳಿದಿರಲಿ
ಅರೆದೆರೆದ ತುಟಿಯೆರಡು ಒಂದಿನಿತೆ ನಗಲಿ
ನಿನ್ನ ನಿಲವನು ಕಡೆದು ರೂಹಿಡಿದು ಮೂಡಿಸುವೆ
ನನ್ನ ಮನದಲಿ ರೂಪು ಚಿರಕಾಲವಿರಲಿ.

ಏನು ಸೊಗಸಿನ ರೂಪು, ಅರೆಗಳಿಗೆ ಸುಮ್ಮನಿರು
ನೀನೆನ್ನ ಮನದನ್ನೆ; ಹೊಸಬಳೇ ಎನಗೆ!
ಉಷೆಯಂತೆ ನಿಶೆಯಂತೆ ನೆಳಲು ಬೆಳಕಾಗಿರುವೆ
ಕುಂಚಿನಂಚನು ಎಳೆದು ಒಂದೆ ಚಿತ್ರದಲಿ
ಚಾರುರೂಪಿನ ಸಾರ ಸೌಂದರ್ಯ ರಸವೊಸರಿ
ವರ್ಣವಿನ್ಯಾಸದಲಿ ಜೀವ ತಳೆಯುವುದು
ನಿನ್ನ ನಿಲವನು ಕಡೆದು ರೂಹಿಡಿದು ಮೂಡಿಸುವೆ
ನನ್ನ ಮನದಲಿ ರೂಪು ಚಿರಕಾಲವಿರಲಿ. [೧೩೯]

ಚಿತ್ರಗಾರನಿಗೆ ಎದುರಿನಲ್ಲೇ ಸೌಂದರ್ಯದ ಅಧಿದೇವತೆ ಇರುವಾಗ ಅವಳ ಚಿತ್ರ ಬಿಡಿಸಲು ಸಾಧ್ಯವಾಗುತ್ತಿಲ್ಲ. ಚಿತ್ರಬಿಡಿಸಿ ಯಾರನ್ನು ಒಲೈಸಬೇಕಿದೆ? ಎಂಬ ಭಾವ ಮನದಲ್ಲಿ ಮೂಡುತ್ತದೆ. ಕವಿ - ಚಿತ್ರಗಾರ ಹೇಳುವನು;

ನಿನ್ನ ಬಳಿ ಸೋಂಕಿನಲಿ ನನ್ನ ಕಲೆ ಸಾಗದಿದೆ
ಮನದ ಹಂಬಲಕಳುಕಿ ಕೈಬೆರಳು ನಡುಗಿ
ತೆರೆಯ ಸರಿಸುತ್ತ ನನ್ನ ಸನಿಹಕೆ ಬಾ!
ನಿಜದ ರೂಪನು ಬಿಟ್ಟು ಸಟೆಯ ಮೂರ್ತಿಯ ನಿಲಿಸಿ
ಆವ ರೂಹನು ಕಡೆದು ಒಲ್ಯೆಸಬೇಕು?
ಹೃದಯಭಿತ್ತಿಯ ಮೇಲೆ ಶಾಶ್ವತದ ರೂವಿಹುದು
ಜೀವವೆರಡೂ ಬೆರೆತು ಹೊನಲೊಂದೆ ಇರಲು.[೧೪೦]

**ಪ್ರೇಮಲೋಕ**

'ಹೆಣ್ಣುನೋಡಿ ಬಂದಾಗ' ಕವಿತೆ ವಿವಾಹಪೂರ್ವದ ಕನಸಿನ ಪ್ರಪಂಚದ್ದು. ಅಲ್ಲಿ ಯೌವನದ ದಿನಗಳ ಹುಚ್ಚು ಕಲ್ಪನೆಗಳಿವೆ. ಹೆಣ್ಣು ನೋಡುವ ಶಾಸ್ತ್ರದಲ್ಲಿ ಕೈಹಿಡಿಯಲಿರುವ ಮನದನ್ನೆಯನ್ನು ನೋಡಿದಾಗಿನ ಹರೆಯದ ಅನುಭವ ಇಲ್ಲಿ ಕವಿತೆಯಾಗಿ ಅರಳಿದೆ. ಮನವನ್ನು ಸೆರೆಹಿಡಿದ ಕನ್ಯೆಯ ಭಾವಚಿತ್ರವನ್ನು ನೋಡುತ್ತ, ಅದು ಏನಿದ್ದರೂ ಮನಸ್ಸನ್ನು ಕದ್ದವಳ ನೆರಳಷ್ಟೆ. ಭಾವಚಿತ್ರಕ್ಕಿಂತ ಅವಳ ರೂಪ, ಲಾವಣ್ಯ, ಇನಿಗೊರಲನ್ನು ಮನಸ್ಸಿನಲ್ಲಿ ಕಲ್ಪಿಸಿಕೊಂಡು ಸುಖಿಸುವುದು ಕವಿಗೆ ಹೆಚ್ಚು ಪ್ರಿಯವಾದುದು:

ನಿನ್ನ ಇನಿಗೊರಲಲೊಗೆದ ಗೀತಿಕೆಯ ತೆರೆಸುಳಿದು
ನಿನ್ನ ಮನೆ ಗೋಡೆಯಲಿ ಗುಣುಗಾಡುತಿಹುದು
ನಿನ್ನ ರೂಪಿನ ಕಿರಣ ಎಲ್ಲ ರೂಪನು ಹೊಕ್ಕು
ನಿನ್ನಂತೆ ನಿಂತಿಹವು ನನ್ನ ಕಣ್ಣೆದುರು
ನೆರೆದ ಜನಗಳ ನಡುವೆ ನೀ ಬಂದು ತೆರಳುವೆಡೆ
ಒಗೆದ ಕಣ್ಣಿನ ಮಿಂಚು ಕೈಬೀಸಿ ಕರೆದು
ಎನ್ನ ಮನ ಭಾವಗಳ ರಮ್ಯ ಯಾನವ ಹತ್ತಿ
ತೂಗುಮಂಚವ ಕಟ್ಟಿ ಮೇಲೇರುತಿಹವು.[೧೪೧]

ಕವಿಯ ಪ್ರಕೃತಿಉಪಾಸನೆ ಉತ್ಕಟವಾದುದು. ನಿತ್ಯದ ಪ್ರಕೃತಿ ವ್ಯಾಪಾರಗಳನ್ನು ನೋಡುತ್ತ ನೋಡುತ್ತ (ಸೂರ್ಯೋದಯ, ತಿಳಿತೊರೆಯ ಕಲಗಾನ, ಜಾಜಿ ಮಲ್ಲಿಗೆ ಅರಳುವುದು, ಅವುಗಳ ಸುವಾಸನೆ ಎಲ್ಲೆಡೆ ಹರಡುವುದು ಕತ್ತಲೆಯಾಗುವುದು, ಬೆಳುದಿಂಗಳು ಆಗಸದಲ್ಲಿ ಮೂಡುವುದು) ತನ್ನ ನಲ್ಲೆಯನ್ನು ಬಾ ನಲ್ಲೆ! ಬಳಿಸೇರು ನನ್ನ ಚೆಲುವಿನ ಚೆನ್ನೆ' ಎಂದು ಆಹ್ವಾನಿಸುವನು. 'ವಿರಹದಾಹದಿ ಬೆಂದು ಸೀದು ಸೀಕರಿಯಾದ ಬಾಳಮರುಭುಮಿಯಲಿ ನಿನ್ನ ಪ್ರೇಮದ ಹೊನಲ ಚಿರಶಾಂತಿ ಸ್ಯೆಪಿರಲಿ, ನಿಟ್ಟುಸಿರ ಬಿಸಿ ಮುಟ್ಟಿ ಒಣಗಿ ಒತ್ತುವ ತುಟಿಗೆ ನಿನ್ನೊಂದು ಚುಂಬನದ ಸೀತ್ಕಾರ ಸಿಂಪಿನಲಿ'[೧೪೨] ಎಂದು ತನ್ನ ನಲ್ಲೆಯಲ್ಲಿ ತನ್ನ ಪ್ರೇಮವನ್ನು ವ್ಯಕ್ತಪಡಿಸುವನು (ಬಾ! ನಲ್ಲೆ!). ವಿವಾಹಾನಂತರದ ದಾಂಪತ್ಯ ಜೀವನದಲ್ಲಿ ಒಲವಿನ ಪಾತ್ರ ಇನ್ನೊಂದು ಬಗೆಯ ಮಾಧುರ್ಯವನ್ನು ಸೂಚಿಸುತ್ತದೆ. ಯೌವನ ಸಹಜವಾದ ಉತ್ಕಟತೆಯಲ್ಲಿ ಕವಿ ತನ್ನ ನಲ್ಲೆಯನ್ನು ಕಾವ್ಯದಲ್ಲಿ ನಾಯಕ ಕರೆಯುವಂತೆ ನಾಟಕೀಯವಾಗಿ ಸಂಬೋಧಿಸುವನು-

ಸುಗ್ಗಿ ಬನದಲಿ ಬಿರಿದ ಕಿರಿಯ ಹೂ ನೀನಾಗು
ಹಾಡಿ ಹೀರುವ ದುಂಬಿ ಹಾರಿಬರುವಂತಾಗು
ನಿನ್ನ ಬಳಿಗೈತಂದು ನನ್ನಿಯನೆ ಹೀರುವೆನು!
ಮಾಮರದ ಕೋಗಿಲೆಯ ಮಧುರ ಗೀತಿಕೆಯಂತೆ
ನಿನ್ನ ಕೊರಲಿನ ಸರವ ಗೀತೆಯೊಳೊಡಗೂಡು
ಮುಚ್ಚಿ ಮೆರೆಸುವೆ ಬನದ ಐಸಿರಿಯ ಸೊಗದಂತೆ
ನನ್ನ ಬಾಳಿನ ಬೆಳಕ ನಿನ್ನ ಸುತ್ತಲು ಹಿಡಿದು
ಇರುಳುತಿಂಗಳಿನಂತೆ ನೀಲಿನಭದಲಿ ಮೂಡಿ
ಬಾಳಭೂಮಿಗೆ ಕಳುಹು ಸುಖ ಶಾಂತಿ ಕಿರಣಗಳ
ಸೀಮಾವಿಹೀನ ನಭ ನೀಲಿಮಾಂಕಿತದಂತೆ
ನನ್ನ ಜೀವದನಂತ ಪರ್ಯಾಪ್ತದಾಕೃತಿಯ
ನಿನ್ನ ಬೆಳಕಿನ ಹಿಂದೆ ಮೈದೋರಿ ಮೂಡಿಸುವೆ![೧೪೩]

ಕವಿಗೆ ಪ್ರಕೃತಿಯ ಜೊತೆ ಅವಿನಾಭಾವ ಸಂಬಂಧ. ತನ್ನ ನಲ್ಲೆಯನ್ನು ಪ್ರಕೃತಿಯ ಒಂದು ಭಾಗವಾಗಿಯೇ ಕಾಣುವ ಕವಿ ಆ ಅಪೂರ್ವ ಭಾವಸಂಬಂಧವನ್ನು ಇಲ್ಲಿ 'ನಾನು-ನೀನು' ಕವಿತೆಯಲ್ಲಿ ಕಾಣಿಸುವನು.

ಮನದನ್ನೆಯ ಆಗಮನ ಕವಿಯ ಮನಸ್ಸನ್ನು ಅರಳಿಸಿದೆ. ಆಗ ಕವಿ ಹೃದಯತುಂಬಿ ನುಡಿಯುವನು 'ಹೃದಯದ ಪಾತ್ರೆ ಒಲವುಕ್ಕಿ ಹೊನಲಾಗಿ ತುಂಬಿ ಎನ್ನೊಲ್ಮೆ ನಿನ್ನೆದೆಯ ಪ್ರೇಮವಾಹಿನಿಯಾಗಿ ನಿನ್ನ ಬಂಧಿಸಿಕೊಡಲಿ ನನ್ನ ಜೀವನಕೆಂದು'[೧೪೪] ಎಂದು ಹಾರೈಸುವನು (ನನ್ನೊಲವು). ಗಂಡು ಹೆಣ್ಣಿನ ನಡುವಣ ಪ್ರೀತಿಯ ದಿವ್ಯತೆಯ ಬಗೆಗೆ ಕವಿಗೆ ವಿಸ್ಮಯದ ಭಾವ. ಕವಿ ಆ ಅಚ್ಚರಿಯ ಭಾವದಲ್ಲೇ ಹೇಳುವನು:

ಎನ್ನೆದೆಯ ಆಸರೆಯೊ? ನಿನಗೆಂದ ಐಸಿರಿಯೊ?
ಎನಿತಾದರೇನಿನಿತು ಮಧುರವೊ ನಲ್ಮೆ!
ತೆರೆಯ ಬೆಳಕಿನ ತೆರದಿ ಬೆಳಗಿ ತೊಳಗುವ ಒಲ್ಮೆ
ಕೇಳಿ ಕೇಳಿಯು ಕೂಡ, ಕೇಳಿ ತಣಿಯದು ಮನವು.[೧೪೫]

(ಒಲ್ಮೆ)

ನಲ್ಲ-ನಲ್ಲೆಯರ ಪ್ರೀತಿಯ ಸವಿಯನ್ನು ಸವಿಯಲು ಸಿರಿತನವೇ ಬೇಕಿಲ್ಲ, ಬಡತನದಲ್ಲೂ ಅದರ ಮಾಧುರ್ಯದ ಸವಿಯನ್ನು ಸವಿಯಬಹುದೆನ್ನುವನು ಕವಿ:

ಬಡ ಗುಡಿಸಲೊಡಲಿನಲಿ ಬಿಸಿರಕ್ತ ಬಸಿದೆದೆಯ
ನೀರ ನೀರೆಯರೊಲಿದು, ತುಣುಕು ರೊಟ್ಟಿಯ ಸವಿಯೆ
'ಇದಕಿಂತ ಒಲವುಂಟೆ' ಎಂದು ನಕ್ಕಿತು ನಲ್ಮೆ![೧೪೬]

(ಒಲ್ಮೆ)

ದೂರದ ತೌರನ್ನು ತೊರೆದು ಇನಿಯನ ಮನೆ-ಮನವನ್ನು ಪ್ರವೇಶಿಸುತ್ತ, ತನ್ನ ಬದುಕನ್ನು ಬೆಳಗಿದ ಇನಿಯಳ ಬಗೆಗೆ ಕವಿಗೆ ಮೆಚ್ಚುಗೆ.

ಕಾರ್ಮುಗಿಲಿನಾಗರದೊಳೆಲ್ಲೊ ಮಿಣುಕುತಿಹ
ಪುಟ್ಟ ತಾರೆಯ ತೆರದಿ ದೂರದ ತೌರಿನ ಬಾಲೆ
ಭಾಗ್ಯವಂತಳು ಬಂದು ಎದೆಯ ಬಾನಿನೊಳೊಂದು
ಮಿಂಚಿನಲೆಯನು ಹೂಡಿ ಬೆಳಗಿದಳು ಬದುಕ.[೧೪೭]

(ನೀನು ಬಂದಾಗ)

ಮನದನ್ನೆಯ ಒಂದು ಕಿರುನಗು ಕವಿಯ ಎದೆಯಾಳದಲ್ಲಿ ಹೊಸಶಕ್ತಿಯನ್ನು ಮೂಡಿಸಿತಂತೆ. ಸ್ವರ್ಗದ ಸಂಪತ್ತೇ ಬಂದು ಮನೆಯಲ್ಲಿ ತುಂಬಿದಂತಾಯಿತಂತೆ. ಪ್ರಿಯೆಯ ಆಳವಾದ ಪ್ರೇಮವನ್ನು ನೆನೆದು ಕವಿಯ ಕಣ್ಣು ಹನಿಗೂಡುತ್ತದೆ. ಅವಳ ನಗೆಯ ಮುದ್ದುಮೊಗ ನೋಡುತ್ತಲೆ -

ತಿಳಿಗಾಳಿ ಸುಳಿತದಲೆ ವೀಣೆ ನುಡಿಯುವ ತೆರದಿ
ಹೃದಯ ತಂತಿಯು ಮಿಡಿದು ಮನೆಯೆಲ್ಲ ತುಂಬಿತ್ತು[೧೪೮]

(ನೀನು ಬಂದಾಗ)

ಕವಿಯ ದಾಂಪತ್ಯ ಜೀವನ ತುಂಬ ಮಧುರವಾಗಿದ್ದಿತೆಂಬುದು ಅನೇಕ ಕವಿತೆಗಳಲ್ಲಿ ನಮ್ಮ ಅನುಭವಕ್ಕೆ ಬರುತ್ತದೆ. ಉದಾಹರಣೆಗೆ 'ಒಂದು ಅನುಭವ' 'ಎನ್ನ ಮನದನ್ನೆ' 'ಓ ಚೆಲುವೆ' 'ಸುಮ್ಮನಿರು ಮಲಗಿಹುದು' 'ಸೋಬನದ ಹೆಣ್ಣು' 'ನಿನ್ನ ನೆನಪಾಗುತಿದೆ' 'ಅವಳಿನ್ನು ಬರಿಹುಡುಗಿ ಅವಳೇನೊ ನನ್ನವಳೆ' '.....ನಲ್ಲೆ!' 'ಒಂದು ಅನುಭವ' ಮುಂತಾದ ಕವಿತೆಗಳು ಕವಿಯ ಮಧುರ ದಾಂಪತ್ಯದ ಸವಿಫಲಗಳು. ತವರಿಗೆ ಹೋದ ಇನಿಯಳು 'ನಿನ್ನಾಣೆ ನಾ ಬರುವೆ ನಾಳೆ ನಿಲದೇ ಬರುವೆ' ಎಂದು ಮಾತುಗೊಟ್ಟು ಹೋದಳು. ಅವಳ ಅಗಲಿಕೆಯ ನೆನೆಪು ಗಾಢವಾಗಿ ಕಾಡುತ್ತದೆ. ಟಿ.ಎನ್. ಮಹದೇವಯ್ಯನವರು ಪ್ರೀತಿಯಂತಹ ಮಧುರಭಾವವನ್ನು ಅದರ ಆಳವನ್ನು ಎಷ್ಟು ನವಿರಾಗಿ ಚಿತ್ರಿಸುವರೆಂಬುದಕ್ಕೆ 'ಎಂದು ಬರುವಳೊ' ಎನ್ನುವ ಕವಿತೆ ಸಾಕ್ಷಿ.[೧೪೯] ಪ್ರೀತಿಯ ಆಪ್ತತೆಯ ಸ್ಪರ್ಶ ಈ ಕವಿತೆಯಲ್ಲಿ ಹರಡಿಕೊಂಡಿರುವ ನಲ್ಲೆಯ ಅಗಲಿಕೆಯ ವಿರಹದ ತೀವ್ರತೆ ಇಲ್ಲಿನ ಒಂದೊಂದು ಪುಟ್ಟ ಸ್ಮೃತಿಚಿತ್ರಶಾಲೆಯ ಮೂಲಕ ಆಗುತ್ತದೆ. ಅವಳ ಮಧುರ ನೆನಪು ಎಷ್ಟು ಗಾಢವಾಗಿ ಪ್ರಿಯಕರನನ್ನು ಕಾಡುತ್ತದೆಂದರೆ, ಮನೆಯ ಮುಂದೆ ಹಾದುಹೋದ ಎಲ್ಲ ಎತ್ತಿನ ಬಂಡಿಗಳಲ್ಲಿ ತನ್ನಿನಿಯಳ ಮುಖವನ್ನು ಅರಸುತ್ತದೆ. ಹೊಳೆಗೆ ನೀರು ತರಲು ಹೋಗುವ ಊರ ಹೆಂಗೆಳೆಯರಲ್ಲಿ ತನ್ನ ಮನದನ್ನೆಯನ್ನು ಕವಿ ಹುಡಕುವನು:

ಬರುವ ಎತ್ತಿನ ಬಂಡಿ ನನ್ನವಳ ಕರೆತಂದು
ಗುಡಿಸಲೆಡೆಯೊಳಗಿಳುಹಿ ಮುಂದೆ ಸಾಗುವುದೆಂದು
ಬಂದೆಲ್ಲ ಬಂಡಿಗಳನರಸುತಿದೆ ನಿನಗಾಗಿ

ಬಂದು ನಿಲ್ಲದೆ ಮುಂದೆ ಸಾಗುತಲೆ ಇಹವು.

ಊರ ಮುಂದಿನ ಹೊಳೆಗೆ ಬೈಗಿನಲಿ ನಡೆದು
ದೂರ ದೋಣಿಯ ಮೇಲೆ ಕೆಂಪು ಸೀರೆಯನುಟ್ಟು
ಕಪ್ಪು ಕುಪ್ಪಸ ತೊಟ್ಟು ನುಣ್ಣ ಬೈತಲೆ ಹೊಳಪ
ಚೆನ್ನೆಯೊರ್ವಳ ಕಂಡು ಬಂದಳೆನ್ನವಳೆಂಬೆ!

ಇರುಳ ಬೆಳುದಿಂಗಳಲಿ ಬಾಗಿಲಲಿ ಕುಳಿತು
ದೂರಬಹ ಪಯಣಿಗರ ನಡೆನುಡಿಗೆ ಕಿವಿಗೊಟ್ಟು
ನನ್ನ ಗುಡಿಸಲ ರನ್ನೆಯಿನ್ನು ಬಂದಳು ಎಂಬೆ
ದಾರಿಹೋಹಕರ ಗುಂಪು ಸಾಗಿ ನಡೆವುದು ಮುಂದೆ.

ನೀರುತರಲೈತರುವ ಊರನಾರಿಯರೆಲ್ಲ
ಕೊಡಹೊತ್ತು ತೆರಳುವೆಡೆ ಓರೆನೋಟವ ಬೀರಿ
ತಮ್ಮ ತಮ್ಮೊಳೆ ತಾವೆ ಹುಸಿನಗೆಯ ನಗುತಿಹರು
ಬಂದಳೇ ನನ್ನಾಕೆ ಎಂದವರ ಮೊಗ ನೋಳ್ಪೆ.[೧೪೦]

ನಾಳೆಯೇ ಬರುತ್ತೇನೆ ಎಂದು ತವರಿಗೆ ಹೋದವಳು ಇನ್ನೂ ಬರಲೇ ಇಲ್ಲ, ಸುದ್ದಿ ಕಳುಹಲೂ ಇಲ್ಲ ಎಂದು ಬರುವಳೊ ಕಾಣೆ ಎನ್ನುವ ಚಿಂತೆಹೊತ್ತು ಕುಳಿತ ರಸಿಕನಾದ ಗಂಡ ಮತ್ತೆ ಕನಸಿನ ಪ್ರಪಂಚಕ್ಕೆ ಇಳಿಯುವನು. ತನ್ನ ಹಾಗೂ ತನ್ನಿನಿಯಳ ಪ್ರಥಮರಾತ್ರಿಯ ಮಧುರ ನೆನೆಪನ್ನು ನೆನೆಯುವನು. ಅವನಿಗೆ ಹಾಗೆ ನೆನೆಯುವುದೊಂದು ಸುಖದ ಮೆಲುಕು :

ಮೇಲ್ವಾಸಿಗಿನಿತೊರಗಿ ಕರದಿ ಗಲ್ಲವನಿರಿಸಿ
ಏನನೆಣಿಸುವೆ ತರಳೆ ಓರನೋಟವದೇನು!
ತುಂಟ ನಗೆ ಮಿಂಚುತಿದೆ ಕೆಂದುಟಿಯ ಕೊನೆಯಲ್ಲಿ
ಹೊರಳಲೇಕತ್ತಕಡೆ ತಿರುಗಿತ್ತ ಚೆಲುರಾಣಿ!

ರೇಶಿಮೆಯ ದಿಂಬಿನಲಿ ಹೂಕೆತ್ತು ಹರಹಿರುವೆ
ತಟ್ಟೆಯಗಲಕು ಬಿಚ್ಚಿ ಜೋಡಿಸಿದ ವೀಳೆಯವು
ತೂಗು ಮಲರಿನ ಮಾಲೆ ಮುಡಿಯೇರಿ ಲಜ್ಜೆಯಲಿ
ಏನೊ ಕನಸನು ಕಟ್ಟಿ ಕಾಡುತಿದೆ ನನ್ನೆದೆಯ.

ಬಿಸಿಹಾಲು ತನಿವಣ್ಣು ತೂಕಡಿಸುತಿಹವಿಲ್ಲಿ
ಅರೆದೆರೆದ ಕಣ್ಣಾಲಿ ಬರದ ನಿದ್ದೆಯ ಸೋಗು
ಏನೊ ಕಾಣಲು ಬಯಸಿ ಆಗಸವ ನಿಟ್ಟಿಸಿವೆ
ಮಿಂಚುತಿಹ ಮುಂಗುರುಳು ಕಣ್ಣ ಮಿಟುಕಿಸುತಿಹವು!

ನಾಚಿಕೆಯ ಬಿಸಿಯುಸಿರಿಗುಬ್ಬುತಿದೆ ಎದೆಭಾವ
ಕದಪು ಕೆಂಪೇರುತಿವೆ! ಕೈ ನೋಡು ಕಂಪಿಸಿವೆ
ಇತ್ತ ಬಾ! ತಿರುಗಿರಲಿ! ತುಂಟತನವನು ಒಲ್ಲೆ
ಎಣಿಸಲೇನಿದೆ ನಭದಿ ತಿರುಗಿತ್ತ ಸಗ್ಗವಿದೆ![೧೫೧]

ನಿರೀಕ್ಷೆ, ಕನಸು, ವಿರಹದ ಉತ್ಕಟತೆ, ಪ್ರೀತಿಯ ಆಧಿಕ್ಯ - ಹೀಗೆ 'ಎಂದು ಬರುವಳೊ' ಕವಿತೆ ಮನೆಯಂಗಳದ ಏಕಾಂತದ ನೆನಪುಗಳ ಬುತ್ತಿ ಬಿಚ್ಚುತ್ತದೆ. ಟಿ.ಎನ್. ಮಹದೇವಯ್ಯನವರು ಪ್ರೀತಿಯ ಅನಂತಮುಖಗಳನ್ನು ಕೌಟುಂಬಿಕ ಪರಿಸರದಲ್ಲಿ ಬಹಳ ಸೊಗಸಾಗಿ ಬಿಡಿಸಿರುವರು. ಅಲ್ಲಿನ ಶೃಂಗಾರ ಮನಸ್ಸನ್ನು ಉಲ್ಲಾಸಗೊಳಿಸುವ ಸುಗಂಧದ ಕಡ್ಡಿಯ ತೆಳುವಾಗಿ ಹರಡಿರುವ ಕಂಪನ್ನು ನೆನಪಿಸುತ್ತದೆ. ಟಿ.ಎನ್. ಮಹದೇವಯ್ಯನವರು ತಮ್ಮ ಕವಿತೆಗಳಲ್ಲಿ ಪ್ರಕೃತಿಯ ಮಡಿಲಿನ ಸೌಂದರ್ಯದ ಜೊತೆ ತಮ್ಮ ಮನದನ್ನೆಯ ಸಹಜಸೌಂದರ್ಯವನ್ನು ತುಲನೆಮಾಡುವರು:

ಸಾರಸೌಂದರ್ಯದಿಂದಭಿಸಾರಕೆಂದು
ವನದ ನೀರೆಯು ನಡೆಯೆ, ಜವ್ವನದ ಮೈಸಿರಿಗೆ
ಜಾಜಿ ಮಲ್ಲಿಗೆ ಮುಡಿಸಿ ಲಜ್ಜೆಯಿಂ ಕೆಂದಳಿರ
ರಾಗ ರಂಜಿಸುತಿರಲು ಕೆನ್ನೆ ಗಲ್ಲಗಳಲ್ಲಿ;
"ಈ ಗಾಡಿಗೇನಿಹುದು ಎನ್ನ ಮನದನ್ನೆಯಳು
ತುಸುನಾಚಿ ತೋರ್ವ ಕದಪಿನ ಕಾಂತಿ" ಯೆಂದೆ!
ಸಿರಿಬಸಂತನ ಬನದ ಮಧುರ ತುಂಬುರಗಾನ!
ಮಾಂದಳಿರ ತೆರೆಹಿಂದೆ ಉಲಿವ ಕೋಕಿಲೆಕಂಠ!
ಸೃಷ್ಟಿದೇವತೆ ನುಡಿಸಿ ತಲೆದೂಗುತಿಹ ಗಾನ!
ವೀಣೆ ನಿಸ್ವನವೆಂದು ಲೋಕ ಬೆರಗಾಗುತಿರೆ,
"ಬರಿಯ ಗದ್ದಲವಿರಲಿ; ಎನ್ನ ಮನದನ್ನೆಯಳ
ಮಧುರ ಮಂಜುಳವಾಣಿಗಾವುದೆಣೆ"ಯೆಂದೆ![೧೫೨]

(ಎನ್ನ ಮನದನ್ನೆ)

ಕವಿ ಪ್ರಕೃತಿಯ ನಿತ್ಯವ್ಯಾಪಾರದಲ್ಲಿ ವಿಶ್ವಪ್ರೇಮದ ಹಾಡನ್ನು ಕೇಳುವನು. ಪ್ರಕೃತಿಯ ಚೆಲುವು ಹಾಗೂ ಮನುಷ್ಯ ಸಂಬಂಧದ ಪ್ರೇಮದ ಹರಿವು ಇವುಗಳು ಮಧುರವಾಗಿ ಒಂದರೊಡನೊಂದು ಬೆರೆತುಕೊಂಡಿರುವುದನ್ನು ಕವಿ ಗುರುತಿಸುವನು; ಅಲ್ಲಿ ವಿಶ್ವಪ್ರೇಮದ ಹಾಡು ಜೀವಗಳ ನಲಿವಿಗೆ ಕಾರಣವಾಗಿರುವುದನ್ನು ಕವಿ ಹೀಗೆ ಹೇಳುವನು.

ಪ್ರೇಮರಸವಾಹಿನಿಯ ಬುಗ್ಗೆ ಚಿಮ್ಮುತಿರೆ
ಉಚ್ಚ ನೀಚತೆಯಳಿದು ಹಿರಿದು ಕಿರಿದನು ತೊಡೆದು

ವಿಶ್ವಪ್ರೇಮವ ಹಾಡಿ ಜೀವ ನಲಿಯುತಿರೆ
ವಿಶ್ವಸೃಷ್ಟಿಯ ತುಂಬ ಪ್ರೇಮಗೀತೆಯ ಹಾಡು
ಮಧುರದನಿಯಲಿ ನುಡಿದು ಝೇಂಕರಿಸುತಿರಲು
ಎನಿತೊಂದು ಹೃದಯಗಳು ಅರಳಿ ನಲಿಯುವವೊ?
ಎನಿತೊಂದು ಹಿರಿಸೊಗವು ತಿರೆವೆಣ್ಣ ಚುಂಬಿಪುದೊ?[೧೫೩]

(ಪ್ರೇಮಿಗಳು)

ಪ್ರಕೃತಿಯನ್ನು ಬನದ ಹುಡುಗಿಯಾಗಿ, ನಲ್ಲೆಯಾಗಿ-ಹೀಗೆ ಭ್ರಾಂತಿ ಲೋಕದಲ್ಲಿ ಕವಿ ವಿಹರಿಸುವ ಚಿತ್ರ 'ಭ್ರಾಂತಿ' ಕವಿತೆಯಲ್ಲಿದೆ. ಆ ಕವಿತೆಯಲ್ಲಿನ ಲಯದ ಮಂದ್ರ, ಹಿತ, ಬೆಡಗು ಮನಸ್ಸಿನ ಮೇಲೆ ಹಿತವಾದ ಪರಿಣಾಮ ಬೀರುತ್ತದೆ.

ಎಲರು ತೀಡಿ, ಮಲರು ನಿಮಿರಿ
ಕೆಂಪುಸೂಸಿ 'ನಲ್ಲಳಿಲ್ಲಿ'
ಎಂದು ನುಡಿಯೆ ಬಳಿಗೆ ಓಡಿ
ಸಿಕ್ಕಳೆನ್ನ ಚೆನ್ನೆಯೆಂದು
ಬಾಚಿ ತಬ್ಬಿದೆ!
ಎತ್ತ ಪುಗುವೆ 'ಚೆಲುವೆ'ಯೆಂದು
ಮುತ್ತನೊತ್ತಿದೆ!
ಅಯ್ಯೋ! ಕಡೆಗೆ ಬರಿಯ ಹೂವೆ!
ಸಿಕ್ಕ ಸಿಗದೆ ಸುಳಿದು ತೆರಳಿ
ಎನ್ನ ಎದೆಯ ಬನದ ರಾಣಿ
ನನ್ನ ಒಲವು ಉಲಿದ ಜಾಣೆ
ಎಲ್ಲೊ ಕಾಣೆನು!
'ಬಟ್ಟ ಬರಿಯ ಬಯಲ ಭ್ರಾಂತಿ'
ಎಂದು ಸುಯ್ದೆನು![೧೫೪]

(ಭ್ರಾಂತಿ)

ಶೃಂಗಾರದ ಅಭಿವ್ಯಕ್ತಿಯಲ್ಲಿ ಚೈತನ್ಯ ಅರಳುವುದನ್ನು ನಾವು ಟಿ.ಎನ್. ಮಹದೇವಯ್ಯನವರ ಕವಿತೆಗಳಲ್ಲಿ ಕಾಣುವೆವು; ಹಾಗೆಯೇ, ಪ್ರಕೃತಿಯ ಚೆಲುವು ಹಾಗೂ ಮನುಷ್ಯಲೋಕದ ಚೆಲುವು ಇವುಗಳು ಜೊತೆಜೊತೆಯಾಗಿ ಟಿ.ಎನ್. ಮಹದೇವಯ್ಯನವರ ಕವಿತೆಗಳಲ್ಲಿ ಅಭಿವ್ಯಕ್ತಿ ಪಡೆದುಕೊಳ್ಳುವ ಕವಿತೆಯ ಹೊಸವಿನ್ಯಾಸವನ್ನೂ ಗುರುತಿಸುವೆವು. ಪ್ರಕೃತಿಯ ಜೊತೆ ತಾದಾತ್ಮ್ಯಭಾವ ಹೊಂದಿರುವ ಕವಿಗೆ ಮಾತ್ರ ಇಂತಹ ಅಭಿವ್ಯಕ್ತಿ ಸಾಧ್ಯ. ಶೃಂಗಾರಕ್ಕೆ ವ್ಯತಿರಿಕ್ತವಾಗಿ, ತೀವ್ರವಾಗಿ ಪ್ರೀತಿಸಿದ ಮಡದಿ ಮಣ್ಣಿನಲ್ಲಿ ಮಣ್ಣಾಗಿ ಹೋಗುವ ಸಂದರ್ಭದ ನೋವಿನ ತೀವ್ರವಾದ ಅಭಿವ್ಯಕ್ತಿ '..... ಆ ಸಮಾಧಿ' ಕವಿತೆಯಲ್ಲಿ ಮನ ಕರಗುವಂತೆ

ಬಂದಿದೆ. ಶೋಕಗೀತೆಗಳಲ್ಲಿ (Elegy) ಇದು ಮರೆಯಲಾಗದ ಕವಿತೆ. ಸ್ಮಶಾನದಲ್ಲಿ ತನ್ನ ಕೈಹಿಡಿದಾಕೆ ಚಿರಶಾಂತಿಗೆ ಸಂದು 'ಶೂನ್ಯ'ವಾಗಿಸಿದ ಆ ಕ್ಷಣಗಳನ್ನು ಸ್ಮಶಾನದ ಮುಚ್ಚಂಜೆಯ ಗಂಭೀರ ವಾತಾವರಣದಲ್ಲಿ ಹೃದಯದಾಳದ ನೋವು ಹೆಪ್ಪುಗಟ್ಟಿ ಕವಿತೆಯಾಗಿ ಪ್ರಕಟವಾಗಿದೆ. ಆ ನೀರವದ ರಾತ್ರಿಯಲ್ಲಿ ಅಪ್ಸರೆಯರು ಆಗಸದಿಂದ ನಕ್ಷತ್ರರೂಪದ ಹೂವನ್ನು ಸುರಿಯುತ್ತಿರುವರು. ಚಳಿಗಾಳಿ ಬೀಸುತಿದೆ. ತಿಂಗಳ ಬೆಳಕು ಬಯಲನ್ನು ತಬ್ಬಿಹಿಡಿದಿದೆ. ತಮ್ಮ ಪತ್ನಿ ಮಣ್ಣಿ ಮಂಚವನೇರಿ ಮಲಗಿರುವ ದಾರುಣಚಿತ್ರವನ್ನು ಕವಿ ಮೊದಲಿಗೆ ಕೊಡುವರು. ಆನಂತರದ ಸಾಲುಗಳಲ್ಲಿ ದುಃಖದ ಕಟ್ಟೆಯೊಡೆಯುತ್ತದೆ. ತಮ್ಮ ಪತ್ನಿ ಮಣ್ಣಿನಲಿ ಮಣ್ಣಾಗಿಹೋಗಿರುವುದನ್ನು ಮರೆತ ಕವಿ 'ಹಸಿವು ತೃಷೆಯೊಳಗೆದ್ದು ಹಾಲು ಕೇಳುವಳೇನೋ?' ಎಂದು ಭ್ರಮಿಸುವರು. ಆ ಕೊರೆವ ಚಳಿಯನ್ನು ನೆನೆಯುತ್ತ 'ಉಡುವ ಬಟ್ಟೆಯು ಕೂಡ ಬಹು ತೆಳುವು, ಆರು ಹೊದಿಕೆಯನಿಟ್ಟು ಮಲಗೆಂದು ತವಿಸುವರು?' ಎಂದು ಕೇಳುವರು. ಬದುಕಿದ್ದಾಗ ಮಡದಿಯ ನೊಂದ ನೋವಿಗೆ ಮರುಗಿ ಕೈಹಿಡಿದು ತಬ್ಬಿ ಮನದ ದುಗುಡವನ್ನು ಕಳೆಯುತ್ತಿದ್ದೆ; ಕಂಬನಿಯನ್ನು ತೊಡೆಯುತ್ತಿದ್ದೆ. ಕೈಹಿಡಿದು ಕಣ್ಣೊರಸಿ 'ಅರಸಿ ಅಳಬೇಡಿನ್ನು ನಾನಿಲ್ಲವೆ' ಎಂದು ಸಮಾಧಾನಿಸುತ್ತಿದ್ದೆ. ಇನ್ನು ಯಾರಿಗೆ ಹೇಳಲಿ ಆ ಸಮಾಧಾನವನ್ನು ಎಂದು ಕೇಳುವಾಗ ಓದುಗರ ಮನಸ್ಸು ದ್ರವಿಸುತ್ತದೆ. ತಮ್ಮ ಅನುಪಸ್ಥಿತಿಯಲ್ಲಿ ಮಡದಿಗೆ ಇನ್ನು ಆಸರೆ, ಸಮಾಧಿಗೆ ಸೇರಿದಂತಿರುವ ಮರ ಮಾತ್ರ. ಆ ಮರವನ್ನು ಗೆಳೆಯನಂತೆ ಸಂಬೋಧಿಸಿ ಕವಿ ಹೇಳುವನು:

ಏಕಾಂಗಿಯಾಗಿಂತು ನಿಂತ ನಿನ್ನನು ನಂಬಿ
ಹತ್ತು ವರ್ಷದ ಬದುಕ ಮಸಣವಾಗಿಹ ಅಸುವ
ನಿನ್ನ ಮಡಿಲೊಳಗಿಟ್ಟು ಇನ್ನು ಹೋಗುವೆನಣ್ಣಾ!
ನನ್ನ ಸೊಗ ದುಗುಡದಲಿ ಉಸಿರೆನಿಸಿ ಬಾಳಿದಳು!

ಸಿರಿಯಲಿ ಮೈಮೂಡಿ ಬಂದ ಭಾಗ್ಯವು ಅವಳೆ!
ದುಗುಡದಲಿ ಸೈಪಿತ್ತು ಕಣ್ಣೊರಸಿ ಕರೆದವಳು
ಒಂದಿರುಳು ಕೈಬಿಡದೆ ನನ್ನುಸಿರು ಅಸುವೆನಿಸಿ
ಬೆನ್ನು ಬಿದ್ದವರಂತೆ ಕಾಯ್ದು ಕಾಪಿಟ್ಟವಳು.

ಓ ಮರವೆ! ನಚ್ಚುಮೆಚ್ಚಿನ ಗೆಳೆಯ ನಂಬಿಹೆನು
ಬೇಸಿಗೆಯ ಬಿಸಿಲಲ್ಲಿ ತಂಗಾಳಿ ತೆರಪುಗೊಂಡು
ಕುಳಿರೆಲರು ತೀಡುವೆಡೆ ಬಿಸಿಯುಸಿರನೂದು!
ಮಳೆ ಗುಡುಗು ಸಿಡಿಲು ಬರೆ ಕೊಡೆಹಿಡಿದು ಮರೆಮಾಡು.

ನೋವು ಸಂಕಟವೆಂದರೊಂದೆ ನುಡಿ ಸಾಕಿನ್ನು
ನಾನೋಡಿ ಬಹೆನಿಲ್ಲಿ ಅರೆನಿಮಿಷ ತಡವಿಲ್ಲ!

ಬೆಟ್ಟವಿದ್ದರು ದಾಟಿ ಕಣಿವೆಯಿದ್ದರು ಹಾರಿ
ತೊರೆ ಹೊಳೆ ದರಿಯಲಿ 'ಚಣಕೂಡ' ತಡಮಾಡೆ!
ನಿನ್ನ ನೆಚ್ಚಿಹೆನಣ್ಣಾ ನಾ ಹೋಗಿ ಬರಲೇನು?
ನಿತ್ಯ ಬನಸಿರಿ ಹೊತ್ತು ಹೂಚಿಗುರು ಸುರಿಯುತಿರು
ಸೊಂಪು ಕಂಪನು ತೂರು ನನ್ನ ನೆಚ್ಚಿನ ರಾಣಿ
ಇಲ್ಲಿ ಮಲಗಿಹಳೆಂಬ ನೆನಪೊಂದ ಮರೆಯದಿರು.[೧೫೬]

ಮರವನ್ನು ಕುರಿತ ಸಂಬೋಧನೆಯಲ್ಲಿನ ಆತ್ಮೀಯತೆ ನಮ್ಮ ಮನಸ್ಸನ್ನು ತಟ್ಟುತ್ತದೆ. ತನ್ನ ಗೈರುಹಾಜರಿಯಲ್ಲಿ ಬಾಳಗೆಳತಿಯ ಎಲ್ಲ ಸುಖ ದುಃಖಗಳಲ್ಲಿ ನೆರವಾಗುವಂತೆ ಬೇಡಿಕೊಳ್ಳುವಲ್ಲಿ ಆಳವಾದ ಪ್ರೀತಿಯು ಧಾರೆಯಾಗಿ ಹರಿದಿದೆ. ತನ್ನ ಇನಿಯಳಿಗೆ ಯಾವ ತೊಂದರೆಯೂ ಆಗದಂತೆ ಎಚ್ಚರದಿಂದ ನೋಡಿಕೊಳ್ಳುವಂತೆ ಪ್ರಾರ್ಥಿಸುವಲ್ಲಿನ ಕವಿಯ ಅಂತರಂಗದ ನೆರಳು ಕ್ಷಣಕ್ಷಣಕ್ಕೂ ನಮ್ಮ ಅನುಭವಕ್ಕೆ ಬರುತ್ತದೆ. ಸತ್ತವರನ್ನು ಜನ ಮರೆತುಬಿಡುವುದು ಲೋಕದ ರೂಢಿ. ಎಂದಾದರೂ ಒಮ್ಮೆ ನಾನು ಇತ್ತ ಬಂದೇ ಬರುವೆ. ನನ್ನವಳು ಮತ್ತೈದೆ, ನಾಲ್ಕು ಮಕ್ಕಳ ತಾಯಿ, ನಿನ್ನ ನೆರಳಿನ ಆಶ್ರಯದಲ್ಲಿ ಆಕೆ ಮಲಗಿರುವಳು, ಆಕೆ ಈಗ ಏಕಾಂಗಿ. ಆಕೆ ಬೆಚ್ಚಿ ಬೆದರದಂತೆ ಅವಳಿಗೆ ನೀನು ರಕ್ಷಣೆಕೊಡು. ಅವಳು ಭಾಗ್ಯವಂತಳು ನನ್ನ ಮನೆಗೆ ಸಿರಿದೇವಿಯಾಗಿ ಬಂದಳು. ಅವಳಿರುವವರೆವಿಗೂ ನನ್ನ ಮನೆ ಸ್ವರ್ಗಸಮಾನವಾಗಿದ್ದಿತು, ಅವಳ ಮಾತು ಮಂಗಳಕರವಾಗಿದ್ದವು. ಯಾವ ರೀತಿಯಲ್ಲೂ ಅವಳನ್ನು ನೀನು ಕೈಬಿಡದೆ ರಕ್ಷಿಸು. ನಿನ್ನ ಮೇಲೆ ಭರವಸೆಯಿಟ್ಟು ನಾನಿವಳನ್ನು ಬಿಟ್ಟುಹೋಗುತ್ತಲಿರುವೆನು. ಮಗಳ ಸಾವಿಗಾಗಿ ತಾಯಿ ಕಣ್ಣೀರುಗರೆದು ಬಿಟ್ಟುಹೋದಳು. ಒಡಹುಟ್ಟಿದವರು ಬಂದು ಕಣ್ಣೀರು ಸುರಿಸಿ ಹೋದರು. ಎಂದೂ ಬಿಡದ ನಾನು ಇಂದು ನಾನು ಅವಳ ರಕ್ಷಣೆಯ ಭಾರ ನಿನಗೊಪ್ಪಿಸಿ ಇಲ್ಲಿಂದ ಹೋಗುತ್ತಲಿರುವೆನು. ನನಗಿರುವ ಆಸರೆ ನೀನೊಬ್ಬನೆ, ಗೆಳೆಯಾ, ಕೈಬಿಡದೆ ಅವಳನ್ನು ಕಾಪಾಡು ಎಂದು ಪ್ರಾರ್ಥಿಸುವಲ್ಲಿಗೆ ಕವಿತೆ ಕೊನೆಗೊಳ್ಳುತ್ತದೆ. ಸುಕೋಮಲವಾಗಿ ಬೆಳೆದ ಪತ್ನಿಯನ್ನು ಸ್ಮಶಾನದಲ್ಲಿ ಬಿಟ್ಟು ಅವಳಿಂದ ಅಗಲಿ ಹೋಗಬೇಕಾದಾಗ ಅವಳಿನ್ನೂ ಬದುಕಿದ್ದಾಳೆ, ಎಂಬ ಭಾವನೆಯಲ್ಲಿ ಅವಳಿಂದ ಅಗಲುವುದು ಅನಿವಾರ್ಯವಾಗಿ, ಆ ಘಳಿಗೆಯಲ್ಲಿ ಗೆಳೆಯನಿಗೆ ಅವಳ ರಕ್ಷಣೆಯ ಜವಾಬ್ದಾರಿ ಒಪ್ಪಿಸಿ ಹೋಗುವ ದೃಶ್ಯ ಅಪೂರ್ವವಾಗಿದೆ. ಪತ್ನಿಯ ಸಮಾಧಿಯ ಎದುರಿನಲ್ಲಿ ನಡೆವ ಈ ದೃಶ್ಯದ ಪರಿಕಲ್ಪನೆಯೇ ಹೊಸದು. ಶೋಕಗೀತೆಗಳಲ್ಲಿ ಇದು ಚಿರಕಾಲ ನೆನೆಯುವ ಕವಿತೆ.

ಪ್ರೇಮಿಗಳ ಜೀವನದಲ್ಲಿ ಒಲಿದವರು ಎಷ್ಟು ಚೆನ್ನಾಗಿ ಕಾಣುತ್ತಾರೆಂಬ ಚೋದ್ಯವಿರುತ್ತದೆ ಎಂಬುದನ್ನು ಕವಿಯು 'ಒಪ್ಪಿದ ಹೆಣ್ಣು' ಎಂಬ ಕವನದಲ್ಲಿ ಹಲವಾರು ನಿದರ್ಶನಗಳ ಮೂಲಕ ಚಿತ್ರಿಸುತ್ತಾ ಹೋಗುತ್ತಾರೆ. ಬರಿಯ ಮೆಚ್ಚುಗೆಯ ಆಶಯವಷ್ಟೇ ಇಂಥ ಕವಿತೆಗಳ ವಸ್ತು. ಕೈಹಿಡಿದವಳು ಎಂಥವಳು?

ಕಣ್ತುಂಬ ತನಿವೆಳಗು
ಮೈಯೆಲ್ಲ ಇನಿದೊಲವು

ತುಟಿತುಂಬ ಹೂ ನಗೆಯು
......... ಕೊರಲೆಲ್ಲ ವೀಣೆದನಿ
ನುಡಿಯೆಲ್ಲ ಮುತ್ತು ಮಣಿ
ಕುಡಿನೋಟ ಸೆಳೆಮಿಂಚು
....... ನಡೆಯೆಲ್ಲ ಹಲ ಚೆಲುವು
ಬೆಡಗೆಲ್ಲ ಕಲೆಬಲೆಯು
ನಿಲವೆಲ್ಲ ರತಿಯೊಲವು[೧೫೭]

ಇಂಥ ಮಧುರ ಚಿತ್ರಣಗಳ ಮಾಲಿಕೆ ಕವನದುದ್ದಕ್ಕೂ ಹೊಳೆದಿವೆ.

ನಾಯಕನಿಗೆ ತನ್ನೂರಿನ ಒಬ್ಬಳು ಚೆಲುವೆಯ ಮೇಲೆ ಪ್ರೇಮ ಮೂಡಿದೆ. ಇದನ್ನು ಬಗೆಬಗೆಯ ಪ್ರಾಕೃತಿಕ ಸಂದರ್ಭಗಳ ಹಿನ್ನೆಲೆಯಲ್ಲಿ ನಾಯಕ ಅನುಭವಿಸುತ್ತಿದ್ದಾನೆ. ಆ ಹುಡುಗಿ ಕೆರೆಯಿಂದ ನೀರು ತರುವಾಗ ನಾಯಕನನ್ನು ಗಮನಿಸಿದಾಗ ಕವಿಗೆ ಕಂಡ ಬಗೆಯನ್ನು 'ನಿನ್ನ ಕಂಡಾಗ' ಕವನದಲ್ಲಿ ಹೀಗೆ ಹೇಳುತ್ತಾರೆ:

ಊರ ಮುಂದಿನ ಕೆರೆಯ ಏರಿಯಿಳಿದೈತಂದು
ನಡುವಿನಲಿ ಕೊಡವಿರಿಸಿ ಬಳುಕುತಲೆ ಬಂದೆ
ಬಟ್ಟಮೊಗ ಚೆಂದುಟಿಯು ಅರಳಿ ನಗುತಿಹ ಕಣ್ಣು
ತುಂಬುಗೆನ್ನೆಯ ಕನ್ನೆ ತಾರುಣ್ಯದವಳು
ಹೊನ್ನಹೊಳೆ ಹರಿದಂತೆ ಚಂದ್ರಮನ ಕಳೆಯಂತೆ.
ಹೂಬಿಟ್ಟ ಲತೆಯಂತೆ ನೀ ನಡೆದು ಬಂದೆ
ಎನ್ನ ಮೈಮನ ಮೀರಿ ಬಾನಿಳಿದು ಬಂದಂತೆ
ಕಣ್ಮುಚ್ಚಿ ಬಿಟ್ಟಂತೆ ಬಳಿ ಸುಳಿದು ನಿಂದೆ.[೧೫೮]

ನಾಯಕನನ್ನು ಗಮನಿಸಿದಾಗ ಒಂದು ನಲ್ನುಡಿ ಇಲ್ಲ. ಸನ್ನೆಯನ್ನೂ ಸುಳಿಸಿಲ್ಲ ಎಂಬ ಕೊರಗು ಕವಿಯದು. ಬೆಳಗಿನಲ್ಲಿ, ಬಿಸಿಲಲ್ಲಿ, ಸಂಜೆಯಲ್ಲಿ ಅವಳ ಚರ್ಯೆಗಳನ್ನು ಗಮನಿಸುವ ನಾಯಕನಿಗೆ ಆಕೆಯ ಬಗೆಗೆ ಅನುಕಂಪ, ಮೆಚ್ಚುಗೆ, ಪಾದರಿಯ ಅಲರಂತೆ ಎಲ್ಲಿ ಬಾಡುತ್ತಾಳೋ ಎಂಬ ಚಿಂತೆಯನ್ನು ಹೀಗೆ ವ್ಯಕ್ತಪಡಿಸುತ್ತಾರೆ:

ರೆಪ್ಪೆಯಂಚಿನ ನೋಟ ಎದೆಯ ಕಲಕಿತು ಬೇಟ
ಹರಳೊಗೆದು ತೆರೆಸುಳಿದು ದಡಮುಟ್ಟುವಂತೆ
ಸನ್ನೆಯೊಂದನು ಸುಳಿಸು, ಒಂದು ನಲ್ನುಡಿ ತಿಳಿಸು
ಎದೆಯಾಳದೊಳಗೊಗೆದ ನಲುಮೆಯಲೆಯೆಂದು
ಕಣ್ಮುಚ್ಚುವುದರೊಳಗೆ ಕೊಡತುಂಬಿ ಮೊಗೆದಿಟ್ಟು
ನಿನ್ನ ನಡುವಿನೊಳಿರಿಸಿ ಮನೆತನಕ ಬರುವೆ

ದೂರವಾದರೆ ಉಸಿರು ನಾ ಹೊತ್ತು ತಂದೀವೆ
ಪಾದರಿಯ ಅಲರಂತೆ ಬಾಡದಿರು ನಡೆದು[೧೫೯]

ಈ ಚಿಂತೆಯ ಹಿನ್ನೆಲೆಯಲ್ಲಿ ಈ ಪ್ರೇಮಿ ಆ ಕನ್ಯೆಯ ಬಗೆಗೆ ಕಲ್ಪಿಸಿಕೊಳ್ಳುವ ಸುಂದರ ಚಿತ್ರಣಗಳು ಸೊಗಸಾಗಿ ಮೂಡಿಬಂದಿವೆ.

ಬಯಕೆಗಳೆಲ್ಲ 'ಸಲಿಕೆ'ಯಾದರೂ ಮನಸ್ಸಿನಲ್ಲಿ ಒಂದು ಕೊರತೆಯುಳಿದೇ ಉಳಿಯುತ್ತದೆ. 'ಆಸೆ ಲಾಲಸೆಯಂತೆ ಉನ್ಮತ್ತವಾಗುವದು'[೧೬೦] ಎಂಬುದನ್ನು ಕವಿ 'ಪ್ರೇಮದ ಅನುಭವ' ಕವನದಲ್ಲಿ ನಿವೇದಿಸಿಕೊಂಡಿದ್ದಾರೆ. ಮನಸ್ಸಿನ ಕಣಜಕ್ಕೆ ಎಷ್ಟು ಪ್ರೇಮದ ಕಾಳು ತುಂಬಿದರೂ ಅದು ಹೊರಚೆಲ್ಲುವುದಿಲ್ಲ. ಪ್ರೇಮಿಗಳೆಲ್ಲ ಅನುಭವಿಸುವ ಅರಕೆಯ ಭಾವ ಇದೇ ಅಲ್ಲವೆ. ಇದನ್ನು ತುಂಬಿಸಲು ಕವಿ ವಿರಹದ ಮಾರ್ಗವನ್ನು ಸೂಚಿಸುತ್ತಾನೆ.

ಪ್ರೇಮ ವಿರಹವನಾಂತು ದುಗುಡ ಭಾವನೆ ತುಂಬಿ,
ವಿರಹದುರಿಯಲಿ ಸುಡಿಸಿ, ಪ್ರೇಮಬಿಂದುವ ನೆನೆಸಿ
ಕೊರಗಿ ಸೊರಗಿಸಿ ಕಾಡಿ, ಮರಣವೀವುದೆ ಸುಖವೊ?
ಅದುವೆ ಪ್ರೇಮದ ರುಚಿಯ ಅನುಭವದ ಹಾದಿಯೊ?
ಮೃತ್ಯುಶಯ್ಯೆಯ ಮೇಲೆ ಕೊನೆಯ ಮುತ್ತನು ಕೊಟ್ಟು
....................ಮೊದಲ ಆಲಿಂಗನದಿ
ಕೊನೆಯ ಬಾರಿಗೆ ಎಂದು ಸ್ಪರ್ಶಸುಖಮಂ ಪೊಂದಿ,[೧೬೧]

ಬಹುಶಃ ಅದೇ ಪ್ರೇಮದ ರುಚಿಯ ಅನುಭವದ ಹಾದಿ ಎಂದು ಕವಿ ಭಾವಿಸುತ್ತಾನೆ. ಈ ಕವಿತೆಯಲ್ಲಿ ಪ್ರೇಮದ ಸ್ವರೂಪದ ಉತ್ತಮ ಪ್ರಶ್ನೆಗಳಿರುವುದನ್ನು ಗಮನಿಸಬಹುದು.

ಕವಿಯು ಒಬ್ಬಳು ಚೆಲುವೆಯನ್ನು ಮನಸ್ಸಿನಲ್ಲೇ ಆರಾಧಿಸುತ್ತಿದ್ದು ಬಾಲ್ಯದಿಂದ ಹೆಣ್ಣಾಗುವಷ್ಟರಲ್ಲಿ ಅದು ಇನ್ನೂ ತೀವ್ರವಾಗುವುದು. 'ಅಗಲಿಕೆ' ಕವನದ ಮೂಲಕ ಅವರ ಮೌನಭಾಷ್ಯ ಸಮಾಜಕ್ಕೆ ಅರ್ಥವಾಗದೆ ಕವಿಗೆ ಆಕೆಯ ನೆನಪೊಂದೆ ಎಂಬ ನೆನಪುಗಳನ್ನು ಕವನದ ಸಾಲುಗಳಲ್ಲಿ ಸೊಗಸಾಗಿ ಚಿತ್ರಿಸಿದ್ದಾರೆ.

ಅಂದು ಹುಡುಗಿ ಇಂದು ಹೆಣ್ಣು!
ಬೆಳೆದು ಬಂದಳು
ನನ್ನ ನುಡಿಯೆ ಸೊದೆಯ ಸವಿಯು
ನನ್ನ ಕಥೆಯೆ ಮಿಗಿಲದೆಂದು
ನನ್ನ ಮಾತ ಮರೆಯೊಳಿದ್ದು
ಅವಿತು ಕುಳಿತು ಕಿವಿಯ ಕೊಟ್ಟು
ಕೇಳುತಿದ್ದಳು

.....................................

.....................................

ಎರಡು ನೋಟ ಒಂದುಗೂಡಿ,

ಮಿಂಚು ಮಿಂಚು ಸೇರಿದಂತೆ

ಎದೆಗೆ ಬೆಳಕನಿತ್ತು ಬೆಳಗಿ

ತೊಳಗಿ ಹೊಳೆದವೆಂದು ಬಲ್ಲೆ

..........................

ಕೂಡಲಿಲ್ಲ ನುಡಿಯಲಿಲ್ಲ.[೧೬೨]

ಆ ಹುಡುಗಿಯೂ ಪ್ರೀತಿಯ ಸೂಚನೆಗಳನ್ನು ತನ್ನ ದೇಹಭಾಷೆಯಿಂದ ರವಾನಿಸುತ್ತಾಳೆ. ಆದರೆ ಅವರಿಬ್ಬರು ಕೂಡಲಿಲ್ಲ, ಮಾತನಾಡಲಿಲ್ಲ. ಎರಡು ಹೃದಯಗಳೂ ಮಾತನಾಡಿ ಗಾಳಿಯಲ್ಲಿ ತೂರಿ ಆಡಿ ಒಲವನ್ನು ಹರಿಸುತ್ತವೆ ಅಷ್ಟೆ.[೧೬೩] ಆದರೆ ನಮ್ಮ ಸಮಾಜದಲ್ಲಿ ಇಂಥ ಮೌನಭಾಷ್ಯ ಬರೆದರೆ ಯಾರಿಗರ್ಥವಾಗಬೇಕು? ಕೊನೆಗೆ ಸಂಪ್ರದಾಯದಂತೆ ಅವಳ ತಂದೆ ತಾಯಿಗಳು ಹುಡುಗಿಗೆ ವರನನ್ನು ಹುಡುಕಿ ಮದುವೆ ಮಾಡಿ ಕಳಿಸಿಬಿಡುತ್ತಾರೆ. ಕವಿ ತನ್ನ ಸೌಭಾಗ್ಯವನ್ನು ಹಳಿದುಕೊಂಡು ಅವಳನ್ನ ಮರೆಯಲು ಪ್ರಯತ್ನಿಸುತ್ತಾನೆ. ಆದರೂ ಆಕೆಯ ನೆನಪು ಮಾಸುವುದಿಲ್ಲ. ಪರಸ್ತ್ರೀಯನ್ನ ಬಯಸುವುದು ಕೂಡ ಪಾಪ ಎಂಬ ಪ್ರಜ್ಞೆ ಕವಿಯಲ್ಲಿ ಮೂಡುವ ಪ್ರಸಂಗ ಸೊಗಸಾಗಿ ಮೂಡಿಬಂದಿದೆ.

ಇದೊಂದು ಸರಳವಾದ ಪ್ರೇಮಗೀತೆ, ಪ್ರಕೃತಿ ಚಿತ್ರಣಗಳ ಹಿನ್ನೆಲೆಯಲ್ಲಿ ನಲ್ಲೆಯನ್ನು ತೂಗಿ ನೋಡುವ ಒಂದು ಚಿತ್ರಣ 'ಚೆನ್ನೆ' ಕವನದಲ್ಲಿ ಮೂಡಿಬಂದಿದೆ.

ಸುಂದರ ವಸ್ತುಗಳಲ್ಲಿ ಹೂವಿಗೆ ಮೊದಲ ಸ್ಥಾನ. ಅವುಗಳ ಚೆಲುವು ನಗೆಯನ್ನು ಸೂಚಿಸುತ್ತವೆ ನಿಜ. ಆದರೆ ತನ್ನ ನಲ್ಲೆಯ ನಗೆಯ ಎದುರಿಗೆ ಅದು ಏನೇನೂ ಅಲ್ಲವಂತೆ ಎಂಬುದು ಕವಿಯ ಭಾವ ಇದನ್ನ ಕವನ ಹೀಗೆ ವ್ಯಕ್ತಪಡಿಸುತ್ತಾರೆ.

ದಿನದಿನವು ಹೂವುಗಳು ಅರಳುತಿವೆ, ಬಾಡುತಿವೆ!

ಎನಿತೊ ಚೆಲುವನು ತೋರಿ ನಗೆಯ ಸೂಸುತಿವೆ!

ಆದರೂ ನಿನ್ನಂತೆ ಒಂದು ದಿನ ನಗಲಿಲ್ಲ!

ಕೋಗಿಲೆಯು ಹಾಡುತಿದೆ ಮಧುರತರ ಗೀತಿಕೆಯ,

ಸಂಜೆ ಬೆಳಗಿನ ವನವೆ ಝೇಂಕರಿಸುತಿಹುದು!

..............................................

ಸೃಷ್ಟಿಯೊಳಗಿಹುದಂತೆ ಮಹಮಹಾಸೌಂದರ್ಯ!

ನಿನಗಿಂತ ಚೆಲುವೆ ಎನ್ನ ಒಲವಿನ ಚೆನ್ನೆ![೧೬೪]

ಹಾಗೆಯೇ ಕೋಕಿಲಸ್ವನ, ನಾಚಿ ಕೆಂಪಾದ ಉಷೆಯ ಕೆನ್ನೆ ಇವೆಲ್ಲವೂ ಆಕೆಯ ಚೆಲುವಿನೆದುರಿಗೆ ಸಪ್ಪೆ! ಆದುದರಿಂದ ಮಹಾಮಹಾಸೌಂದರ್ಯವಿರುವ ಸೃಷ್ಟಿ ಖಂಡಿತಕ್ಕೂ ತನ್ನ ಚೆಲುವೆಗಿಂತ ದೊಡ್ಡದಲ್ಲ ಎಂಬುದು ಕವಿಯ ಭಾವವಾಗಿದೆ.

ದೇವಾಲಯಗಳಲ್ಲಿ ಮಾನವನ ಅಪಕ್ವ ನಡವಳಿಕೆಗಳನ್ನು ಕಂಡಾಗ ದೇವಾಲಯ ದರ್ಶನಕ್ಕೆ ಅರ್ಥವುಂಟೆ ಎಂಬ ಪ್ರಶ್ನೆಯು ಕವಿಯನ್ನು ಕಾಡಿದೆ. ಇಂತಹ ಒಳಗುದಿ ಮತ್ತು ಮಾನವನ ಸ್ವಭಾವ ಇವುಗಳನ್ನು 'ನೀನಿಲ್ಲೆ ನಿಲ್ಲೆಂದ' ಕವಿತೆಯಲ್ಲಿ ಕವಿ ಹೇಳಹೊರಟಿದ್ದಾರೆ.

ಕವಿ ದೇವಾಲಯದ ಹತ್ತಿರ ಬಂದು ಗುಡಿಯ ಹೊಸ್ತಿಲು ಇನ್ನೇನು ತುಳಿಯಬೇಕು ಎನ್ನುವಾಗ ಅಶರೀರವಾಣಿಯಾಗುತ್ತದೆ.

"ನೀನಿಲ್ಲೆ ನಿಲ್ಲು" ಎಂದು.

ಬಹುಶಃ ಅಂತರಂಗವನ್ನು ಕೊರೆಯುತ್ತಿದ್ದ ಚಿಂತನದ ಫಲವಾಗಿ ಮೂಡಿದ ಸಿಡುಕಿನ ನುಡಿಯೋ? ಎದೆಯ ಗವಿಯಿಂದ ಕೇಳಿಬರುತ್ತಿರುವ ಗದರಿಕೆಯ ಮಾತೊ? ಅಥವಾ ತಮ್ಮ ಅಳುಕೇ ಧ್ವನಿಯ ವೇಷದಲ್ಲಿ ಬಂದು ಹೀಗೆ ಬದುಕುತ್ತಿದೆಯೊ?

ಮನದ ಮೈಲಿಗೆ ಸೋಂಕು
ರಾಗರಸ ದ್ವೇಷಗಳ
ತಿಳಿಗಾಳಿ ಸುಳಿತಗಳು
ತೀರದಾಸೆಯ ಉಸಿರು
ಆಮಿಷಗಳ ನಿಟ್ಟುಸಿರು
ನಿನ್ನಮಲ ಪದತಲವ
ಸೋಂಕದಿರಲೆಂದು
ಸೋಂಕಿ ನಿನ್ನಡಿಯೆಡೆಯ
ಹೊಲಸೆನಿಸದಿರಲೆಂದು
ಆವ ಸಿಡುಕಿನ ನುಡಿಯೊ
ನನ್ನೆದೆಯ ಗವಿಯಿಂದ
ಗದ್ದರಿಸುತಿಹುದೊ
ನನ್ನಳುಕೆ ದನಿಯಾಗಿ
..........................
ನೀನಿಲ್ಲೆ ನಿಲ್ಲೆಂದು.

ಮನಸ್ಸಿನ ಮೈಲಿಗೆ ಸೋಂಕು, ರಾಗ-ದ್ವೇಷಗಳ ಸೆಳೆತಗಳು ಹೀಗೆ ಕವಿಯನ್ನು ತಡೆದಿರಬಹುದು. ಆಗ ನಿಜವಾಗಿ ನಾವೆಲ್ಲ ದೇವಾಲಯದೊಳಗೆ ಕಾಲಿರಿಸಲು ಅರ್ಹರೇ? ಎಂಬ ಪ್ರಶ್ನೆ ಕವಿಯನ್ನು ಕಾಡುತ್ತದೆ.

ವೇದಮಂತ್ರದ ಸ್ರೋತವು ಅಮರಗಂಗೆಯನ್ನು ಹರಿಸಿದ್ದರೂ ಎದೆಯ ಬಯಲನ್ನು ತೊಳೆದು ಶುಚಿಮಾಡಲಿಲ್ಲವಲ್ಲ ಎಂಬ ಕೊರಗು ಕವಿಯದು. ಜನರ ಬಾಯಲ್ಲಿ ದೈವದ ನಾಮ ಗುನುಗಿಸುತ್ತಿರುತ್ತದೆ. ಆದರೆ ಎದೆಯ ಮನೆಯೊಳಗೆ ಅವುಗಳ ಅರ್ಥ ಮತ್ತು ಭಾವಲೋಕ ಪ್ರವೇಶ ಮಾಡುತ್ತಿಲ್ಲ. ಸಪ್ತಸ್ವರಗಳ ವಾದ್ಯಗಳನ್ನು ಹೊಂದಿಸಿಕೊಂಡು ಹಾಡುತ್ತೇವೆ. ಆದರೆ ಹೃದಯ ತಂತಿಯ ನರಕ್ಕೆ ಅವುಗಳನ್ನು ಜೋಡಿಸಿ ಬಗೆತುಂಬಿ ಹಾಡುವ ನಿರ್ಮಲಚಿತ್ತ ನಮಗೇಕಿಲ್ಲ? ಮಾನವ ಇತಿಹಾಸದ ಎಲ್ಲ ಮುಖಗಳನ್ನು ಅವನು ಬಲ್ಲವನಾದುದರಿಂದ ಶುದ್ಧವಾದ ಹೃದಯವಿಲ್ಲದೆ ದೇವಾಲಯಕ್ಕೆ ಬರುವುದರಿಂದ ಯಾವ ಸಂಸ್ಕಾರವೂ ಬರುವುದಿಲ್ಲ ಎಂಬುದು ಕವಿಗೆ ಪರಿಚಿತವಷ್ಟೆ.

ಹೀಗೆ ನಾನಾ ಚಿಂತನೆಗಳಿಗೆ, ಮನಸ್ಸಿನ ದ್ವಂದ್ವಗಳಿಗೆ ತೆರೆದುಕೊಳ್ಳದ ಕಿಟಿಕಿಯಾಗುತ್ತದೆ. 'ನಿಲ್ಲು ನಿಲ್ಲು' ಎಂಬ ವಾಣಿಯು ಕವಿಯ ಭಾವನೆಯ ಮೂಲಕ 'ನೀನಿಲ್ಲೆ ನಿಲ್ಲೆಂದೆ' ಕವನದಲ್ಲಿ ಉತ್ತಮವಾಗಿ ಮೂಡಿದೆ.

ಕವಿ ಅವನ ಪ್ರೇಮ ಸಂಸ್ಮರಣ ಜೀವನದ ಬಗೆಗೆ ಒಳನೋಟ ಹರಿಸುವಾಗ ನೆನಪಿಗೆ ಬರುವ ಐತಿಹಾಸಿಕ ಕಥೆಯೇ ತನ್ನ ಮಡದಿ ಮಮತಾಜಳ ನೆನಪಿಗೆ ತಾಜಮಹಲನ್ನ ಕಟ್ಟಿಸಿದ ಷಹಜಹಾನ್ ಕಥೆ. ಷಹಜಹಾನ್ ಸೆರೆಮನೆಯಲ್ಲಿ ಒಂಟಿಯಾಗಿರುವಾಗಲೂ ಸತ್ತ ಮಮತಳ ಜೊತೆ ಕಳೆದ ಸುಂದರ ಜೀವನದ ಚಿತ್ರಗಳೇ ಕನಸಿನಲ್ಲಿ ತುಂಬಿಕೊಳ್ಳುತ್ತವೆ. ಇಲ್ಲಿ ಕವಿ ಷಹಜಹಾನನು ಕನಸಿನಲ್ಲಿ ಮೂಡುವ ಮಮತಾಜಳ ಚಿತ್ರಗಳ ಬಗ್ಗೆ 'ಕನಸು' ಎಂಬ ಪದ್ಯದಲ್ಲಿ ಸೊಗಸಾಗಿ ಚಿತ್ರಿಸಿದ್ದಾರೆ. ಈ ನೆನಪಿನ ಸತ್ವದಿಂದಾಗಿ ಅವನು ಸೆರೆಮನೆಯ ದುಗುಡವನ್ನ ಮರೆತ. ಅಂಥ ಒಂದು ರೋಚಕ ಅವಧಿಯ ಸೊಗಸನ್ನು ಕವಿ ಈ ಕವನದಲ್ಲಿ ಕೊಡುತ್ತಿದ್ದಾರೆ. ಮಮತಾಜಳೊಂದಿಗೆ ಕನಸಿನಲ್ಲಿ ಕ್ರೀಡಿಸುವ ಷಹಜಹಾನ್ ಅದೇ ಗುಂಗಿನಲ್ಲಿ

ದುಂಡುಮೊಗದಲಿ ನಗುವ ಎರಡೆ ಕಣ್ಣಾಲಿಗಳ
ಕಣ್ಮಂಚಿನೊಳ್ಮೆರೆದು, ಲಜ್ಜೆಯಿಂ ನಲವೇರಿ
ಅಲರ ಕಂಪನು ತಾಳ್ದಲಸಿಕೆಯಿಂದುಬ್ಬಿರ್ದ
ಹೂಗೆನ್ನೆಭಾರಮಂ ತನ್ನ ತೋಳಿನೊಳಿರಿಸೆ
ನಳಿದುಟಿಗಳಂಚಿನಲಿ ಸುಳಿದು ಜಾರುತಲಿರ್ದ
ಎಳೆನಗೆಯ ಪೀರ್ವಂದು ಕಣ್ನೋಟ ಬೆರೆತಿರಲು
ತಿರೆಸಗ್ಗದೈಸಿರಿಯನೆಲ್ಲ ನನ್ನಿಯನೊರಸಿ
ದಿಟ್ಟಿಸಿದ ಮೈಮರೆತು ಮನಮರೆತು ಕಣ್ಮರೆತು
ಆ ಚೆಲುವು ಚೆಲುವು ಕಣೆ ಎಲ್ಲವೂ ತನಗೆಂದು

ಚುಂಬಿಸಿದ ಭ್ರಾಂತಿಯಿಂ ತನ್ನರಸಿ ಎಂದರಿತು
ಸೆರೆಮನೆಯ ಕಲ್ಲುನೆಲಮಂ ಇರುಳ ಕನಸಿನಲಿ[೧೨೦]

ಎಚ್ಚರ-ಜಾಗೃತಿಗಳ ನಡುವೆ ಇರುವ ಕಂದಕವನ್ನು ಕವಿ ಚಿತ್ರಿಸಿರುವ ಪರಿ ಕಲಾತ್ಮಕವಾಗಿದೆ.

**ಶಿಶು ಲೋಕ**

ವಾಸ್ತವವಾಗಿ ತೋರುವ ಕವನ 'ಬನ್ನಿ ಮಕ್ಕಳೆ ಬನ್ನಿ'. ಇದೊಂದು ಶಿಶುಗೀತೆ, ಮಕ್ಕಳಿಗೆ ಕವಿ ನೇರವಾಗಿ ಕಥೆ ಹೇಳುವ ನೆವದಲ್ಲಿ ತಮ್ಮ ಆತ್ಮವೃತ್ತದ ಬಾಲ್ಯಜೀವನವನ್ನು ಹೇಳುತ್ತಿದ್ದಾರೆ. ಕವಿ ತಮ್ಮ ಬಾಲ್ಯವನ್ನು ಸರಿಯಾಗಿ ಅನುಭವಿಸಲೇ ಇಲ್ಲ ಎಂಬ ಕೊರಗನ್ನು ಹೇಳುತ್ತಿದ್ದಾರೆ ಮಕ್ಕಳಿಗೆ. ಅವರು ಬೆಳೆದು ಬಾಳುವ ಮೊದಲೆ ತಾಯಿ, ಅತ್ತೆ, ಅಜ್ಜಿ, ತಂದೆ ಎಲ್ಲ ತೀರಿಕೊಂಡಿದ್ದರು. ಹೀಗಾಗಿ ಕವಿ "ಎಂಟು ತುಂಬುವ ಮೊದಲೆ ನಾ ಬೆಳೆದ ಹುಡುಗ" ಎಂದು ಕೊರಗಿದ್ದಾರೆ.

ಬೆಳೆದು ಬಾಗುವ ಮೊದಲೆ ಎಲ್ಲ ಸರಿದರು ದೂರ
ಮನದ ಭಾವಗಳಂತು ತಾವೆ ಕಳಚುರುಳಿದವು
ನನ್ನನೊರ್ವನೆ ಬಿಸುಟು ಹುಡುಗ ನೀನಿಂದೆಂದು
ನಿನ್ನ ಮಗುವಿನತನವು ಇನ್ನು ನಿನಗೇಕೆಂದು
ಎಂದೊ ಸಂಭವಿಸಳಿದ ಹಳೆಯ ನೆನಪಿಗೆ ಸೋತು
ಇಂದಳಲಿ ಬಿಸುಸುಯ್ವೆ ಸುಯ್ವೆನೆದೆ ಸಂಕಟಕೆ
ಅಳಿದುದೇ ನನ್ನ ಕಂದನತನವು ಇನ್ನೆಲ್ಲಿ?[೧೨೧]

ಆಯಾ ವಯೋಮಾನಕ್ಕೆ ತಕ್ಕಂಥ ಪ್ರವೃತ್ತಿ ಬಂದರೆ ಅದು ಸಹಜ. ಕವಿಯದು ಬೇರೆ ಅನುಭವ. ಹುಡುಗ ಬೆಳೆದು ಬಾಳುವ ಮೊದಲೇ ಎಲ್ಲಾ ದೂರ ಸರಿದಿದ್ದರು. ಆದ್ದರಿಂದ ಹುಡುಗನ ಬಾಲ್ಯಸಹಜ ಭಾವಗಳೆಲ್ಲ ತಮಗೆ ತಾವೇ ಕಳಚಿಬಿದ್ದವು.

ಕವಿ ಸಾಕಷ್ಟು ವಯಸ್ಕರಾದ ಮೇಲೆ ಹುಡುಗನಂತೆ ಬಾಳುವುದರ ಭಾಗ್ಯ ತಮ್ಮ ಪಾಲಿಗೆ ಇಲ್ಲವಾಯಿತೆಂಬ ಕೊರಗನ್ನು ಕವಿ ಈ ಕವನದಲ್ಲಿ ಮೆಲುಕುಹಾಕಿದ್ದಾರೆ. ಇದನ್ನು ಮಕ್ಕಳನ್ನು ಎದುರಿಗೆ ಕೂರಿಸಿಕೊಂಡು ಹೇಳುವ ಶಿಶುಗೀತೆಯ ಪರಿಕಲ್ಪನೆ ಮಾಡಿ ಹೇಳಿರುವುದು ಕವನಶಿಲ್ಪದ ಒಂದು ಅದ್ಭುತ ಸಾಧನೆ ಎನ್ನಬಹುದು. ಆತ್ಮವೃತ್ತದ ಹಿನ್ನೆಲೆ ಇಲ್ಲಿರುವುದರಿಂದ ಕವನದ ಭಾವ ಆಳವಾಗಿ ಮನಸ್ಸನ್ನು ತಟ್ಟುತ್ತದೆ.

ಶಿಶುಗಳ ಲೋಕದಲ್ಲಿನ ಒಂದು ಮುಗ್ಧ ಚಿತ್ರ 'ಮಗುವಿನ ಮಾತು' ಕವಿತೆಯಲ್ಲಿದೆ. 'ಮಕ್ಕಳಿರಲವ್ವ ಮನೆ ತುಂಬ' ಎಂದು ಹಿಂದಿನ ಗರತಿ ಹಾಡಿದಳು; 'ಆಡಿ ಬಾ ನನಕಂದ ತೆಂಗಿನ ನೀರಿನಲಿ ನಿನ ಅಂಗಾಲ ತೊಳೆದೇನು' ಎಂದಳು; 'ಮಕ್ಕಳಿರುವ ಮನೆಗೆ ಬೀಸಣಿಗೆ ಯಾಕ?' ಎಂದಳು. ಮುದ್ದು ಮಕ್ಕಳ ಆಟ, ಪಾಠ, ತುಂಟಾಟ, ಸಕ್ಕರೆ ಮಾತುಗಳು ಯಾರಿಗೆ ತಾನೇ ಬೇಡ. ಅದೊಂದು ಮುಗ್ಧಲೋಕ. 'ಮಗುವಿನ ಮಾತು'[೧೨೨] ಕವಿತೆಯಲ್ಲಿ ಓರ್ವತಾಯಿ ತನ್ನ ಮಗನ ತೊದಲುನುಡಿಯನ್ನು ಕೆಳುತ್ತ ಕೇಳುತ್ತ ಆನಂದದಿಂದ

ಮಗನನ್ನು ಎದೆಗಪ್ಪಿಕೊಂಡು ಮತ್ತೆ ಮತ್ತೆ ತನ್ನ ಕಂದನಿಗೆ ಮುತ್ತುಕೊಡುವಳು. ಆಗ ಮಗು ತಾಯಿಯನ್ನು ತನ್ನ ಮುಗ್ಧ ಮಾತುಗಳಿಂದ ಪ್ರಶ್ನಿಸುತ್ತದೆ:

ಕಂಡ ಕಂಡ ಜನರು ಎಲ್ಲ,
ಪಿಡಿದು ಎನ್ನ ಹಿಸುಕಿ ಹಿಸುಕಿ,
'ಮುತ್ತು ಕೊಡುವೆ ಕಂದ ನಿನಗೆ'
ಎಂದು ನುಡಿದು ಕೆನ್ನೆ ಪಿಡಿದು
ಅಪ್ಪಿ ಅಪ್ಪಿ ನೋಯಿಸುವರು.
ನೀನು ಇಂತು ಮಾಡುತಿರುವೆ
ಏನೆ! ಅಮ್ಮ ತರವೆ ನಿನಗೆ?
ಅತ್ತ ತಿರುಗಲಿತ್ತ ಸೆಳೆದು
ಕೂದಲೆಳೆದು ಕೆನ್ನೆ ಚಿವುಟಿ
ಬಹಳ ಹಿಂಸೆ ಕೊಡುವರೆನಗೆ
ಪೋಗಲಾರೆನಾರ ಬಳಿಗು
ನಿನ್ನ ಕಡೆಗೆ ಬರಲು ನಾನು
ನೀನು ಹಿಂಸೆ ಮಾಡುತಿರುವೆ'[೧೭೩]

ಮುದ್ದಿನ ಮುದ್ದೆಯಾಗಿರುವ ತನ್ನ ಕಂದನ ಬಾಲ ಭಾಷೆಯನ್ನು ಕೇಳಿ ಆ ತಾಯಿಗೆ ಇನ್ನಷ್ಟು ಆನಂದವಾಗುತ್ತದೆ. ಆಕೆ ತನ್ನ ಕಂದ ಕೇಳಿದ ಆ ಮುಗ್ಧ ಪ್ರಶ್ನೆಯನ್ನು ಮರೆತು ಅವನನ್ನು ಮತ್ತೆ ಅಪ್ಪಿ ಚುಂಬಿಸುವಳು. ಆಕೆ ತನ್ನ ಕಂದನಿಗೆ ಹೇಳುವಳು:

ಒಲವು ಯಾರದಲ್ಲ ಕಂದ!
ನಲ್ಮೆ ಬೇಡವೆಂಬೆ ನೀನು
ವಿಶ್ವದೊಲವು ನಿನ್ನೊಳಿಹುದು
ಜಗವ ಬಳಿಗೆ ಸೆಳೆಯುತಿಹುದು
ಬೇಡ ಬೇಡವೆಂಬುದರಿತು
ಎಲ್ಲ ಬಂದು ಚುಂಬಿಸುವರು
ಒಲವಿನಾಳವನರಿಯಲಳವೆ![೧೭೪]

ತಾಯಿಯ ಈ ಉತ್ತರ ಮಗುವಿನ ಬುದ್ಧಿಶಕ್ತಿಗೆ ಮೀರಿದ್ದು. ವಿಶ್ವದೊಲವಿನ ಬಗೆಗೆ ಆ ಮಗು ಏನುತಾನೆ ಅರ್ಥಮಾಡಿಕೊಂಡೀತು? 'ಒಲವಿನಾಳವನರಿಯಲಳವೆ?'[೧೭೫] ಎಂಬ ತಾಯಿಯ ಆಶ್ಚರ್ಯದ ಉದ್ಗಾರವೂ

ಆ ಮಗುವಿಗೆ ಹೇಗೆ ತಾನೆ ಅರ್ಥವಾದೀತು! ಕವಿತೆಯ ಕೊನೆಯಲ್ಲಿನ ತಾಯಿಯ ಉತ್ತರದ ಭಾಗ ಇಲ್ಲದಿದ್ದರೂ ಕವಿತೆಯ ಭಾವಕ್ಕೆ ಮುಕ್ಕಾಗುತ್ತಿರಲಿಲ್ಲ.

ಬಾಲಕನು ತನ್ನ ತಾಯಿಯೊಂದಿಗೆ ಸಂಭಾಷಿಸುವ ರೀತಿಯಲ್ಲಿ 'ಚಂದಿರ ಮಾಮ' ಕಥನದ ವಿನ್ಯಾಸವಿದೆ. ಲೋಕವನ್ನು ಬೆಳಗುವ ಚಂದ್ರನನ್ನು ದೇವನು ತೂಗುಬಿಟ್ಟ ದೀಪ ಎಂದು ತಿಳಿಯುವ ಒಬ್ಬ ಬಾಲಕನ ಕಲ್ಪನೆ ಈ ಕವನದ ವಸ್ತು. 'ಅಳಲಿರದ ನಗೆ ಸುರಿವ ವ್ಯಕ್ತಿ' ಎಂದು ಬಾಲಕ ಚಂದ್ರನನ್ನು ಮೆಚ್ಚಿಕೊಳ್ಳುತ್ತಾನೆ. ಚಂದ್ರ ಯಾವ ಕಾಲಕ್ಕೂ ಯಾರಿಗೂ ವಿಸ್ಮಯವೆ, ಮನಮೋಹಕವೆ. ಮಗುವಾಗಿ ನೋಡಿ ಚಂದ್ರನನ್ನು ಮೆಚ್ಚಿದ ಕವಿಗಳು ಹಲವರುಂಟು. 'ದೇವರ ಪೆಪ್ಪರಮೆಂಟಾಗಿ' ಕಂಡ ಕವಿಗಳೂ ಉಂಟು. ಈ ಕವಿತೆಯಲ್ಲಿ ಕವಿಯಾದರೂ ಶಿಶುಭಾವದಿಂದ ಚಂದ್ರನನ್ನು ಕಂಡಿದ್ದಾರೆ. ತಾಯಿಗೆ ಮಗು ಹೇಳುವ ಮಾತಾದರೂ ಸೊಗಸಾಗಿದೆ.

"ದಿನವೂ ಸಂಜೆಯಲಿ ಹಾಲಿನಲಿ ಮೀಯುವನೆ?
ಆ ಕಡಲ ಹನಿಗಳನು ಸುರಿಸುವನೆ ತಿರೆತಲಕೆ?[೧೨೬]

ಸಂಜೆ ಕಾಣುವ ಚಂದ್ರ ಅಷ್ಟು ಹಾಲಾಗಿ ತೋರಬೇಕಾದರೆ ತನಗಿಂತ ಅತಿಶಯವಾದುದರಲ್ಲಿ-ತಾನು ನೀರಿನಲ್ಲಾದರೆ, ಅವನು ಹಾಲಿನಲ್ಲಿ ಮಿಂದು ಮಡಿಯಾಗಿ ಬಂದಿರಬೇಕು, ಎಂಬ ಸಹಜ ಭಾವನೆ ಚೆನ್ನಾಗಿದೆ. ನಾವು ಕಾಣುವ ಶೀತಲ ಕಾಂತಿಯೆ ಅವನು ಆ ಕಡಲಲ್ಲಿ ಮಿಂದು ತಲೆ ಒದರುವಾಗ ಸಿಡಿದು ಬರುವ ತಂಪು ತುಂತುರು ಹನಿಗಳೆಂಬಂತೆ ಭಾಸವಾಗುತ್ತದೆ. ಹಿಮಗಡ್ಡೆಗಿರಿಯಾದರೂ ಅದರಲ್ಲಿ ಯಾವುದೋ

ಮಂಜು ಮುಸುಕಿದ ಅರೆಯು ಹಿಮಗಡ್ಡೆಯಾಗಿಯೂ
ತೇಲುತ್ತ ಬರುತಿಹುದೆ ಆಗಸಕೆ ಸೊಗಸಿತ್ತು;
ಆದರೂ ಅದಕಿಲ್ಲ ಇನಿತೊಂದು ಹಿರಿಬೆಳಕು
ಬಲುದೊಡ್ಡ ಬೆಳಕೊಂದು ಅಲ್ಲಡಗಿರಲೆಬೇಕು.[೧೨೭]

ಎಂಬ ಮುಗ್ಧಭಾವ ಚೆನ್ನಾಗಿದೆ.

ನಾನು ನಕ್ಕರೆ ತಾನು ಮುದದಿಂದ ನಗುತಿಹನು!
ನಾನು ಅತ್ತರೆ ಅವನು ಅಳುವಂತೆ ತೋರುವುದು
ನಾನು ಓಡಲು ಓಡಿ ಬರದಿರನು ಹಿಂದುಗಡೆ
ಪ್ರಿಯನಮ್ಮ ಎನ್ನೆದೆಯ ಗೆಳೆಯನೇ ಅಹುದಮ್ಮ![೧೨೮]

ಸದಾ ಸ್ಮಿತರುಚಿಯಾದ ಚಂದ್ರ ತನ್ನ ಗೆಲುವಿನಲ್ಲಿ ಹರ್ಷಗೊಂಡಿರುವುದು ಖಚಿತ. ಆದರೆ ತನ್ನ ಅಳಲಿಗೆ ಅಳಲು ತೋರುವಂತೆ ಭಾಸವಾಗುವುದು ಮೋದಕರವಾಗಿದೆ.

ಕಾರಿರುಳು ಕವಿದಿರಲು ದೀಪವೊಂದಿರಲೆಂದು,
ಮನೆಯಲ್ಲಿ ದೀಪಗಳ ಸೊಡರುಗಳ ಹಚ್ಚುತಿಹೆ!

ಬೀದಿಯಲಿ ಜನಕೆಲ್ಲ ಬೆಳಕಿರಲೆಬೇಕೆಂದು
ಸೇವಕನು ಕತ್ತಲಲಿ ದೀಪಗಳ ಹಚ್ಚುವನು![೧೭೬]

ಕತ್ತಲಲ್ಲಿ ದೀಪ ಹಚ್ಚಿಟ್ಟು ಅಂಗಳವನ್ನು, ಬೀದಿಯನ್ನು ಬೆಳಗುತ್ತಾರೆ. ಲೋಕಕ್ಕಾದರೂ ಬೆಳಕನ್ನು ಹಚ್ಚಿಟ್ಟವರು ಯಾರು? ಎಂಬ ಪ್ರಶ್ನೆ ಸಹಜವಾಗಿ ಇದೆ. ಚಂದ್ರನ ಬಗೆಗೆ ಮೂಡುವ ಇಷ್ಟು ಪ್ರೀತಿ ಸೂರ್ಯ ತಿರಸ್ಕಾರವಾಗಿ ಸಹಜವಾಗಿಯೆ ಆಗುತ್ತದೆ. ಆ ಮಗುವಿಗೆ ಅನಿಸುತ್ತದೆ, ಆ ದೇವರು ಚಂದ್ರನನ್ನಷ್ಟೇ ಅಲ್ಲದೆ ಸುಡುವ ಸೂರ್ಯನನ್ನೇಕಾದರೂ ಮಾಡಿದ? ಈ ತಂಪಾದ ಚಂದ್ರನೆ ಯಾವಾಗಲೂ ಇರಬಾರದೆ? ಬೇಕಾದರೆ ಆ ಸೂರ್ಯನನ್ನೇ ಗಡಿಪಾರುಮಾಡಲಿ! ಅಮ್ಮ ನೀನು ಬೆಳದಿಂಗಳಲ್ಲಿ ಕೈತುತ್ತು ಕೊಡುತ್ತಿದ್ದರೆ ಎಷ್ಟು ಸುಖವೆನಿಸುತ್ತದೆ! ಇಷ್ಟು ಸುಂದರನನು ಮಾಡಿಟ್ಟನೇ ಆ ದೇವರು! ಹೀಗೆಂದು ಪ್ರಶಂಶಿಸುವಾಗಲೆ ಹೊಳೆಯುತ್ತದೆ ಮಗುವಿಗೆ, 'ಅಹುದಮ್ಮ ಹಾಲುಕಡಲು ಹೆಪ್ಪುಕಟ್ಟಿತು, ಅಜ್ಜಿ ಹೇಳಿದ ಕತೆಯಂತೆ ಜೇವಕಳೆ ಅದಕ್ಕೆ ಬಂದುಬಿಟ್ಟಿತೇನೋ! ತನ್ನೆಲ್ಲ ಬೆಳಕನ್ನೂ ಕೊಟ್ಟ ದೇವರು, 'ಅಕಾಶದಲ್ಲಿ ತೇಲುತ್ತಿರು ಎಂದು ಚಂದ್ರನಿಗೆ ಹೇಳಿದನೇನೋ! ಎನಿಸುತ್ತದೆ. ಈ ಅನಿಸಿಕೆಯೆ ಮನೋಜ್ಞವಾಗಿದೆ. ಮಗುವಿನ ಈ ನುಡಿ ಕೇಳುತ್ತ ಮೌನವಾಗಿದ್ದ ತಾಯಿ ಅವನನ್ನು ಬಿಗಿಯಪ್ಪಿ ಮುದ್ದಿಡುತ್ತಾ ಹೇಳುತ್ತಾಳೆ:

"ಎಲೆ ಕಂದ ನಿನಗಿಂತ ಚಂದ್ರಮನು ಸೊಗಸೇನು?
ನಿನ್ನ ಸೊಬಗನು ಮೀರಲರಿವನೇ ಆ ಶಶಿಯು!"

ಆ ಚಂದ್ರಮನಾದರೊ

"ನಿನ್ನೊಳಿಹ ಶಾಂತಿಯನು ಆಗಸಕೆ ಸಾರುವನು!
ನಿನ್ನ ಸಿರಿಮೊಗದ ನಗೆ ಧರೆಗೆಲ್ಲ ತೋರುವನು"[೧೮೦]

ಎನ್ನುತ್ತಾಳೆ ತಾಯಿ. ತನ್ನ ಮಗುವಿನ ಮುಗುಳೆ ಬೆಳದಿಂಗಳಾಗಿದೆ ಎಂಬ ಪ್ರೀತಿಯಿರುವುದು ಸೊಗಸಾದದ್ದೆ ಸರಿ. ಚಂದ್ರ ದೇವರಾಗಿರುವುದಾದರೂ ಆ ಕಾರಣದಿಂದಾಗಿಯೇ, ಎಂಬುದು ಸಂತೋಷದಾಯಕವಾದದ್ದೆ.

"ನನ್ನ ಬದುಕಿನ ಇರುಳಲ್ಲಿ ನೀನೇ ಚಂದ್ರಿಕೆಯ ಮೂರ್ತಿ"[೧೮೧] ಎಂದು ತಾಯಿ ಮಗುವನ್ನು ಅಪ್ಪಿಕೊಳ್ಳುತ್ತಾಳೆ. ಹೀಗೆ ತಾಯಿ ಮಗುವಿನ ಸಂಭಾಷಣೆ ವೈವಿಧ್ಯಮಯವಾಗಿದೆ.

ಮಕ್ಕಳ ಚಿಂತನೆಯ ರಮ್ಯಲೋಕದ ಬಣ್ಣಗಾರಿಕೆ "ಮುಗಿಲು" ಎನ್ನುವ ಕವನದಲ್ಲಿ ಚೆನ್ನಾಗಿ ಮೂಡಿಬಂದಿದೆ. ಮಗು ಅಮ್ಮನ ಜೊತೆಗೆ ಮುಗಿಲಲ್ಲಿ ಹಾರಿಹೋಗುವ ಬಯಕೆಯನ್ನು ಬೆರಗುಗಣ್ಣುಗಳಿಂದ ಹೇಳುತ್ತಿದೆ:

ಮುಗಿಲೊಂದ ನಾ ಹಿಡಿದು ಗಾಡಿಯನು ಐರುವೊಲು
ನಾವುಗಳು ಅದನೇರಿ ಬಲುದೂರ ಪೋಗೋಣ
ಎಲ್ಲಿಗಾದರು ನಾವು ನಲಿನಲಿದು ಹೊರಡೋಣ

ಬಲುಬೇಗ ಹಿಂತಿರುಗಿ ಬರಬಹುದು, ಏನಮ್ಮಾ
ಆಗಸಕೆ ನಾವೇರಿ ಗಾಳಿಯೊಲು ಬಲುದೂರ
ಮನಬಂದ ತೆರದಲ್ಲಿ ಹಕ್ಕಿಗಳ ತೆರನಾಗಿ
ಹಾರಾಡಬಹುದಲ್ಲೆ![೧೮೨]

ಪ್ರಕೃತಿ ಮಕ್ಕಳನ್ನು ಆಕರ್ಷಿಸುವ ಬಗೆಯೆ ಸುಂದರತೆಯಿಂದ ಕೂಡಿರುತ್ತದೆ. ಮಗುವಿನ ಈ ಬಾಲಭಾಷೆಯ ರೀತಿಯನ್ನು ಕಂಡ ತಾಯಿ ಸುಮ್ಮನೆ ನಗುತ್ತ ನಿಂತುಬಿಡುತ್ತಾಳೆ. ಮಗುವಿನ ಮುಗಿಲಾಟದ ಕನಸು ಅವಳ ಬೆರಗನ್ನು ಹೆಚ್ಚಿಸುವಂತಿದೆ ಈ ಕವನದ ಭಾವಾರ್ಥ.

**ಕಥನಲೋಕ :**

ಕುರಿಗಳನ್ನು ತುರುಬಿ ಸಿಳ್ಳೆ ಹಾಕುತ್ತ ಹಾಡುತ್ತಿದ್ದ ಸಾಮಾನ್ಯ ಕುರುಬರ ಬದುಕು ದೊರೆಯ ಬದುಕಿಗಿಂತ ಹಿರಿಯದು ಎಂದು ದೊರೆಯ ಬಾಯಿಂದ ಹೇಳಿಸುವ ಒಂದು ಸುಂದರ ಕಥಾವಸ್ತು 'ದೊರೆ ಮತ್ತು ಕುರುಬ" ಕವನದ್ದು. ಒಬ್ಬ ಸಾಮಾನ್ಯ ಕುರುಬ ಇಷ್ಟೊಂದು ಸಂತೋಷದಿಂದಿರಲು ಕಾರಣವನ್ನು ಕೇಳಿದಾಗ-

ಏಕೆನ್ನ ಗೆಳೆಯ
ಅರಿವಾಗದುಂಟೆ?
ನೋಡುತ್ತ ಮುಗಿಲಿನಲಿ
ಮುಂಬೆಳಗು ತೋರುತಿಹ
ನೂರು ಕಿರಣದ ದೊರೆಯು!
ನೋಡಿತ್ತ ಕಣಿವೆಯಲಿ
ಹರಿವ ತಂಪಿನ ನೀರು
ಕೇಳದರ ಜುಳುಗಾನ
ನನ್ನ ಕೊರಳಿನ ತಾನ
ಗಿರಿಯ ಮಾಸಲು ಬಣ್ಣ
ತಿರೆಯ ಶ್ಯಾಮಲ ವರ್ಣ
ಗಿಡಬಳ್ಳಿ ಮರಗಳಲಿ
ಹೊಚ್ಚ ಹಸಿರಿನ ಹುಚ್ಚು?
ಬಿರಿದ ಹೂಗಳ ರಾಶಿ
ಕೇಳು ದುಂಬಿಯು 'ಜೇಂ'
ಕೇಳು ಕುರಿಗಳ ಕೊರಲು
ನಾಡಿನರಸಂಗೆಂತೊ

ಅಂತಂತೆ ನನಗು!

.....................

.....................

ದೊರೆಗಿಂತ ಕೀಳೇನು? [೧೮೩]

ಹುಡುಗನ ನುಡಿ ಮೆಚ್ಚಿದ ಅರಸ ದೇವರು ಕೊಟ್ಟದ್ದರಲ್ಲಿ ಸುಖವ ಕಾಣುವ ಹಿರಿಯ ಎಂದು ಕುರುಬನ ಸುಖಕ್ಕೆ ಕರುಬುತ್ತಾನೆ.

ವಿವಿಧ ರೀತಿಯ ಕಾವ್ಯ ಪರಿವೇಷಗಳನ್ನು ಸಾಧಿಸಿರುವ ಟಿ. ಎನ್. ಮಹದೇವಯ್ಯನವರ ಕಾವ್ಯ ಸಮೂಹದಲ್ಲಿ ಕಥನಗೀತೆಗಳೂ ಕನ್ನಡ ಕಥನಕಾವ್ಯ ಪ್ರಕಾರದ ಕೊರತೆಯನ್ನು ನಿವಾರಿಸುವ ನಿಟ್ಟಿನಲ್ಲಿ ಸಾಕಷ್ಟು ಸಹಾಯಕವಾಗಿದೆ. ಅಜ್ಜಿ ಮೊಮ್ಮಗನಿಗೆ ಕಥೆ ಹೇಳುವ ಧಾಟಿಯಲ್ಲಿ 'ಮುದ್ದಣ್ಣ' ಕಥನಗೀತೆ ಸಾಗಿದೆ. ಮುದ್ದಣ್ಣ ಎಂಬ ಹಳ್ಳಿಯ ಯುವಕ ಈ ಕವಿತೆಯ ನಾಯಕ.

ಎಪ್ಪತ್ತು ವರ್ಷಗಳು ಎದೆಯ ಮರೆಯೊಳಗಡಗಿ
ಹಳೆದಾದ ಸುದ್ದಿಯಿದು, ಬಣ್ಣಿಸುವ ಕತೆಯಲ್ಲ! [೧೮೪]

ಎಂದು ಕಥೆ ಪ್ರಾರಂಭವಾಗಿದೆ. ಕವಿಯ ಅಜ್ಜಿ ತೀರಿಕೊಂಡಾಗ ಆಕೆ ಹೇಳಿದ್ದ ಈ ಕತೆ ಕವಿಯ ಮನಸ್ಸನ್ನು ಆಳವಾಗಿ ತಟ್ಟುತ್ತದೆ. ಆ ಅಜ್ಜಿ ಕಾವೇರಿ ದಡದಲ್ಲಿ ಒಂದು ಬಡಹಳ್ಳಿಯವಳು. ಗಂಡನ ಮನೆಗೆ ಬರುವ ಮುನ್ನ ಅವಳಿದ್ದ ತವರು ತೆಂಕಣಸೀಮೆಯ ಗುಡ್ಡಗಾಡಿನ ಒಂದು ಹಳ್ಳಿ. ಅವಳು. ಇಬ್ಬರು ಮಕ್ಕಳು ಮುದ್ದಣ್ಣ, ಮಾದ. ಮುದ್ದಣ್ಣ ಹರೆಯದ ಹುಡುಗ. ಅವನು ಇದ್ದುದಾದರೂ ಹೀಗೆ:

ಹಿರಿಯಾತ ಮುದ್ದಣ್ಣ ಬಲು ನಗುಮೊಗದ ಕಲಿಯು!
ಕಟ್ಟಾಳು; ಬಿಗಿದ ಮೈ! ಮೊಗಬಣ್ಣ ತುಸುಕೆಂಪು!
ದುಡಿದಲೆದು ಬಿಸಿಲಲ್ಲಿ ತುಸುಕಪ್ಪು ಹಿಡಿದಿದ್ದ [೧೮೫]

ಜೊತೆಗೆ 'ಊರ ಹೆಣ್ಣುಗಳ ಮನ ಸೂರೆಗೊಂಡಿದ್ದ' ಮನಸ್ಸನ್ನು ತುಂಬಿದ್ದ ಮುದ್ದಣ್ಣನನ್ನು ಹಳ್ಳಿಯ ಹೆಣ್ಣುಮಕ್ಕಳು

ಈ ಚೆನ್ನ ಸಿಕ್ಕರಾನೀ ಬರಿಸ ನಡೆಸುವೆನು
ಊರ ಮಾರಿಗೆ ತೇರು, ನಾಕೈದು ಬಲಿ ಕೊಡುವೆ
ನನ ನಲ್ಲನಾದರೀ ಮುದ್ದಣ್ಣಮರುದಿನವೆ [೧೮೬]

ಎಂದು ಹರಕೆ ಹೊತ್ತುಕೊಂಡಿದ್ದು ಮುದ್ದಣ್ಣನ ತಾಯಿಯ ಕಿವಿಗೆ ಬಿದ್ದ ಸಂಗತಿಯೇ ಆಗಿತ್ತು. ಗ್ರಾಮೀಣ ಪರಿಭಾಷೆಯಲ್ಲಿಯೇ ಅಜ್ಜಿ ತನ್ನ ಮಗನ ಚೆಲುವನ್ನು ವರ್ಣಿಸಿದ್ದಾಳೆ. ಅವನು ನೋಡುವುದಕ್ಕಷ್ಟೇ ಮುದ್ದಲ್ಲ; ದುಡಿಮೆಯಲ್ಲೂ ನಿಪುಣ:

ಹದಿನಾರು ತುಂಬುತಲೆ ತೋಟಕಿಳಿದರೆ ಕಂದ
ಹನ್ನೆರಡು ಆಳುದ್ದದೆಂಟು ತೆಂಗಿನಮರವ

ಹತ್ತಿಳಿದು ಮೈಕಸುವ ತೋರಿರ್ದ ಮುದ್ದಣ್ಣ
ಶಕುನ ಚೆನ್ನಾಯ್ತೆಂದು ಇರುಳೆಲ್ಲ ಕದಿಯುವುದೆ'[೧೮೭]

ತಾಯಿ ತಂದೆಯರ ಕಣ್ಣಾದ ಮುದ್ದಣ್ಣ ಭೂಮಿಯ ಮಗನಾಗಿ ಬೆಳೆದ. ತಾಯಿಯ ಮಾತನ್ನು ಮೀರಿದವನಲ್ಲ. ಮಳೆಗಾಲದ ಒಂದುದಿನ ಹೊಲ ಉತ್ತು ಹೊತ್ತು ನೆತ್ತಿಗೆ ಬರಲು, ಬಾಯಾರಿ ಊರಿನ ತೊರೆಗೆ ಬಂದ. ನೀರು ಕುಡಿದು ವಿಶ್ರಮಿಸುತ್ತಿದ್ದಾಗ, ಅವನ ಕಿರಿಯ ಸೋದರ ಐದುವರ್ಷದ ಹಸುಳೆ ಮಾದ, ಮರಳುಗೂಡು ಕಟ್ಟಿ ಆಡಿಕೊಳ್ಳುತ್ತಿದ್ದವನು ಕಾಣೆಯಾದ. ಹುಡುಕಿದ ಮದಣ್ಣ ಎಂದು ಕೂಗಿದ. ಮಳೆಗಾಲದ ತೊರೆಯ ಪ್ರವಾಹಕ್ಕೆ ಸಿಕ್ಕಿ ಬಾಲಕ ಮಾದಣ್ಣ ಕೊಚ್ಚಿ ತೇಲುತ್ತಿದ್ದುದನ್ನು ಕಂಡು ಹೊಳೆಗೆ ಧುಮುಕಿದ. ಪ್ರವಾಹವನ್ನು ಎದುರಿಸಿ ಬಾಲಕನನ್ನು ಹಲ್ಲಲ್ಲಿ ಬಿಗಿಯಾಗಿ ಹಿಡಿದು ಸೆಳವಿಗೆ ಎದುರಾಗಿ ಈಜಿ ದಡ ಸೇರಿದ. ಗರುಡಿನಿಂಗ ಮಾಡಿದ್ದ ಈ ಸಾಹಸವನ್ನು ಬೇರಾರೂ ಮಾಡಲಾಗದೆ ಅನೇಕರು ಈ ಹಿಂದೆ ಕೊಚ್ಚಿಹೋಗಿದ್ದರು. ಅಂಥ ಸಾಹಸಿಯಾದ ಮಗನ ಬಗೆಗೆ ತಾಯಲ್ಲಿ ಇನ್ನಿಲ್ಲದ ಹೆಮ್ಮೆ. ಮಗನ ಆಯಸ್ಸು ವೃದ್ಧಿಸಲು ಗಿರಿಯ ಮಾದೇವನಿಗೆ ಹರಕೆ ಸಲ್ಲಿಸಿದಳು. ಊರಗೌಡನು ಮುದ್ದಣ್ಣನ ಸಾಹಸವನ್ನು ಹೊಗಳಿದ.

ಮುದ್ದಣ್ಣ ನಿಜವಾಗಿ ಸಾಹಸ ಜೀವಿ. ಬಂಡೆ ಗುಡ್ಡಗಳಲ್ಲಿ ಚಿರತೆಗಳ ಕಾಟವಿದ್ದರೂ ಹೆದರದೆ ಅಲೆದಾಡುತ್ತಿದ್ದ. ಆ ವರ್ಷ ಮುದ್ದಣ್ಣನ ಅಪಾರಶ್ರಮದ ಫಲವಾಗಿ ಒಳ್ಳೆಯ ಬೆಳೆ ಬಂದು ಇಮ್ಮಡಿಯ ಲಾಭ. ಸಂತಸದಿಂದ ಅಮ್ಮ ಹದಿನೆಂಟರ ಮಗನಿಗೆ ಮದುವೆ ಮಾಡುವ ಸಂಕಲ್ಪ ಮಾಡಿದಳು ಗಂಡ ಈ ಮಾತಿಗೆ ಒಪ್ಪಿ

"... ಹೊಸ ಸೀರೆ ಉಡುವಾಸೆ
ಸೊಸೆಯ ಒಗೆತನದಲ್ಲಿ ಬಿಸಿಯಡಿಗೆ ಉಣುವಾಸೆ
ಮಗನ ಮಕ್ಕಳನೆತ್ತಿ ಮುದ್ದಿಡುವ ಮನದಾಸೆ
ಹಿಂಗದಲೆ ಹೆಂಗಳಿಗೆ"[೧೮೮]

ಎಂದು ಪರಿಹಾಸ ಮಾಡಿದರು. ಪಕ್ಕದೂರಿನ ಗೌಡ ಮಗಳನ್ನು ಕೊಡಲೊಪ್ಪಿದ, ಮಾತುಕತೆಯೂ ನಡೆಯಿತು.

'ಆ ಹುಡುಗಿ ಮುದ್ದನ ಹಾಗೆ
ಮುದ್ದು ಬಲು ಚೆಲುವೆ ಕೆಲಸದಲಿ ಬಲು ಜಾಣೆ
ಹಿರಿಯರಲಿ ಅತಿಭಕ್ತಿ ಒಳ್ಳೆ ನಡೆಯವಳವಳು.'[೧೮೯]

ಹತ್ತುಗಾವುದ ವಲಯದ ಹನ್ನೆರಡು ಹಳ್ಳಿಗಳಿಗೂ ಆಮಂತ್ರಣ ಹೋಗಿತ್ತು. ಮುದ್ದಣ್ಣ ನೋಡಿದವರ ಕಣ್ಣು ತುಂಬುವಂತಿದ್ದ.

ಏನು ರೂಪದು ಆಗ ಏನು ಕಳೆ ಬಂದಿತ್ತೊ!
ಸಂಪಿಗೆಯ ಮೈಬಣ್ಣ ರಕ್ತ ಮುಕ್ಕಳಿಸಿತ್ತು

ಉಬ್ಬಿದೆದೆಗಳ ವೀರ; ಅರಸನೂ ಅಂತಿರನು
ಅರಗುವರನೆಂದರೂ ಸಲ್ಲುವಂತಿದ್ದ.[೧೯೦]

ತಾಯಿಗೆ ಮಗನನ್ನು ಎಷ್ಟು ನೋಡಿದರೂ ಹೇಗೆ ವರ್ಣಿಸಿದರೂ ಸಾಲದು ಇದನ್ನು ಗಮನಿಸಿ ಗಂಡ-

'ಏನು ನೋಡುವಿರ್ರಾಗೆ
ದೃಷ್ಟಿಯಾದೀತಿರಲಿ ಬಾ ಒಳಗೆ! ಏನಾಸೆ
ಮದುವೆ ಮಂಟಪದಲ್ಲಿ ಕಣ್ತುಂಬ ಮನದಣಿಯೆ
ನೋಡಿ ಹಿಗ್ಗುವೆಯಂತೆ'.[೧೯೧]

ತಾಯಿ ತಂದೆಯರಿಗೆ ಪ್ರಾಪ್ತವಾದ ಸಂತೋಷ ದೀರ್ಘಕಾಲ ಉಳಿಯದಂತಹ ಆಕಸ್ಮಿಕ ಘಟನೆಯೊಂದು ನಡೆದುಹೋಯಿತು. ಅಂದು ಹೊತ್ತಿಳಿದು ಬೈಗಾಯ್ತು' ತಾಯಿಗೆ ತವಕ. ಹೊಲದ ಕೆಲಸಕ್ಕೆ ಹೋದ 'ಮುದ್ದಣ್ಣ ಬರಲಿಲ್ಲ ಕತ್ತಲಾಗುತ್ತ ಬಂತು'[೧೯೨] ಎಂದು ನಡುಮನೆಯ ಹೊಸ್ತಿಲು ದಾಟುತ್ತಿದ್ದಂತೆ, ಕಿರಿಯಮಗ ಮಾದಣ್ಣ ಓಡಿಬಂದು, ಅತಂಕದ ವಿಷಯವನ್ನು ಹೇಳಿದ. ಇಬ್ಬರು ಆಳುಗಳು ಮುದ್ದಣ್ಣನನ್ನು ಎತ್ತಿತಂದರು. ತಾಯಿ ಓಡಿದಳು, ಚೀರಿದಳು, ಮೂರ್ಛೆಹೋದಳು. ಎದ್ದು ಜನಸಂದಣಿಯಲ್ಲಿ ಕಣ್ಣುತೂರಿದಳು. ಅವಳು ಕಂಡ ದೃಶ್ಯ ಹೃದಯ ವಿದ್ರಾವಕ:

ಮೈಯೆಲ್ಲ ರಕ್ತದಲಿ ನಂದಿತ್ತು ಕಾಲಿಂದ
ತಲೆತನಕ, ಸುರಿದ ರಕುತವು ಬಳಿಯೆ ನಿಂತಿತ್ತು
ಕಾಲುವೆಯ ನೀರಂತೆ.'[೧೯೩]

ಅಮ್ಮ ಏನೊ ಭೀತಿಗೆ ಸಿಕ್ಕಿ ಏನೋ ಉನ್ಮಾದದಲ್ಲಿ ಮೈಮರೆತ ಹುಚ್ಚಿಯಂತೆ ದಿಕ್ಕುಗೆಟ್ಟು ನೋಡಿದಳು.

ಮುದ್ದಣ್ಣ ಈ ಸ್ಥಿತಿಗೆ ನಡೆದ ಕಥೆ ಇಷ್ಟು:

ಅಂದು ಸಂಜೆಯ ಹೊತ್ತು ದನದ ಮೇವಿಗದಷ್ಟು
ಹುಲ್ಲು ಕೆತ್ತಲು ಮುದ್ದ ಬೇಲಿಯೊಂದರ ಬಳಿಯೆ
ಹುಲ್ಲು ಕೆತ್ತುತಲಿರಲು ಒಂದು ಕಿರುಬನು ಬಂದು
ಕುತ್ತಿಗೆಯ ಬಗೆದಿತು.[೧೯೪]

ತಾಯಿಯ ಗೋಳು ಆಕಾಶ ಮುಟ್ಟಿತು. ಆ ನೋವಿನಲ್ಲಿ ಕೂಡ ಮುದ್ದಣ್ಣ:

"ಅಳಬೇಡವಮ್ಮ ನಾನಳಿದರೇನಂತೆ
ವರುಷ ಹುಟ್ಟುವ ಮೊದಲೆ ಹುಟ್ಟುವನು ಮಗದೊಬ್ಬ
ನನ್ನ ಹೆಸರನು ಮೀರಿ ಬದುಕುವಂತಹನು'[೧೯೫]

ಎಂದು ಸಮಾಧಾನ ಹೇಳಿ ಮುದ್ದಣ್ಣ ಕಡೆಯ ಉಸಿರು ಎಳೆದ. ಊರ ಜನವೆಲ್ಲ ನಿದ್ದೆಗೆಟ್ಟು ಜಗಲಿ ಬಳಿ ಕುಳಿತು ರಾತ್ರಿ ಕಳೆಯುತ್ತಾರೆ. ಅಷ್ಟು ಪ್ರೀತಿ ಸಂಪಾದಿಸಿದ ಮುದ್ದಣ್ಣ ಕಿರುಬನ ಆಕ್ರಮಣಕ್ಕೆ ತುತ್ತಾಗಿ, ಅಕಾಲ ಮರಣಕ್ಕೆ ತುತ್ತಾದ.

ಈ ದುರಂತ ಕಥೆಯನ್ನು ಹೇಳಿದ್ದು ಅಜ್ಜಿ. ಮೊಮ್ಮಗನಾದ ಈ ಕವಿ ಆಕೆಯ ಮನೋಧರ್ಮದಲ್ಲಿ ಹಿಡಿದಿಟ್ಟಿದ್ದಾರೆ. ಕಥೆಯ ಪ್ರವಾಹವನ್ನು ವಿವಿಧ ಹಂತಗಳಲ್ಲಿ ತಿರುಗಿಸಿ ಓದುಗರ ಆಸಕ್ತಿಯನ್ನ ಕೆರಳಿಸುವಲ್ಲಿ ಇವರು ಯಶಸ್ವಿಯಾಗಿದ್ದಾರೆ.[೧೯೬]

**'ಹಂಪೆಯ ಕನಸು'** ಎಲ್ಲ ಭಾಷಾಪ್ರಿಯ ಕವಿಗಳಿಗೆ ಬರುವ ಒಂದು ಉನ್ಮಾದದ ಹಳವಂಡದ ಫಲ. ಹಂಪೆ ಕನ್ನಡ ಸಂಸ್ಕೃತಿ, ರಾಜಕೀಯ ಸತ್ವ, ಸಮಾಜ ಸಂಸ್ಕೃತಿ, ಪರಾಕ್ರಮ ಮತ್ತು ಉತ್ಸಾಹ ಶೀಲತೆಗಳ ಸಂಕೇತವಾಗಿ ನಿಲ್ಲುವ ಒಂದು ಉರಿಮಂಡಲ. ಇದರ ಪತನದೊಂದಿಗೇ ನಮ್ಮೆಲ್ಲರ ಕನಸುಗಳೂ ಕುಸಿದು ಬಿದ್ದು ನಾವು ತಲೆ ಎತ್ತದಂತಾಗಿದೆ ಎಂದು ಬಿ.ಎಂ.ಶ್ರೀ, ಬೇಂದ್ರೆ, ಕುವೆಂಪು ಎಲ್ಲರೂ ವ್ಯಥೆಪಟ್ಟಿದ್ದಾರೆ. ಈ ಕವಿತೆಯಲ್ಲಿಯೂ ಆ ವ್ಯಥೆ ಬಿಂಬಿತ್ತವಾಗಿದೆ. ನಾಟಕೀಯ ಸಂದರ್ಭಗಳನ್ನು ಬಳಸಿಕೊಂಡು ಕವಿ ಹಂಪೆಯ ರುದ್ರ ಭವ್ಯ ಚಿತ್ರಗಳೆರಡರ ನೆನಪನ್ನು ಒಳಬೆರಸುತ್ತಾರೆ. ಇಡೀ ಕನ್ನಡ ಸಾಹಿತ್ಯ, ಸಂಸ್ಕೃತಿ, ಕವಿ ಪರಂಪರೆ ರಾಜಶಾಹಿಗಳನ್ನೆಲ್ಲ ಮೆರವಣಿಗೆ ಮಾಡಿಸುತ್ತಾರೆ.

'ಹಾಳೂರ ಸಾಲಿನಲಿ ನಿಂತ ಸಾವಿರ ಬಿರುಕು
ಮುರುಕು ಮಂಟಪಗಳಲಿ ನಿಟ್ಟುಸಿರೆ ಕೇಳುತಿದೆ[೧೯೭]

ಎಂಬ ಒಂದು ಹೆಪ್ಪುಗಟ್ಟಿದ ಮಾತು ಈ ಎಲ್ಲ ಪತನಗಳನ್ನು ಸಮರ್ಥವಾಗಿ ಧ್ವನಿಸುತ್ತದೆ.

ಟಿ.ಎನ್. ಮಹದೇವಯ್ಯನವರ ದೀರ್ಘಕವಿತೆಗಳಲ್ಲಿ 'ಹಂಪೆಯ ಕನಸು' ಅತ್ಯಂತ ಶ್ರೇಷ್ಠವಾದುದು. ಅವರ ಕನ್ನಡ ನಾಡಿನ ಹಿರಿಮೆಯ ಬಗೆಗಿನ ಅಮಿತ ಗೌರವ ಹಾಗೆಯೇ ಮೂರುಶತಮಾನಗಳಲ್ಲಿ ರಾಜ್ಯವನ್ನಾಳಿದ ರಾಜಮನೆತನಗಳು ಹಾಗೂ ಸಾಮ್ರಾಜ್ಯವನ್ನು ಅನಾಥರನ್ನಾಗಿ ಮಾಡಿಹೋದದು ದೀರ್ಘಕವಿತೆಯಲ್ಲಿ ಮಡುಗಟ್ಟಿದೆ. ಹಂಪೆಯನ್ನು ಕೇಂದ್ರನೆಲೆಯಲ್ಲಿಟ್ಟುಕೊಂಡು ಕರ್ನಾಟಕ ರಾಜ್ಯ ರಮಾರಮಣರ ಅಳಿವಿನಿಂದ ಭಗ್ನಗೊಂಡ ಕನಸಿನ ಚಿತ್ರದೊಂದಿಗೆ ಆ ವೈಭವದ ದಿನಗಳ ಚಿತ್ರಗಳ ಸಾಲು ಸಾಲೇ ಹಾದುಹೋಗುತ್ತವೆ. ಇಲ್ಲಿ ಸುಂದರ ಸ್ವಪ್ನಗಳ ಜೊತೆಗೆ ದುರಂತದ ದಾರುಣತೆಯ ಸ್ವಪ್ನಗಳೂ ಬಂದಿವೆ. ಕವಿಯ ನೆನಪಿನಾಳದಲ್ಲಿ ಬಂದು ತೇಲಿ ಹೋಗುವ ಹಾಳುಸುರಿಯುವ ಈ ನೆನಪುಗಳು ಕವಿತೆಯ ಎದೆಯಲ್ಲಿ ಹೆಪ್ಪುಗಟ್ಟಿವೆ. ಕಿತ್ತು ತಿನ್ನುವ ನೆನಪುಗಳ ಬುತ್ತಿಯಲ್ಲಿ ಕವಿ ಹೂತುಹೋಗದೆ ಆಶಾವಾದಿಯಾಗಿ ನಾಳಿನ ಭವ್ಯ ಕನಸುಗಳನ್ನು ಕಾಣುವನು. ಬಹುಶಃ ಈ ಕವಿತೆ ಸ್ವಾತಂತ್ರ್ಯಪೂರ್ವದ ರಚನೆಯಿರಬಹುದು. ಸ್ವಾತಂತ್ರ್ಯದ ಜೊತೆಗೆ ನಾಡನ್ನು ಕಟ್ಟುವ ನವೋದಯ ಕಾಲದ ಕವಿಗಳ ಪ್ರತಿನಿಧಿಯಾಗಿ ಜನತೆಗೆ ಕರೆಕೊಡುವನು:

ಓ ನನ್ನ ನಾಡವರೆ! ಜಡನಿದ್ದೆಯಿಂದೇಳಿ
ಬೆಟ್ಟ ಪರ್ವತಸಾದು ಗಿರಿಕಣಿವೆ ದರಿಗಳಿ
ಕುಳಿತು ಜಪಿಸುವ ಜೋಗಿ ತಪವಿರಲಿ ಮೇಲೇಳು!
ಕಬ್ಬಿಗರೆ ಕಾರ್ಮಿಕರೆ ಶ್ರೀಮಂತ ಸಾಮಂತ
ಬಡತನವೊ ಕೆಡುತನವೊ ಪಾಪಿಗಳೊ ಕರ್ಮಿಗಳೊ
ಎಲ್ಲ ಬನ್ನಿರಿ ಇಂದು ಒಂದು ನಾಡವರೆಂದು[೧೯೮]

ಕವಿ ಹಳೆಯ ನೆನಪುಗಳ ಬೂದಿಯಲ್ಲಿ ಹೊಸಹುಟ್ಟು ಪಡೆವ ಫೀನಿಕ್ಸ್ ಹಕ್ಕಿಯಂತೆ ಕಾಣುವನು. ಕವಿಯ ಕಣ್ಣಿನ ಮುಂದೆ ನಾಳಿನ ಭವ್ಯ ಕನಸು:

ಮಕುಟಗದ್ದುಗೆಯೆಲ್ಲ ಹುಟ್ಟುಸಾವಿನ ಸುಳಿಗೆ
ಸಿಲ್ಕಿ ಸರದಿಯ ಮೇಲೆ ಮೂಡುವುವು ಮುಳುಗುವುವು
ನಾಶದಿಂದಲೆ ಹುಟ್ಟು. ಹೊಚ್ಚ ಹೊಸತರ ಗುಟ್ಟು
ಅಳಿದ ನೆನ್ನೆಗೆ ಮರುಗಿ ಬರುವ ನಾಳೆಗೆ ತೆಗಳಿ
ಮಲೆತು ಮೈಮರೆಯದಿರು. ಕಳೆದ ನೆನ್ನೆಯ ಕಂಡೆ:
ಬರುವ ನಾಳೆಯ ನೋಡು! ಕಾಳರಾತ್ರಿಯು ಬಂದು
ತಮ ತುಂಬಿತಿಂದೆಂದು ಸೋತು ಕೈಬಿಡಬೇಡ!
ಉದಯದಾಗಸದಲ್ಲಿ ಉಷೆ ತರುವ ಚೆಲ್ವಿನಲಿ
ಆಸೆ ಉತ್ಸಹಗಳು ನೂರಾಗಿ ಚಿಮ್ಮುತಿವೆ
ಮುಂದೆ ಬಹ ಸಾಮ್ರಾಜ್ಯಕಿಂದೆ ನಾಂದಿಯ ಹಾಡು![೧೯೯]

ಕವಿಯ ನಾಳಿನ ಭವ್ಯ ಕನಸು ಹಿಂದಿನ ಭಗ್ನ ಕನಸನ್ನು ತಳ್ಳಿಹಾಕಿದೆ. ಯಾವ ಹಂಪೆಯ ಕನಸು ಭಗ್ನ ಮಂದಿರವಾಯಿತೊ ಆ ಕನಸು ಕರಗಿ ಈಗ ಹಾಳುಹಂಪೆಯಲ್ಲೇ ಕವಿ ನಾಳಿನ ಕನಸು ಕಾಣುವನು. ಈ ಕವಿತೆಯ ಕೊನೆಯಲ್ಲಿ ನಾಳಿನ ಕನಸು ಚಗುರಿದೆ. ಕವಿಯ ಎದೆಯ ಚೈತನ್ಯ ಕನ್ನಡಕ್ಕೆ ಜಯವೆನ್ನುತ್ತಿದೆ:

ವಿರುಪಾಕ್ಷದೇಗುಲದ ಘಂಟೆ 'ಘಣಘಣ' ವೆಂದು
ಮೊಳಗಿ ಘೋಷಿಸಿ ನುಡಿಯೆ 'ಕನ್ನಡಕೆ ಜಯ' ವೆಂದು
ಗಿರಿಕಣಿವೆ ಬಯಲೆಲ್ಲ ದನಿಯಿತ್ತು ಮೊಳಗಿಸಿತು
"ಕನ್ನಡಕೆ ಜಯ" ವೆಂದು "ಜಯವು ಕನ್ನಡ" ಕೆಂದು[೨೦೦]

ಭವಿಷ್ಯದ ಶುಭಸೂಚನೆಯನ್ನು ವಿರುಪಾಕ್ಷದೇವಾಲಯದ ಘಂಟಾನಾದದಲ್ಲಿ ಕವಿ ಕಾಣುವನು; ನಾಳಿನ ಕನ್ನಡದ ಭವಿಷ್ಯವನ್ನು ಕಾಣುವನು. ಇದು ನವೋದಯಕಾಲದ ಕವಿಗಳ ಆಶಾವಾದ. ಆ ಕವಿಗಳು ಕಂಡ ಭವ್ಯಕನಸಿನ ಚಿತ್ರವನ್ನು ನಾವು ನವೋದಯದ ಪ್ರತಿನಿಧಿಯಾದ ಮಹದೇವಯ್ಯನವರಲ್ಲಿ ಕಾಣುವೆವು.

ಟಿ.ಎನ್. ಮಹದೇವಯ್ಯನವರ ದೀರ್ಘಕವಿತೆಗಳಲ್ಲಿ 'ಹುಚ್ಚು ರಸಿಕ' 'ವಿರಹಿಣಿ' 'ಒಂದಿರುಳು' 'ಶ್ರಮಣಗುಡ್ಡ' 'ರಾಧಾಕೃಷ್ಣ' ಗಮನಾರ್ಹವಾದವುಗಳು.

**ಶೋಕ ಲೋಕ:**

ಪತ್ನಿಯ ಸಾವು ಕವಿಯ ಅಗಲಿಕೆಯ ಯಾತನೆ ಇಲ್ಲಿ ಗೋಳಾಗಿ ಹರಿದಿದೆ. ಪತ್ನಿಯ ಸಾವನ್ನು ಕವಿ ಬಿರುಗಾಳಿಯ ಅಬ್ಬರಕ್ಕೆ ಸಿಡಿಲು ಗುಡುಗು ಮಿಂಚುಗಳಿಗೆ ಜಡಿಮಳೆಗೆ ಹೋಲಿಸಿದ್ದಾನೆ. ಇಂಥ ಸಂದರ್ಭಗಳಲ್ಲಿ ತೊರೆಯುಕ್ಕಿ ಎಂದು ತನ್ನ ಬಿಡುಗುಡಿಸಲು ಕೊಚ್ಚಿ ಹೋಯಿತು ಎಂದು ಮಾರ್ಮಿಕವಾಗಿ ಕವಿ '**ಎಲ್ಲಿ ಹೋದೆ**' ಎಂಬ ಕವಿತೆಯಲ್ಲಿ ಕೊರಗಿದ್ದಾರೆ.

ಬಾಳ ಕಡಲಿನ ಮೇಲೆ
ಕೋಟಿ ಮೀಚಿಯ ಮಾಲೆ!
ಹುಟ್ಟು ಹಾಕದ ದೋಣಿ
ಕಾರ್ಮುಗಿಲ ನಭದಲ್ಲಿ
ಈ ಕಾಳರಾತ್ರಿಯಲ್ಲಿ
ಕೈಬಿಟ್ಟೆಯೋ ತರಳೆ! [೨೦೧]

ಎಂದು ನನ್ನ ಒಬ್ಬನನ್ನೆ ಬಿಟ್ಟು ಹೋಗಿರುವೆ, ನೀನಿಲ್ಲದ ಲೋಕ ಇದೇ ಶೂನ್ಯವಾಗಿದೆ ಎಂದು ಕವಿಯು ಪತ್ನಿಯ ಸಾವಿನ ಬಗ್ಗೆ ಕೊರಗುವ ಮಾತು ಅವರ ಶೋಕ ಗೀತೆಗೆ ಹಿನ್ನೆಲೆಯಾಗಿದೆ.

ಟಿ. ಎನ್. ಮಹದೇವಯ್ಯನವರು ತಮ್ಮ ಮೊದಲ ಸತಿ ತೀರಿಕೊಂಡಾಗ ಅವರನ್ನು ಸಮಾಧಿ ಮಾಡಿದಾಗ ಬರೆದ "**ಆ ಸಮಾದಿ**' ಎಂಬ ಕವಿತೆ ಕನ್ನಡದಲ್ಲಿ ಒಳ್ಳೆಯ ಶೋಕಗೀತೆಗಳಲ್ಲಿ ಒಂದಾಗಬಲ್ಲದು.

ಬರಿಗಣ್ಣಿಗೆ ಚಂದ್ರ ಕಾಣುವಷ್ಟು ಢಾಳಾಗಿ ಜ್ಞಾತಾಜ್ಞಾತ ನಕ್ಷತ್ರಗಳು ಕಾಣುವುದಿಲ್ಲ. ಆದರೆ ಅವು ಸಮುದಾಯದ ಬೆಳಕಿನಿಂದ ಆಕಾಶಕ್ಕೆ ಚಂದ್ರನಿಗೆ ಮೆರಗು ಕೊಡುತ್ತವೆ. ನಮ್ಮ ಗೃಹಿಣಿಯರೂ ಈ ಬಗೆಯ ತ್ಯಾಗ ಜೀವಿಗಳೇ, ತಮ್ಮನ್ನು ಮರೆಸಿಕೊಂಡು ಗಂಡ ಮತ್ತು ಮಕ್ಕಳನ್ನು ಮೆರೆಸುವವರು.

ಈ ಗೃಹಿಣಿಯರ ಹಿರಿಮೆಯನ್ನು ಈ ಕವಿತೆ ಸಮರ್ಥವಾಗಿ ಚಿತ್ರಿಸುತ್ತದೆ. ನಮ್ಮಲ್ಲಿ ವೈಯಕ್ತಿಕ ನೋವನ್ನು ಚಿತ್ರಿಸುವ ಶೋಕಗೀತೆಗಳೇ ಕಡಿಮೆ. ಸುಜನಾ ಹೇಳುವಂತೆ ಇದೊಂದು ವಿಶಿಷ್ಟ ಶೋಕಗೀತೆ ತೀರಿಕೊಂಡ ಸತಿಯ ನೆನಪಿಗೆ ಅರ್ಪಿಸಿದ ಶ್ರದ್ಧಾಂಜಲಿ ಈ ಕವಿತೆ:

"ನೀರವ ರಾತ್ರಿಯಲಿ ತಾರೆ ಹೂಸುರಿಸುತಿವೆ"
ಚಳಿಗಾಳಿ ಬೀಸುತಿದೆ, ತಿಂಗಳಿನ ಬಿಳಿಬಯಲು
ಮಣ್ಣು ಮಂಚವನೇರಿ ಮಲಗಿದಳು ನನ್ನವಳು.
ಹಸಿವು ತೃಷೆಯೊಳಗೆದ್ದು ಹಾಲು ಕೇಳುವಳೇನೊ?

ಬಿಸಿಲು ಧಗೆ ಸಂಕಟದಿಂ ತಂಗಾಳಿ ಬೀಸುವುದೊ?
ಚಳಿ ಕೊರೆತ! ಉಡುವ ಬಟ್ಟೆಯು ಕೂಡ ಬಹು ತೆಳುವು
ಆರುಹೊದಿಕೆಯನಿಟ್ಟು ಮಲಗೆಂದು ತವಿಸುವರು?
ನೊಂದ ನೋವಿಗೆ ಮರುಗಿ ಕೈಹಿಡಿದು ತಕ್ಕೈಸಿ
ಮನದಳಲು ಕಳೆಯುವರೆ? ಕಂಬನಿಯ ಸೂಸುವೆಡೆ
ಕೈಹಿಡಿದು ಕಣ್ಣೊರಸಿ ಅರಸಿ ಅಳಬೇಡಿನ್ನು
ನಾನಿಲ್ಲವೇ ಎನಲೆ ಆರಿಗರುಹಲಿ ಇನ್ನು!
ಓ ಮರವೇ!
ಏಕಾಂಗಿಯಾಗಿಂತು ನಿಂತ ನಿನ್ನನು ನಂಬಿ
ಹತ್ತು ವರ್ಷದ ಬದುಕ ಮಸಣವಾಗಿಹ ಅಸುವ
ನಿನ್ನ ಮಡಿಲೊಳಗಿಟ್ಟು ಇನ್ನು ಹೋಗುವೆನಣ್ಣಾ[೨೦೨]

ಬೆಟ್ಟದ ಇಳಿಬಯಲು ತುದಿ ಬಂಡೆಯ ಆಚೆ ಒಂದು ಮರ ಅದರ ಅಡಿಯ ನೆರಳಲ್ಲಿ ಆಕೆಯ ಗೋರಿ. ಅಲ್ಲಿ ಮಣ್ಣು ಮಂಚವನೇರಿ ಆಕೆ ಮಲಗಿದ್ದಾಳೆ. ಭೇಟಿಕೊಟ್ಟ ಕವಿ ಆ ಮರಕ್ಕೆ ತನ್ನ ದುಗಡವನ್ನೇ ಹೇಳಿಕೊಳ್ಳುತ್ತಿರುವಂತೆ ಈ ಪದ್ಯದಲ್ಲಿ ಚಿತ್ರಿತವಾಗಿದೆ.

ಕವಿ ಆಕೆಯ ಸಾಹಚರ್ಯದ ಮಹತ್ವವನ್ನು ಈ ರೀತಿ ವರ್ಣಿಸುತ್ತಾರೆ.

ಸಿರಿಯಲ್ಲಿ ಮೈಮೂಡಿ ಬಂದ ಭಾಗ್ಯವು ಅವಳೆ!
ದುಗುಡದಲ್ಲಿ ಸೈಪಿತ್ತು ಕಣ್ಣೊರೆಸಿ ಕರೆದವಳು
ಒಂದಿರುಳು ಕೈ ಬಿಡದೆ ನನ್ನುಸಿರು ಅಸುವೆನಿಸಿ
ಬೆನ್ನು ಬಿದ್ದವರಂತೆ ಕಾಯ್ದು ಕಾಪಿಟ್ಟವಳು[೨೦೩]

ಪತ್ನಿ ಹಿತಕಾರಿಣಿ, ಬೆನ್ನು ಬಿದ್ದವರಂತೆ ಕಾಯ್ದು ಕಾಯುವವಳು, ಇಂಥವಳನ್ನು ಹೇಗೆ ನೋಡಿಕೊಳ್ಳಬೇಕು. ಕವಿ ಮರಕ್ಕೆ ಹೇಳುತ್ತಾನೆ:

ಓ ಮರವೆ
ಬೇಸಿಗೆಯ ಬಿಸಿಲಲ್ಲಿ ತಂಗಾಳಿ ತೆರಪು ಕೊಡು
ಕುಳಿದೆಲರು ತೀಡುವೆಡೆ ಬಿಸಿಯುಸಿರನೂದು!
ಮಳೆ ಗುಡುಗು ಸಿಡಿಲು ಬರೆ ಕೊಡೆ ಹಿಡಿದು ಮರೆಮಾಡು[೨೦೪]

ಸತ್ತವರ ಬಗೆಗೆ ಉಳಿದವರು ಎಷ್ಟೇ ಹೇಳಿದರು ಅವರೆಲ್ಲ ಅತ್ತು ದೂರ ಸರಿಯುವ ಜನ ಎಂಬುದನ್ನು ಕವಿ ಗುರಿತಿಸಿದ್ದಾರೆ. ಈಪಟ್ಟಿಗೆ ತಮ್ಮನ್ನು ಸೇರಿಸಿಕೊಳ್ಳುವಷ್ಟು ವಸ್ತುನಿಷ್ಠತೆ ಅವರಲ್ಲಿದೆ. ಆದರೆ ಮರ ಇವರೆಲ್ಲರ ಪ್ರತಿನಿಧಿಯಾಗಿ ಆಕೆಯನ್ನು ನೋಡಿಕೊಳ್ಳಲಿ ಎಂಬ ಆಶಯ ಇಲ್ಲಿಯದು.

ಮುತ್ತೈದೆ, ನಾಲ್ಕು ಮಕ್ಕಳ ತಾಯಿ ನನ್ನವಳು.
ನಿನ್ನೊಡಲ ಮರೆಯಲ್ಲಿ ಮಲಗಿ ನಿದ್ರಿಸುತಲಿಹಳು!
ಬೆಚ್ಚಿ ಬೆದರಿದ ತೆರದಿ ಸೈಪಿಟ್ಟು ನೆರವು ಕೊಡು
ಭಾಗ್ಯವಂತಳು ನಾರಿ, ಸಿರಿಯ ಚೆಲ್ಲುತ ಬಹಳು!
ಅವಳಿದ್ದ ಮನೆ ಸಗ್ಗ, ಅವಳ ನುಡಿ ಮಂಗಳವು!
ಆವ ತೆರದಲು ನೀನು ಕೈ ಬಿಡದೆ ನೋಡುತಿರು![೨೦೫]

ಪತ್ನಿಯ ವ್ಯಕ್ತಿತ್ವ ಪತಿಯನ್ನು ಹಿಡಿದಿಟ್ಟಿದೆ. ಆಕೆ ಭಾಗ್ಯವಂತಳು, ಅವಳಿದ್ದ ಮನೆ ನಗ್ಗೆ ಅವಳ ನುಡಿ ಮಂಗಳ, ನಾಲ್ಕು ಮಕ್ಕಳ ತಾಯಿ ಸಿರಿಯನ್ನು ಚೆಲ್ಲುತ್ತ ಬರುತ್ತಾಳೆ ಎಂದು ಕವಿ ಹೇಳುತ್ತಾನೆ. ಆಕೆಯ ಸಮಾಧಿಗೆ ಹೋಗಿ ಬಂದಾಗಲೆಲ್ಲ ತಮ್ಮಲ್ಲಿ ಮೂಡುತ್ತಿದ್ದ ಭಾವಗಳನ್ನು ಕವಿ ಇಲ್ಲಿ ಚಿತ್ರಿಸಿದ್ದಾರೆ.

ಈ ಕವನದಲ್ಲಿ ಉತ್ಕಟವಾದರೂ ಸಂಯಮ ಕಳೆದು ಭಾವಾತಿರೇಕವಾಗದೆ ಬರುವ ಪ್ರಣಯ-ಕರುಣ ಭಾವತಿರೇಖವಾಗದೆ ಬರುವ ಪ್ರಣಯ-ಕರುಣಭಾವ ಶ್ರೇಷ್ಠ ಮಟ್ಟದ್ದಾಗಿದೆ. ಇದನ್ನು ವಿವರಿಸುವುದಕ್ಕಿಂತ ಮನವು ಮಾಡುವುದು ಸಂತೋಷದಾಯಕ. ಒಟ್ಟಿನಲ್ಲಿ ಇದು ಕವಿಯ ಸ್ವಾನುಭವಪೂರ್ಣವಾದ, ಆದರೆ ಆವೇಶವಶವಾಗದೆ ಶ್ರೇಷ್ಠ ಶೋಕ-ಪ್ರಣಯಗೀತವಾಗಿದೆ.

ಬೇಂದ್ರೆಯವರ 'ಹಳ್ಳದ ದಂಡ್ಯಾಗ' ಕವನದ ನೆರಳು ಟಿ.ಎನ್. ಮಹದೇವಯ್ಯನವರ **'ಏನಾಯ್ತು ಚೆಲುವೆ'** ಮೇಲಾಗಿರುವುದನ್ನು ಇಲ್ಲಿ ಕಾಣಬಹುದು. ವಸ್ತುವೂ ಅಲ್ಲಿಯದೇ, ಸುಂದರ ಹೆಣ್ಣನ್ನು ಹಿಂದೆ ನೋಡಿದ್ದ ಕವಿ ಈಗಿನ ಅವಳ ಅವಸ್ಥೆಯನ್ನು ಕಂಡು ಜಾರಿದ ಚೆಲುವಿನ ಬಗೆಗೆ ಕಳವಳ ವ್ಯಕ್ತಿಪಡಿಸುತ್ತಿದ್ದಾನೆ. ಅವಳ ಸರ್ವಾಂಗ ವರ್ಣನೆ ಸರ್ವಭಂಗಿಗಳ ವರ್ಣನೆ ಇಲ್ಲಿ ಚಿತ್ರಿತವಾಗಿದೆ.

ಸೃಷ್ಟಿ ಕೌಶಲ್ಯದಲ್ಲಿ!
ಸೌಂದರ್ಯ ಸಾರದಲಿ
ಒಂದೆ ರೂಪಾಗಿತ್ತು
ಏನಾಯ್ತು ಚೆಲುವೆ!
ಮಧುರ ಮಂಜುಳ ವಾಣಿ
ಮಂದಗಮನದ ಸೊಬಗು!
ಕಾಂತಿಕಳೆಗಳ ಬೀಡು!
ಏನಾಯ್ತು ಚೆಲುವೆ![೨೦೬]

ಆದರೆ ಬೇಂದ್ರೆಯವರು ಕಾರಣಗಳನ್ನು ಕೊಟ್ಟು ಈ ಬದಲಾದ ದೆಸೆಯ ಬಗೆಗೆ ಅನುಕಂಪ ತೋರಿಸುತ್ತಾರೆ. ಇಲ್ಲಿ ಆ ಬಗೆಗೆ ಅನುಕಂಪ ತೋರಿಸುತ್ತಾರೆ. ಇಲ್ಲಿ ಆ ಬಗೆಗೆ ಚಿಂತನೆಯಿಲ್ಲದಿರುವುದರಿಂದ

ಎರಡು ದಡವ ಮುತ್ತಿನಂತೆ
ಮರದ ತೋಪು ಹೆಪ್ಪಿನಂತೆ
ಕರಿಯ ನೆರಳು ಬಳಿಯುತಿಹುದು
ಇರುಳ ಛಾಯೆಗೆ
ಹರಿವ ನೀರು ಕರ್ರಗಾಗಿ
ನೆರಳು ಹಬ್ಬುಗೆ
ಮೇಲೆ ಕವಿದ ಮುಗಿಲಿನಲ್ಲಿ
ದೂರ ದೂರ ತಾರೆಗಳಲಿ
ಸಣ್ಣ ಬೆಳಕು ಮಿಂಚುತಿಹುದು
ಕಣ್ಣು ಮಿಟುಕಿಸಿ.
ನೂಕು ನನ್ನ ನಾವೆಯನ್ನು
ಹುಟ್ಟು ಹರಿಯಿಸಿ.[೨೧೦]

ನದಿಯ ಎರಡೂ ದಡಗಳಲ್ಲಿ ದಟ್ಟವಾದ ಮರದ ತೋಪುಗಳಿವೆ. ಈಗಾಗಲೇ ಸೂರ್ಯ ಮುಳುಗುತ್ತಿದ್ದು ಆ ಮರದ ತೋಪುಗಳ ಹೆಪ್ಪಿನಂತಹ ಕತ್ತಲೆ ಸುತ್ತಲಿನ ವಾತಾವರಣಕ್ಕೆ ಮತ್ತಷ್ಟು ಕರಿಯ ನೆರಳನ್ನು ಲೇಪಿಸುತ್ತಿವೆ. ಕತ್ತಲೆಯ ಛಾಯೆಯಿಂದಾಗಿ ಹರಿಯುವ ನೀರು, ಅದಕ್ಕೆ ಯಾವ ಬಣ್ಣವಿಲ್ಲದಿದ್ದರೂ, ಈಗ ಕರ್ರಗೆ ಮಿಂಚುತ್ತಿದೆ. ತೋಪಿನ ನೆರಳು ಹಬ್ಬಿ ಆ ಕಪ್ಪನ್ನು ಇನ್ನಷ್ಟು ಸಾಂದ್ರಗೊಳಿಸಿದೆ. ಜೀವನ ಸಂಧ್ಯೆಗೆ ಆವರಿಸುವ ಕತ್ತಲೆಯನ್ನು ಕವಿ ಇಲ್ಲಿ ಪ್ರಕೃತಿಯ ಚಿತ್ರೊಂದಿಗೆ ಬೆಸೆದಿದ್ದಾರೆ.

ಹುಟ್ಟು ಹಾಕುವ ಅಂಬಿಗನಿಗಷ್ಟು ಬೆಳಕು ಬೇಡವೆ! ಮೇಲೆ ಆಕಾಶದಲ್ಲಿ ದೂರ ದೂರಕ್ಕೆ ನಕ್ಷತ್ರಗಳು ಹಬ್ಬಿಕೊಂಡು ಮಂದಪ್ರಕಾಶವನ್ನು ಚೆಲ್ಲುತ್ತಿವೆ. ಅವು 'ಕಣ್ಣು ಮಿಟುಕಿಸುತ್ತಿವೆ'[೨೧೧] ಎಂಬ ಕಲ್ಪನೆ ಸುಂದರವಾಗಿದೆ. ಆ ನಕ್ಷತ್ರಗಳ ಜೊತೆಗೆ ಮಿಂಚುಗಳು ಮೃದುವಾಗಿ ಝಳಪಿಸುತ್ತ ತಾವೂ ಒಂದಷ್ಟು ಬೆಳಕನ್ನು ನಕ್ಷತ್ರಗಳ ಬೆಳಿನೊಂದಿಗೆ ಬೆರಸುತ್ತಿವೆ. ಹುಟ್ಟು ಹರಿದುಹೋಗಬೇಕು; ಹುಟ್ಟು ಹರಿದ ಮೇಲೆ ಸಾವೂ ಹರಿಯಬೇಕು; ಅಂತಾಗುವಂತೆ ತಮ್ಮ ಜೀವನ ನೌಕೆಯನ್ನು ನಡೆಸಬೇಕೆಂದು ಕವಿ ಬೇಡಿಕೊಂಡಿದ್ದಾರೆ.

ಕಣ್ಣು ಮಿಟುಕಿಸುವ ನಕ್ಷತ್ರಗಳು, ಮೃದುವಾಗಿ ಹೊಳೆಯುವ ಮಿಂಚು-ಈ ಬೆಳಕಿನ ಸಂಗಮಕ್ಕೆ ತ್ರಿವೇಣಿ ಸಂಗಮವಾಗಿ ಈಗಲೀಗ ಚಂದ್ರನ ಬೆಳಕು ಕೂಡಿಕೊಳ್ಳುತ್ತಿದೆ. ಪೂರ್ವದಿಗ್ಭಾಗದಲ್ಲಿ ಬಿದಿಗೆಯ ಚಂದ್ರಮನು ಮೂಡುತ್ತಿದ್ದಾನೆ. ಹೆಚ್ಚೇನೂ ಬೆಳಕು ನೀಡುವ ಶಕ್ತಿ ಅವನಿಗಿಲ್ಲ. ಹೇಗೋ ಕಪ್ಪು ಮೋಡಗಳ ಕತ್ತಲೆಯನ್ನು ತಕ್ಕಷ್ಟು ಪಕ್ಕಕ್ಕೆ ತಳ್ಳಿ, ಮಂದಪ್ರಕಾಶವನ್ನು ಬೀರುತ್ತ ತೂರಿಬರುತ್ತಿದ್ದಾನೆ. ಕತ್ತಲೆಯ ಕಡ್ಡಿಗೊಂದು ಬಿಳಿಯ ಬೆಳಕಿನ ಗೀಟು ಎಳೆದಂತೆ ಅವನು ತೋರುತ್ತಿದ್ದಾನೆ. 'ಮುರಿದ ಚಂದ್ರ'[೨೧೨] ಎಂಬ ಕಲ್ಪನೆ ಮನೋಜ್ಞವಾಗಿದೆ.

ಕವಿಯ ಪ್ರಾರ್ಥನೆ ಈಡೇರುತ್ತಿದೆ. ಅಂಬಿಗನು ಹುಟ್ಟು ಹಾಕುತ್ತ ಮುಂದ ಮುಂದಕ್ಕೆ ಸಾಗಿಸುತ್ತಿದ್ದಾನೆ. ನೀರಿನ ಚಲನೆ ಈಗ ಅರಿವಿಗೆ ಬರುತ್ತಿದೆ. ಹುಟ್ಟು ಹಾಕುತ್ತಿರುವ ಸದ್ದು ಕೂಡ ರಾತ್ರಿಯ ಮೌನದ ಕರುಳನ್ನು

ಎರಡು ದಡವ ಮುತ್ತಿನಂತೆ
ಮರದ ತೋಪು ಹೆಪ್ಪಿನಂತೆ
ಕರಿಯ ನೆರಳು ಬಳಿಯುತಿಹುದು
ಇರುಳ ಛಾಯೆಗೆ
ಹರಿವ ನೀರು ಕರ್ರಗಾಗಿ
ನೆರಳು ಹಬ್ಬುಗೆ
ಮೇಲೆ ಕವಿದ ಮುಗಿಲಿನಲ್ಲಿ
ದೂರ ದೂರ ತಾರೆಗಳಲಿ
ಸಣ್ಣ ಬೆಳಕು ಮಿಂಚುತಿಹುದು
ಕಣ್ಣು ಮಿಟುಕಿಸಿ.
ನೂಕು ನನ್ನ ನಾವೆಯನ್ನು
ಹುಟ್ಟು ಹರಿಯಿಸಿ.[೨೧೦]

ನದಿಯ ಎರಡೂ ದಡಗಳಲ್ಲಿ ದಟ್ಟವಾದ ಮರದ ತೋಪುಗಳಿವೆ. ಈಗಾಗಲೇ ಸೂರ್ಯ ಮುಳುಗುತ್ತಿದ್ದು ಆ ಮರದ ತೋಪುಗಳ ಹೆಪ್ಪಿನಂತಹ ಕತ್ತಲೆ ಸುತ್ತಲಿನ ವಾತಾವರಣಕ್ಕೆ ಮತ್ತಷ್ಟು ಕರಿಯ ನೆರಳನ್ನು ಲೇಪಿಸುತ್ತಿವೆ. ಕತ್ತಲೆಯ ಛಾಯೆಯಿಂದಾಗಿ ಹರಿಯುವ ನೀರು, ಅದಕ್ಕೆ ಯಾವ ಬಣ್ಣವಿಲ್ಲದಿದ್ದರೂ, ಈಗ ಕರ್ರಗೆ ಮಿಂಚುತ್ತಿದೆ. ತೋಪಿನ ನೆರಳು ಹಬ್ಬಿ ಆ ಕಪ್ಪನ್ನು ಇನ್ನಷ್ಟು ಸಾಂದ್ರಗೊಳಿಸಿದೆ. ಜೀವನ ಸಂಧ್ಯೆಗೆ ಆವರಿಸುವ ಕತ್ತಲೆಯನ್ನು ಕವಿ ಇಲ್ಲಿ ಪ್ರಕೃತಿಯ ಚಿತ್ರೊಂದೊಂದಿಗೆ ಬೆಸೆದಿದ್ದಾರೆ.

ಹುಟ್ಟು ಹಾಕುವ ಅಂಬಿಗನಿಗಷ್ಟು ಬೆಳಕು ಬೇಡವೆ! ಮೇಲೆ ಆಕಾಶದಲ್ಲಿ ದೂರ ದೂರಕ್ಕೆ ನಕ್ಷತ್ರಗಳು ಹಬ್ಬಿಕೊಂಡು ಮಂದಪ್ರಕಾಶವನ್ನು ಚೆಲ್ಲುತ್ತಿವೆ. ಅವು 'ಕಣ್ಣು ಮಿಟುಕಿಸುತ್ತಿವೆ'[೨೧೧] ಎಂಬ ಕಲ್ಪನೆ ಸುಂದರವಾಗಿದೆ. ಆ ನಕ್ಷತ್ರಗಳ ಜೊತೆಗೆ ಮಿಂಚುಗಳು ಮೃದುವಾಗಿ ಝಳಪಿಸುತ್ತ ತಾವೂ ಒಂದಷ್ಟು ಬೆಳಕನ್ನು ನಕ್ಷತ್ರಗಳ ಬೆಳಿನೊಂದಿಗೆ ಬೆರಸುತ್ತಿವೆ. ಹುಟ್ಟು ಹರಿದುಹೋಗಬೇಕು; ಹುಟ್ಟು ಹರಿದ ಮೇಲೆ ಸಾವೂ ಹರಿಯಬೇಕು; ಅಂತಾಗುವಂತೆ ತಮ್ಮ ಜೀವನ ನೌಕೆಯನ್ನು ನಡೆಸಬೇಕೆಂದು ಕವಿ ಬೇಡಿಕೊಂಡಿದ್ದಾರೆ.

ಕಣ್ಣು ಮಿಟುಕಿಸುವ ನಕ್ಷತ್ರಗಳು, ಮೃದುವಾಗಿ ಹೊಳೆಯುವ ಮಿಂಚು-ಈ ಬೆಳಕಿನ ಸಂಗಮಕ್ಕೆ ತ್ರಿವೇಣಿ ಸಂಗಮವಾಗಿ ಈಗಲೀಗ ಚಂದ್ರನ ಬೆಳಕು ಕೂಡಿಕೊಳ್ಳುತ್ತಿದೆ. ಪೂರ್ವದಿಗ್ಭಾಗದಲ್ಲಿ ಬಿದಿಗೆಯ ಚಂದ್ರಮನು ಮೂಡುತ್ತಿದ್ದಾನೆ. ಹೆಚ್ಚೇನೂ ಬೆಳಕು ನೀಡುವ ಶಕ್ತಿ ಅವನಿಗಿಲ್ಲ. ಹೇಗೋ ಕಪ್ಪು ಮೋಡಗಳ ಕತ್ತಲೆಯನ್ನು ತಕ್ಕಷ್ಟು ಪಕ್ಕಕ್ಕೆ ತಳ್ಳಿ, ಮಂದಪ್ರಕಾಶವನ್ನು ಬೀರುತ್ತ ತೂರಿಬರುತ್ತಿದ್ದಾನೆ. ಕತ್ತಲೆಯ ಕಡ್ಡಿಗೊಂದು ಬಿಳಿಯ ಬೆಳಕಿನ ಗೀಟು ಎಳೆದಂತೆ ಅವನು ತೋರುತ್ತಿದ್ದಾನೆ. 'ಮುರಿದ ಚಂದ್ರ'[೨೧೨] ಎಂಬ ಕಲ್ಪನೆ ಮನೋಜ್ಞವಾಗಿದೆ.

ಕವಿಯ ಪ್ರಾರ್ಥನೆ ಈಡೇರುತ್ತಿದೆ. ಅಂಬಿಗನು ಹುಟ್ಟು ಹಾಕುತ್ತ ಮುಂದ ಮುಂದಕ್ಕೆ ಸಾಗಿಸುತ್ತಿದ್ದಾನೆ. ನೀರಿನ ಚಲನೆ ಈಗ ಅರಿವಿಗೆ ಬರುತ್ತಿದೆ. ಹುಟ್ಟು ಹಾಕುತ್ತಿರುವ ಸದ್ದು ಕೂಡ ರಾತ್ರಿಯ ಮೌನದ ಕರುಳನ್ನು

ಕತ್ತರಿಸಿ ಕೇಳಿಬರುತ್ತಿದೆ 'ಇರುಳ ಕರುಳು' ಎಂಬ ಭಾವ ವಿಶಿಷ್ಟವಾದುದು. "ಮೌನದಿರುಳ ಕರುಳ ಕಡಿದು"[೨೧೩] ಎಂಬಲ್ಲಿರುವ ಅನುಪ್ರಾಸದ ಸೊಗಸು ಕೂಡ ಮೆಚ್ಚುವಂತಿದೆ, ತನ್ನನ್ನು ಮರೆತು ಲೋಕ ವ್ಯವಹಾರಗಳಿಗೆ ಅಂಟಿಕೊಂಡು ಅದರಲ್ಲೇ ಮೋಹಿತನಾಗಿದ್ದಾಗ, ಕಾಲ ಸರಿಯುವುದು ಗೊತ್ತಾಗುತ್ತಿರಲಿಲ್ಲ. ಈಗ ಹಾಗಲ್ಲ, ಸಾಧನಾಮಾರ್ಗದ ಕಠಿಣತೆಯಿಂದಾಗಿ ಕಾಲ ಸರಿಯುತ್ತಿರುವುದು ಗೋಚರಕ್ಕೆ ಬರುತ್ತಿದೆ.

ಚಲಿಸುತ್ತಿರುವ ದೋಣಿ ಮುಂದೆ
ಅಲುಗುತಿರುವ ನೀರಿನಲ್ಲಿ
ಅರ್ಧಬೆಳಕು ಅರ್ಧ ಕಪ್ಪು
ಆಡುತಿರುವುದು.
ಒಳಗೆ ನೆರಳಿನೊಂದು ಲೋಕ
ಬಳುಕುತಿರುವುದು.[೨೧೪]

ದೋಣಿ ಚಲಿಸುತ್ತಿದೆ, ನೀರೂ ಅಲುಗುತ್ತ ಚಲಿಸುತ್ತಿದೆ. ನಕ್ಷತ್ರಗಳ ಬೆಳಕು, ಮಿಂಚಿನ ಬೆಳಕು, 'ಮುರಿದ ಚಂದ್ರ'ನ ಬೆಳಕು -ಎಲ್ಲ ಕೂಡಿ ನೀರಿನಲ್ಲಿ ಅರ್ಧ ಬೆಳಕು ಅರ್ಧ ಕಪ್ಪು ಆವರಿಸಿದೆ. ನೆರಳು ಬೆಳಕಿನಾಟ ನಡೆದಿದೆ. ಆ ಆಟ ನೀರಿನಲ್ಲೂ ನಡೆಯುತ್ತಿದೆ. ದೋಣಿಯೊಳಗೂ ನಡೆಯುತ್ತಿದೆ. "ಒಳಗೆ ನೆರಳಿನೊಂದು ಲೋಕ ಬಳುಕುತಿರುವುದು"[೨೧೫] ಎಂಬ ಮಾತು ದೋಣಿಯ ಒಳಗನ್ನು ಮಾತ್ರವಲ್ಲದೆ ಕವಿಯ ಅಂತರಂಗವನ್ನೂ ಸಂಕೇತಿಸುತ್ತದೆ. ಅದು ಕವಿಯ ಮನಸ್ಸಿನ ತುಮುಲವನ್ನೂ, ಕಳವಳವನ್ನೂ ಪ್ರತಿಬಿಂಬಿಸುವಂತಿದೆ.

ಸಾಗಬೇಕಾದ ದಾರಿ ಸುಲಭವೇನಲ್ಲ, ಬದುಕಿನ ಮೇಲಣ ಮೋಹವನ್ನು ಕಡಿದುಕೊಳ್ಳುವುದೇನು ಅಷ್ಟು ಸರಾಗವೆ! ಅದು ಜನ್ಮ ಜನ್ಮಾಂತರಗಳಿಂದ ಗಟ್ಟಿಕೊಂಡು ಬೆಳೆದಿರುವ ಮೋಹ. ಹುಟ್ಟುತ್ತ-ಸಾಯುತ್ತ, ಸಾಯುತ್ತ-ಹುಟ್ಟುತ್ತ ಈ ದೇಹವೇ 'ನಾನು' ಎಂಬ ದೇಹಾತ್ಮ ಭಾವ ಸ್ಥಿರಗೊಂಡುಬಿಟ್ಟಿದೆ. ಸಾಧನೆಯ ಹಾದಿಯಲ್ಲೂ ಮನಸ್ಸು ಚಂಚಲವಾಗುತ್ತಿದೆ; ವಿಘ್ನಗಳು ಉಂಟಾಗುತ್ತಿವೆ; ಪ್ರಯಾಣ ಮೊಟಕಾಗುವ ಭೀತಿ ಕ್ರಮಕ್ರಮವಾಗಿ ಆವರಿಸುತ್ತಿದೆ. ದಾರಿ ಸಾಗಲು ಅನುಕೂಲಿಸಬೇಕಾದ ಪವನವನ್ನು, ಬೀಸುವುದಕ್ಕೇ ಹಿಂದುಮುಂದು ನೋಡುತ್ತಿದ್ದಾನೆ. ಒಮ್ಮೆ ಸುಳಿಯುತ್ತಾನೆ, ಒಮ್ಮೆ ಸುಮ್ಮನಾಗುತ್ತಾನೆ. "ಏನೋ ಕೆಲಸದಲ್ಲಿ ತೊಡಗಿ ತವಕಪಡುತಿದೆ"[೨೧೬] ಎಂಬ ಕವಿಯ. ಮಾತಿನಲ್ಲಿ ಗಾಳಿಯ ಕಡೆಯಿಂದ ಉಂಟಾಗುತ್ತಿರುವ ಅಸಹಕಾರದ ಸೂಚನೆ ಲಭ್ಯವಾಗುತ್ತದೆ. ಆದರೆ ಅಂಬಿಗನು ಮಾತ್ರ ಅದರ ಸಹಕಾರವೇನನ್ನೂ ಲೆಕ್ಕಿಸದೆ ಮುನ್ನಡೆಸುತ್ತಿರುವ ಸೂಚನೆಯೇ ಕಂಡುಬರುತ್ತಿರುವುದರಿಂದ "ಮನದ ಕೊನೆಯ ಕೋಡು ಮುರಿದು ಚಿಂತೆ ಪಡುತಿದೆ" ಅದರ ಕೋಡು ಮುರಿದು, ಅಹಂಕಾರ ಭಂಗವಾಗಿರುವುದನ್ನು ಈ ಸಾಲು ಅಭಿವ್ಯಕ್ತಪಡಿಸುತ್ತಿದೆ :

ನೂಕು ನನ್ನ ದೋಣಿಯನ್ನು
ನುಡಿದು ನುಡಿಯದಂತೆ ಮಾತ್ರ
ನದಿಯ ಕೆಲವು ಕೇಳುತಿಹುದು
ಇರುಳ ಮೌನದಿ

ಮನದೊಳೇನೊ ಚಿಂತೆಯಿಹುದು

ಎದೆಯ ಭಾರದಿ.[೨೧೭]

ಕವಿ ತನ್ನ ಸಾಧನೆಯನ್ನು ಪರಿಪೂರ್ಣಗೊಳಿಸುವ ನಿರ್ಧಾರದಲ್ಲಿಯೇ ಇರುವುದರಿಂದ ಮತ್ತೆ ಅಂಬಿಗನನ್ನು "ನನ್ನ ದೋಣಿಯನ್ನು ಬೇಗ ಬೇಗ ನಡೆಸು, ನದಿಯ ಕಲರವ ಕೇಳಿಯೂ ಕೇಳಿಸದಂತಿದೆ ಈ ಕತ್ತಲೆಯ ಮೌನದಲ್ಲಿ. ನನ್ನ ಮನಸ್ಸನ್ನು ಯಾವುದೋ ಚಿಂತೆ ಮುತ್ತಿಕೊಂಡಿದೆ. ಎದೆ ಭಾರವಾಗಿದೆ"[೨೧೮] ಎಂದು ಯೋಚಿಸುತ್ತಿದ್ದಾರೆ. ವಿಘ್ನಪರಂಪರೆಗಳು ನಿವಾರಿಸಲ್ಪಡಬೇಕಾದರೆ ಆ ಕರುಣಾಳುಮೂರ್ತಿಯಾದ ಅಂಬಿಗನನ್ನೇ ಮೊರೆಹೋಗಬೇಕೆಂಬುದನ್ನು ಕವಿ ಸ್ಪಷ್ಟವಾಗಿ ಅರಿತಿದ್ದಾರೆ.

ಕೊನೆಯಲ್ಲಿ ಕವಿಗೆ ಸಮಸ್ತ ಪ್ರಕೃತಿಯೇ ತನ್ನ ದಿವ್ಯ ಪಯಣಕ್ಕೆ ಅಡ್ಡಿಯೊಡ್ಡುವಂತೆ ತೋರುತ್ತಿದೆ. ಸುತ್ತ ಕವಿದಿರುವ ಕತ್ತಲೆ, ದೂರದಲ್ಲಿ ಮಂದವಾಗಿ ಬೆಳಗುತ್ತಿರುವ ಬೆಳಕು, ತಾರೆಗಳು. ಆಕಾಶ, ಹರಿಯುತ್ತಿರುವ ನದಿ-ಎಲ್ಲವೂ ಏನೋ ಸಂಚು ನಡೆಸುತ್ತಿರವ ಅನುಭವವಾಗುತ್ತಿದೆ. ಈ ಸಂಸಾರದಲ್ಲಿಯೇ ಕವಿಯನ್ನು ಕಟ್ಟಿಹಾಕುವ ಹುನ್ನಾರ ನಡೆಸುತ್ತಿರುವಂತೆ ಭಾಸವಾಗುತ್ತಿದೆ. ಲೋಹದ ಮೇಲಣ ಮೋಹ ಬತ್ತದಿದ್ದರೆ, ಬ್ರಹ್ಮಾತ್ಮ ಭಾವ ಬಲಿಯದಿದ್ದರೆ, ಪರಾತ್ಪರ ವಸ್ತುವಿನಲ್ಲಿ ಬಿಚ್ಚಿಬೇರಿಲ್ಲದಂತೆ ಕೊಡುವುದೆಂತು! ಲೋಕ ಮೋಹವೇ ಉಳಿದರೆ, ದೇಹ ಮೋಹವೇ ಬಲವತ್ತರವಾದರೆ 'ಹಾಗದ ಕೆರಹ ಹೊರಗೆ ಕಳೆದು, ದೇಗುಲಕ್ಕೆ ಹೋಗಿ ನಮಸ್ಕಾರವ ಮಾಡುವನಂತೆ, ತನ್ನ ಕೆರೆಹಿನ ಧ್ಯಾನವಲ್ಲದೆ ದೇವರ ಧ್ಯಾನವಿಲ್ಲ" ಎಂದು ಬಸವಣ್ಣನವರು ಹೇಳಿದಂತೆ ಎಲ್ಲವೂ ವ್ಯರ್ಥವಾಗುತ್ತದೆ. ಆದ್ದರಿಂದಲೇ ಕೊನೆಗೊಮ್ಮೆ ಕವಿ ಪ್ರಾರ್ಥಿಸುತ್ತಾರೆ.

ನೂಕು ಬೇಗ ದೋಣಿಯನ್ನು

ದಾರಿ ಕಳೆದಿದೆ.

ಎಷ್ಟೋ ಕಳೆದಿದೆ, ಇನ್ನಷ್ಟು ಕಳೆದರಾಯಿತು![೨೧೯]

ಹೀಗೆಲ್ಲ ಆಧ್ಯಾತ್ಮಿಕ ಅನುಭೂತಿಯಿಂದ ತುಂಬಿ ಮುರಿಯುವ ಈ ಕವನ ಅತ್ಯಂತ ಹೃದ್ಯವಾಗಿದೆ. ಐಕ್ಯಸ್ಥಿತಿಯನ್ನು ಸಾಧಿಸಲು ಭಕ್ತಿಮಾರ್ಗವೇ ಪ್ರಶಸ್ತವಾದುದೆಂಬುದರತ್ತ ಇಲ್ಲಿ ಕವಿವರ್ಯರು ಜಿಜ್ಞಾಸೆಗಳ ಗಮನ ಸೆಳೆದಿದ್ದಾರೆ. 'ಅಂಬಿಗ ನಾನಿನ್ನ ನಂಬಿದೆ', ಜಗದಂಭರಮಣನ ನಂಬಿದೆ" ಎಂಬ ಗೀತೆಯಲ್ಲಿರುವಂತೆ ಆ ಪರಮಾತ್ಮನ ಕೃಪೆ ಮೈದೋರಬೇಕಾಗಿದೆ ಎಂಬುದು ಇಲ್ಲಿ ಸ್ಪಷ್ಟವಾಗಿದೆ. ಸಾಧನೆಯ ಕಷ್ಟನಿಷ್ಠುರಗಳ ಸಂಕೇತವೂ ಇದೆ. ಇಹಲೋಕದ ಜೀವನವನ್ನು ಹೀಗಳೆಯದೆ, ಅದನ್ನು ಪವಿತ್ರವಾಗಿಯೇ ಪರಿಭಾವಿಸಿ, ಸಾರ್ಥಕ 'ಇಹದಿಂದ ಪರಮ ಸಾರ್ಥಕ 'ಪರ'ದತ್ತ[೨೨೦] ಸರಿಯುವ ಚಿಂತನೆ ಇಲ್ಲಿ ಹರಳುಗೊಂಡಿದೆ.

ಒಟ್ಟಿನಲ್ಲಿ ಐಕ್ಯದ ಹಂಬಲ, ಆ ಹಂಬಲವನ್ನು ತುಂಬಿಕೊಡುವ ಭಕ್ತಿಮಾರ್ಗ-ಈ ಕವಿತೆಯಲ್ಲಿ ಸಶಕ್ತವಾಗಿ ಧ್ವನಿತವಗಿದೆ. ಪ್ರಕೃತಿಯ ಸಹಜ ಚಿತ್ರಗಳು ಆ ಭಾವಾಭಿವ್ಯಕ್ತಿಗೆ ಪೋಷಕವಾಗಿ ನಿಂತಿವೆ. ಲಯಬದ್ಧತೆಯೂ ಭಾವಾನುರೂಢಿಯಾಗಿದೆ.

ವಿಚಾರಲೋಕ :

ಟಿ. ಎನ್. ಮಹದೇವಯ್ಯನವರಿಗೆ ದುಗುಡ ಭಾವಗಳ ಒಡನಾಟವೆಂದರೆ ಅಚ್ಚುಮೆಚ್ಚು. ಇವರ ಪಾಲಿಗೆ ದುಗುಡವೆಂಬುದು ನೆತ್ತರು ಕಾಣದ ಕತ್ತಿಯ ಹೊಡೆತದ ರೀತಿಯೆಂಬುದನ್ನು **'ನನ್ನ ಸೆರೆ'** ಎಂಬ ಕವನದಲ್ಲಿ ಮೂಡಿಬಂದಿದೆ. 'ನೆತ್ತರು ಕಾಣದಲಗಿದು'[೨೨೧] ಎಂಬ ಕುಮಾರವ್ಯಾಸನ ಮಾತನ್ನು ಸ್ಮರಿಸಬಹುದು. ಹಾಗೆಯೇ ಮಳೆಯಾಡದ ಕಾರ್ಮುಗಿಲು ಗುಡುಗು ಮಿಂಚುಗಳ ಸಂಚು. ಕವಿಗೆ ಹಾದಿ ತೋರುತ್ತಿಲ್ಲ. ಈ ಸಂಕಟದ ಅನುಭವಮಾಲೆಯಲ್ಲಿ ಶರವರ್ಷ ಧಾರಾಕಾರವಾಗಿ ಸುರಿಯುವ ಚಿತ್ರ ಮುಂದೆ ಬರುತ್ತದೆ.

ಕೂರಸಿಯ ಮೊನೆ ತಿವಿಯುತಿದೆ
ನೆತ್ತರಿಳಿದಿಲ್ಲ!
ಕಾರ್ಮುಗಿಲು ಹಬ್ಬಬಹುದೇ
ಕಾಳರಾತ್ರಿಯ ಮಿಂಚು
ಗುಡುಗು ಸಿಡಿಲುಗಳಾಡುತಿವೆ
ಮಳೆ ಮಾತ್ರವಿಲ್ಲ.
ಹಾದಿಯೊಂದು ತೋರದಿದೆ
ದೇವರೇ ಬಲ್ಲ
ಸುತ್ತಿ ಸುತ್ತಿ ತಿರುಗುತಿಹೆನು
ದುಃಖಿ ಹೆಚ್ಚುತಿದೆ.
ಶರವರ್ಷವೇ ಸುರಿಯುತಿದೆ
ನಾ ತಡೆಯಲಾರೆ.
ಚಿರಾಟ ನಭಕೇರುತಿದೆ
ಕೇಳ್ವರಾರಿಲ್ಲ.
ಕಂಬನಿ ಕಡಲ ಕರೆದರೂ
ಸಂತೈಸರಿಲ್ಲ.[೨೨೨]

ಕವಿಯ ಚೀರಾಟ ನಭಕ್ಕೇರುತ್ತಿದ್ದರೂ ಅದು ಕೇಳುವವರಿಲ್ಲದೆ ಅರಣ್ಯರೋದನ. ಕಂಬನಿಯ ಕಡಲ ಹರಿದರೂ ಗಮನಿಸುವರಿಲ್ಲ. ಆತ್ಮನಿಗೆ ಏಕೆ ಬಿಡುಗಡೆಯಿಲ್ಲ ಎಂದು ಕವಿ ದುಃಖಭಾರದಿಂದ ನರಳುವ ಚಿತ್ರ ಇಲ್ಲಿದೆ. ದುಗುಡವನ್ನು ಹೀಗೆ ಹೆಪ್ಪುಗಟ್ಟಿಸಿ ಕವಿ ಬಂಧನದಲ್ಲಿ ಸಿಕ್ಕವನಂತೆ ನರಳುತ್ತಾನೆ. ತುಂಬ ವೈಯಕ್ತಿಕವಾದ ಈ ಅನಿಸಿಕೆ ಅಂಥ ಸೆರೆಯಲ್ಲಿ ಸಿಕ್ಕಿದವರೆಲ್ಲರ ಸಾರ್ವತ್ರಿಕ ಅನುಭವವೂ ಆಗುವಂತೆ ಶಕ್ತಿಯುತವಾಗಿರುವ ಈ ಕವನದ ಸಾಲುಗಳಲ್ಲಿ ಸೈನ್ಯದ ಗಂಭೀರ ನಡಿಗೆಯಿದೆ.

ಕನ್ನಡದಲ್ಲಿ ಭೂಮಿಯನ್ನು ಕುರಿತ ಕವಿಚಿಂತನಕ್ಕೆ ಒಂದು ವಿಶಿಷ್ಟ ಸ್ಥಾನವೇ ಇದೆ. ಆ ಸಂಪತ್ತಿಗೆ ಇದು ಒಂದು ಪುಟ್ಟ ಕಾಣಿಕೆ.

ಈ ಕವಿಯ ಭೂ ಚಿಂತನ ವಿಶಿಷ್ಟ ಬಗೆಯದು. ಯಾವಾಗಲೂ ಭೂಮಿ ಜನರಿಂದ ಕಾಣಿಕೆ ಸೇವೆ ಬಲಿದಾನಗಳನ್ನು ಬಯಸುತ್ತಿರುತ್ತದೆ. ಈ ಭೂಮಿಯ ಹೆಸರಿನಲ್ಲಿ ಸೆಳೆತದಲ್ಲಿ ಎಷ್ಟಿಷ್ಟು ಕೃತ್ಯ-ಅಕೃತ್ಯಗಳು ನಡೆದಿಲ್ಲ. ವ್ಯಾಜ್ಯ ವೈಮನಸ್ಯದ ಬಿರುಕುಗಳೆದಿಲ್ಲ. ಜನ ಭೂಮಿಗಾಗಿ ತುಂಬ ಕಷ್ಟದ ಕೆಲಸಗಳನ್ನು ಮಾಡಿ ಮಡಿದಿದ್ದಾರೆ, ಬಲಿ ಕೊಟ್ಟಿದ್ದಾರೆ.

ಇಷ್ಟಾದರೂ ಕವಿಯ ದೃಷ್ಟಿಯಲ್ಲಿ ಪೃಥ್ವಿ ತೃಪ್ತಿ ಪಡೆದ ತಿರುಕಿ. ಅವಳನ್ನು

ಹರಕುಟ್ಟು ನವೆದು ಚಳಿಗಾಳಿಯಲ್ಲಿ ನಡುಗುತಿಹೆ!
ನಿನ್ನಾಸೆ ತಣಿದಿಲ್ಲ! ನಿನ್ನಿರವು ಬೆಳೆದಿಲ್ಲ!
ನಿನ್ನ ಸಂಸ್ಕೃತಿ ಜೀವ ಹೊಸಭಾವ ತಳೆದಿಲ್ಲ!
ಆವಕಾಲದ ಕೊನೆಗೂ ನೀ ಕೇಳ್ವ ಬಲಿ ನಿಂತು
ಹೊಚ್ಚ ಹೊಸನೆಗೆ ಸೂಸಿ 'ಸೇವೆ ಸಾಕಿನ್ನೆಂಬೆ![೨೨]

ಸೇವೆ ಮಾಡಿಸಿಕೊಳ್ಳುತ್ತಲೇ ಇರುವ ಪರಂಪರೆ ನಿಲ್ಲಿಸಿ 'ಸೇವೆ ಸಾಕಿನ್ನು' ಎಂದು ಭೂಮಿ ಹೇಳುವ ದಿನ ಬಂದರೆ ನೆಲದಿ ಶಾಂತಿ ಮೂಡುತ್ತದೆ ಎಂಬುದು ಕವಿಯ ಆಶಯ. ಹೂವು ಎಲ್ಲ ಕವಿಗಳಿಗೆ ತುಂಬ ಪ್ರಿಯವಾದ ಒಂದು ವಸ್ತು ಒಂದು ಪ್ರತಿಮೆ ಒಂದು ಧ್ವನಿಸಾರ ವಿರುವಂತೆ "**ಅರಳ ಬಯಸುವೆ**' ಕವನ ಕವಿಯ ಅದೇ ಭಾವ ವ್ಯಕ್ತವಾಗಿರುವುದನ್ನು ಗುರುತಿಸಬಹುದಾಗಿದೆ. ಈ ಕವಿತೆಯ ಜೀವಪುಷ್ಪವು ದೈವದ ವ್ಯೂಹದಲ್ಲಿ ಚೆನ್ನಾಗಿ ಅರಳಿಕೊಳ್ಳಬೇಕೆಂಬ ಆಶಯವನ್ನು ಹೊರಗೆಡಹುತ್ತದೆ, ಆದರೆ ಆತ್ಮದ ಪುಷ್ಪವು ಒಳಗೇ ಮುರುಟಿಕೊಂಡಿರುವುದನ್ನು ಕವಿ ಈ ಸ್ಥಿತಿಯಿಂದ ಹೊರಬರಲು ಹೆಣಗುತ್ತಾನೆಂಬುದನ್ನು ತಿಳಿಸುತ್ತದೆ.

ಸುಖದ ಕನಸಿನಲೆಯ ಮೇಲೆ
ರೂಪು ರಸದ ರಾಗಲೀಲೆ
ತೂಗುಮಂಚ ಮೋಹಮಾಲೆ!
ದಿವ್ಯನೌಕೆ ತೇಲುತಿರಲಿ
ಪದ್ಮಪುಷ್ಪ ನೀರಿನಲ್ಲಿ
ಸೋಂಕಿ ನಿಂದು ಸೋಂಕದಂತೆ
ಕಾಂತಿ ಶಾಂತಿ ಸಾಧಿಪಂತೆ
ಜೀವ ನಿನ್ನ ವ್ಯೂಹದಲ್ಲಿ
ಅರಳ ಬಯಸುವೆ!
ಮುಚ್ಚಿದರಳ-ಆತ್ಮವನ್ನು
ತೆರೆಯಲೆಳಸುವೆ!
ದುಃಖವಾತವೊಮ್ಮೆ ಸುಳಿದು

ಜಟಿಲ ಜೀವ ಬೆನ್ನು ಹಿಡಿದು
ಅಲಗನಿಕ್ಕಿ ಒಮ್ಮೆ ಚೀರಿ
ತೊಟ್ಟು ಹನಿಯೆ ನೆತ್ತರಾಗಿ
ಬಿಟ್ಟ ಉಸಿರೆ ಬೆಂಕಿಯಾಗಿ
ಶಾಂತಿ ಸ್ವೈಪು ಕಳೆದರೂ
ಮೆಲ್ಲನೆದೆಯ ಭಾರವಿಳುಹಿ
...............
............... ತೆರೆಯಲೆಳಸುವೆ.[೨೨೪]

ದುಃಖದ ಗಾಳಿ ಅಲಗನ್ನು ಇಕ್ಕಿದಾಗ ತೊಟ್ಟು ಹನಿಯೆ ನೆತ್ತರಾಗುತ್ತದೆ. ಬಿಟ್ಟ ಉಸಿರೆ ಬೆಂಕಿಯಾಗುತ್ತದೆ. ಅಂಥ ಸಂದರ್ಭಗಳಲ್ಲಿ ಸಾಮರಸ್ಯವನ್ನು ಪಡೆಯಲು ದೈವದ ವ್ಯೂಹ ಅಗತ್ಯ ಎಂದು ಕವಿ ಭಾವಿಸುತ್ತಾರೆ. ಹಿಂದಿನ ಕಾಲದ ಋಷಿಗಳಂತೆ ಇಂದಿನವರು ಸಂಸಾರತ್ಯಾಗ ಗುಹಾವಾಸ ಮಾಡಲಾರರು. ಆದರೆ ಮನೋಸಿದ್ಧಿಯಿಂದ ಅವರು ಸೊಗ ದುಗುಡ ಎರಡನ್ನೂ ಒಂದೇ ಮುಖವೆಂಬಂತೆ ಕಾಣಬಯಸುತ್ತಾರೆ. ಈ ಕಾಣ್ಕೆಗೆ ವಿಷಯಗಳ ಚಿಂತನೆಯಲ್ಲಿ ತೊಡಗಿತ್ತು ಎನ್ನುವ ಮಾತಿಗೆ ಈ ಪದ್ಯ ಸಾಕ್ಷಿಯಂತಿದೆ.

ಎರಡನೆಯ ಮಹಾಯುದ್ಧದ ಭೀಕರ ಲೋಕಹಿಂಸೆ ದೃಶ್ಯವನ್ನು ನೆನೆದಾಗ ಕವಿಯಲ್ಲಿ ಮೂಡಿದ ಭಾವನೆಗಳ ಬಿಂಬವೇ 'ಅಮೃತಂಗಮಯೇತಿ' ಕವನದ ಸಾರ. ಪುರಾತನರೆಲ್ಲರೂ ಶಾಂತಿ ಮಂತ್ರವನ್ನು ಜಪಿಸುವ ಉದಾರಿಗಳಾಗಿದ್ದಾರೆ ವಿಜ್ಞಾನ ಯುಗಪುರುಷ ಸೃಷ್ಟಿಯ ಒಡಲಲ್ಲಿ ಮೃತ್ಯುವಿನ ಬೀಜವನ್ನು ಬಿತ್ತುತ್ತಿದ್ದಾನೆ ಎಂಬುದು ಕವಿಯ ಆರೋಪ.

ಎಂದೋ ಉಷಃಕಾಲ
ಸಾತ್ವಿಕರು ಋಷಿವರರು
ಪುಣ್ಯಭೂಮಿಯ ನಡುವೆ
ಪರ್ಣ ಕುಟಿಗಳ ಕಟ್ಟಿ
ಆಶ್ರಮಂಗಳ ನೆಟ್ಟು
ದಿವ್ಯದರ್ಶನ ಕಂಡು
ಸಾರಿದರು ಜನಕೆ
ಅಮೃತತ್ವವ ಸೇರು!
ಮೃತ್ಯುವಿನ ಕರೆ ಬೇಡ.
ವಿಜ್ಞಾನ ಪುರುಷಂಗೇನು ಬಂದಿತೊ ಕಾಣೆ
ಕೆಳವನ ಕೇಕೆ. ಸಂದೇಶ ಹೊಗಳಿಕೆ

ಅಮೃತತ್ವದ ಹಾಡು ಕಾಡುಹರಸಿ
ಶಾಂತಿಮಂತ್ರದ ಗೀತೆ ವಿಲಯ ಗೀತೆ
ನಡೆಯುತ್ತ ಸಕಲ ಜಗನಾಶದೆಡೆ
ನಡೆಯುತ್ತ ಸಕಲ ಕುಲ ಸಾವಿನೆಡೆ
ನಡೆ ಸೃಷ್ಟಿಯತ್ತತ್ತ ವಿಲಯದೆಡೆ.[೨೨೫]

ಈ ಯುದ್ಧದ ವಾತಾವರಣವು ಮನುಜಕುಲದ ನಂಬಿಕೆ ವಿಶ್ವಾಸ ಸ್ನೇಹ ಸದ್ಭಾವಗಳ ಮೊಳಕೆಗಳನ್ನು ಚಿವುಟಿಹಾಕುತ್ತದೆ. ಹಾಗೂ ಲೋಕವನ್ನು ಸಾವಿನೆಡೆ ಒಯ್ಯುವುದೇ ವಿಜ್ಞಾನದ ಗುರಿಯಾಗಬಾರದು ಎಂಬುದು ಈ ಕವಿತೆಯ ಆಶಯವಾಗಿದೆ.

ಬದುಕನ್ನು ಅಪ್ಪಳಿಸಲು ಬರುವ ನೂರು ವಿಧ್ವಂಸಕಾರಕ ಶಕ್ತಿಗಳ ಎದುರಿಗೆ ಕೂಡ ಧೈರ್ಯವಾಗಿ ತಲೆಯೆತ್ತಿ ನಿಂತು ಉಳಿದುಕೊಳ್ಳುವ ಆಶಾವಾದದ ಧ್ವನಿಯನ್ನು 'ಬಯಕೆ' ಪ್ರಕಟಿಸುತ್ತದೆ. ಗುಡುಗು, ಮಿಂಚು, ಕಗ್ಗತ್ತಲು ಮೊದಲಾದವುಗಳ ದಾಳಿಯಲ್ಲಿ ಕವಿ ಎತ್ತರದ ಗಿರಿಯೇರಿ ನಿಲ್ಲ ಬಯಸುವುದು ಧ್ವನಿಪೂರ್ಣ ಆಶಯವಾಗಿದೆ.

ಸಿಡಿಲುಗಳ ಗರ್ಜನೆಗೆ ದಶದಿಕ್ಕು ಕಂಡಿಸಲಿ
ಗುಡುಗುಗಳ ಕೂಗಾಟ ತಿರೆ ನಭವ ನಡುಗಿಸಲಿ
ಥಿಳಿಥಿಳಿಲೆನುತ ನನ್ನ ಸನಯದಲೊರಗುತಿರಲಿ
ಗಿರಿಯೆಲ್ಲ ಸಡಿಲಾಗಿ ಕೆಳಕ್ಕುರುಳುತ್ತರಲಿರಲಿ
ಎಳ್ಳಷ್ಟು ಅಲುಗದಲೆ ನಾಮಾತ್ರ ನಿಂತಿರಲಿ
ಬಿರುಗಾಳಿ ಮಿಂಚುಗಳ ಕತ್ತಲೆಯ ಮುಸುಗಿನಲಿ
ಈ ಜಗದ ತಲವೆಲ್ಲ ಸಂಪೂರ್ಣ ಮುಚ್ಚಿರಲಿ
ಅಟ್ಟಹಾಸದ ನನ್ನ ನಗೆಯದು ನಭಕೇರಲಿ
ಎಲ್ಲ ರವಗಳ ತುಳಿದು ದನಿಯಾಗಿ ಗರ್ಜಿಸಲಿ
ನನ್ನ ಸಂತಸದ ಸುಧೆ ಸೂರೆಯಾಗಿ ಹರಡಲಿ
ತಿರೆ ಮುಚ್ಚಿ ಮೇಲೇರಿ ಕಡಲಾಗಿ ಹಬ್ಬಿರಲಿ.[೨೨೬]

ಎಂಥೆಂಥ ಕಷ್ಟಗಳ ಕಾರ್ಮೋಡ ಕವಿದಿದ್ದರೂ ಅದನ್ನು ಧೈರ್ಯವಾಗಿ ಎದುರಿಸುವ ಮನೋಧರ್ಮ ಕವಿಗಿದೆ. ಬರಿ ಎದುರಿಸುವುದಷ್ಟೇ ಅಲ್ಲ. ಅಟ್ಟಹಾಸದ ನಗೆಯನ್ನು ನಭಕ್ಕೇರಿಸುವ ಹುರುಪನ್ನು ಕವಿ ಉಳಿಸಿಕೊಂಡಿದ್ದಾನೆ. ಈ ನಗೆಗೆ "ಎಲ್ಲ ರವಗಳ ತುಳಿದು ದನಿಯಾಗಿ ಗರ್ಜಿಸುವ ಶಕ್ತಿ ಬರಲಿ"[೨೨೭] ಎಂಬುದು ಕವಿಯ ಹಾರೈಕೆ. ಸಮಸ್ಯೆಗಳು ಉಗ್ರವಾದಾಗ ಅದನ್ನು ಶಾಂತವಾಗಿ ಎದುರಿಸಬೇಕು ಎಂಬುದು ಸಾಮಾನ್ಯ

ಸಹಜ ಚಿಂತನೆ. ಆದರೆ ಆ ಸಮಸ್ಯೆಗಳು ಸೃಷ್ಟಿಸುವ ಭೀಕರತೆಗಿಂತ ಉಗ್ರವಾಗಿ ನಾವು ಪ್ರತಿಕ್ರಿಯಿಸಬೇಕು ಎಂಬುದು ಕವಿಯ ಆಶಯ.

ಪ್ರತಿಯೊಂದು ಜೀವವೂ ಒಂಟಿ ಹಣತೆಯಂತೆ ಮಿನುಗುತ್ತದೆ. ಆದರೆ ಕೆಲವು ಹಣತೆಗಳಿಗೆ ದೇವಾಲಯಗಳ ಆಸರೆ ಸಿಕ್ಕಬಹುದು. ಎಂಬುದು 'ಹಣತೆ' ಕವನದ ಮೂಲಕ ಕವಿಯ ಅನಿಸಿಕೆ.

ಬಾಳ ಹಣತೆಯ ಸೊಡರು
ತೇಲುತಿದೆ ಮಿಣುಕಿ
ದೇಗುಲದ ನೆರವಿಲ್ಲ
ಮನೆಯ ಮರೆಯಿಲ್ಲ
ಬರಿಯ ಬಯಲಿನೊಳೆಂತೊ,
ಭೀತಿಯಾಗುತಿದೆ![೨೨೮]

ಕೆಲವನ್ನು ಮನೆಯ ನೆರವು ಬೆಂಬಲಿಸಬಹುದು. ಆದರೆ ಅಂಥ ಯಾವ ಪ್ರಬಲ ಆಶ್ರಯದಾತರೂ ಇಲ್ಲದಾದಾಗ

ಬರಿ ಬಯಲಿನೊಳೆಂತೋ[೨೨೯]

ಎಂಬ ಭೀತಿ ಜೀವವನ್ನು ಕವಿಯುತ್ತದೆ. ಕಾರ್ಮಿಂಚು ಕತ್ತಲೆ ಮಳೆ ಗಾಳಿ ಇವುಗಳ ಆರ್ಭಟದಲ್ಲಿ

ಮಳೆ ಬೀಳಲಿಹುದೇನೋ
ಗಾಳಿ ಏಳುವುದೇನೊ!
ಕಿರಿ ಹಣತೆ, -ಕಿರಿಸೊಡರು,
ನಿಲಲೊಂದು ನೆರಳಿಲ್ಲ,
ಮಿಣುಕಿಣಿಕಿ ನೆರೆವಾಗಲೊಂದಿಲ್ಲ
ನಭತಾರೆ!
ಅಳಿಯುವುದೊ! ಉಳಿಯುವುದೊ?[೨೩೦]

ಅಂದರೆ ಬದುಕಿನ ಬಗೆಬಗೆಯ ಸಮಸ್ಯೆಗಳ ತಾಕಲಾಟದಲ್ಲಿ ಕಿರಿ ಹಣತೆಯ ಗತಿಯೇನು ಎಂಬ ಸ್ಪಷ್ಟಾಸ್ಪಷ್ಟ ಭವಿಷ್ಯ ಚಿಂತನೆಯಲ್ಲಿ ಕವಿ ಕಸಿವಿಸಿಗೊಳ್ಳುತ್ತಾನೆ.

ಸಾವಿನ ಕರೆ ಸದಾ ಜೀವನ ಸಂಗೀತಕ್ಕೆ ಶ್ರುತಿ ಹಿಡಿಯುತ್ತಿರುತ್ತದೆ ಎಂಬ ಭಾವ 'ಆಮಂತ್ರಣ' ಕವನದಲ್ಲಿ ಚಿತ್ರಿತವಾಗಿದೆ.

ಕೇಳಿ ಬರುತಿಹ ದೂರದಾಮಂತ್ರಣದ ದನಿಯೆ!
ಮಾನವನ ಮರುದನಿಯ ಸೊಲ್ಲಡಗಿಸಂತಿರುವ
ನಿನ್ನ ಭೀಕರ ರವವು ಎನ್ನದೆಯ ನಡುಗಿಸದೆ,

ಶಾಂತವಾಗಲಿ ಕಡೆಗೆ ನನ್ನ ಕೊನೆಯುಸಿರಿನಲಿ!
ನಡುವೆ ನಿಂತಿಹ ಸಾಗರದನಂತ ವೀಚಿಯಲಿ,
ನಿನ್ನ ಭೀತಿಯ ಛಾಯೆಯಳಿದು ಹೋಗಲಿ ತೇಲಿ;
ಸುಳಿವ ತಿಳಿಗಾಳಿಯಂತೆ ಮೆಲುಮೆಲುನೆ ಬರಲಿ
ತಿಳಿಗಾನವಿಳಿದಂತೆ ನಿನ್ನ ಜನದನಿಯು.[೨೩೧]

ಸಾವಿನ ಕರೆಯನ್ನು ಕವಿ ಇಲ್ಲಿ ಜವದನಿ (ಯಮನ ವಾಣಿ) ಎಂದು ಕರೆದಿದ್ದಾರೆ. ಸಾವು ಹೃದಯವನ್ನು ನಡುಗಿಸುವ ವಿಚಾರವಾಗಿದ್ದರೂ ನನಗೆ ಸಹಜವಾಗಿ ಬರಲಿ, ಪ್ರೀತಿಯೊಲು, ತಂಪಿನ ಸ್ಪರ್ಶದಂತೆ, ಪ್ರೀತಿಯ ನಲ್ಲೆಯ ಪ್ರೀತಿಯ ಮುತ್ತಿನ ರೀತಿ. ನನಗೆ ಸಾವು ಬರಲಿ ಎಂಬುದು ಜನದನಿ ಕವಿಯ ಆಶಯ.

**'ಬದುಕನ್ನು'** ಶಾಶ್ವತ ಎಂದು ನುಡಿಯಲು ಪ್ರೇರಕವಾದ ಘಟನೆಗಳನ್ನು ಕೊಟ್ಟು 'ಶಾಶ್ವತ'ವೆಂದು ಈ ಕವನದ ಮೂಲಕ ಘೋಷಿಸುತ್ತಾನೆ.

ಬದುಕಿನಲಿ ತನಿರಸದ ಬುಗ್ಗೆಯನು ಕಂಡು
ಎದೆಯುಬ್ಬಿ ಸಂತಸದ ಸೊಗದಲ್ಲಿ ಬೆರೆದು.
ಚಿಮ್ಮುತಿಹ ಹನಿಗಳಲಿ ಸೌಂದರ್ಯವುಂಡು
'ಶಾಶ್ವತ'ವು! ಶಾಶ್ವತವು! ಶಾಶ್ವತವು ಬಾಳು[೨೩೨]

ಬದುಕಿನಲ್ಲಿ ತನಿರಸದ ಬುಗ್ಗೆ ಎದ್ದು ಮೃತ್ಯುವನ್ನು ಮರೆತು ಹೀಗೆ ಉದ್ಗರಿಸುತ್ತದೆ. ಆದರೆ ಇನ್ನೊಂದು ಕ್ಷಣದಲ್ಲಿ ಮೃತ್ಯವಿನ ವಿಕಟರೂಪವನ್ನು ತಾಳಿರುವ ಘಟನಾವಳಿಗಳು ಎದುರಾದಾಗ ಬದುಕು ನಶ್ವರ, ನಶ್ವರ ಎಂದೇ ಕವಿಗೆ ಅನ್ನಿಸುತ್ತದೆ.

ಜೀವರಸವಾಹಿನಿಯ ಕಲನಾದ ಕೇಳಿ
ಆನಂದವಿಹುದೆಂದು ಬಳಿಸಾರಿ ಸವಿದು
ಎದೆಮುಸುಗ ಹರಿದಿಟ್ಟು ಸಂತಸವ ಸುರಿದು
ನಿದ್ರಿಸುವ ಜೀವನನ್ನು ಎಚ್ಚರಿಸುತಿರಲು
ಆನಂದ! ಆನಂದ! ವೆಂದು ಕೂಗುವೆನು[೨೩೩]

ಮರುಕ್ಷಣಕ್ಕೆ ಜೀವರಸವಾಹಿನಿಯ ಜೀವನಿಗೆ ಆನಂದದ ಸ್ಪರ್ಶ ಮಾಡಿಸಿದಾಗ ವ್ಯಕ್ತಿ 'ಆನಂದ' ಎಂದು ಒಪ್ಪುತ್ತಾನೆ. ಆ ಆನಂದದ ನೆಲೆಯಲ್ಲಿ ಮತ್ತೆ ಮೃತ್ಯುವಿನ ಘೋರರೂಪ ಗದರಿಸಿದರೂ ಹೆದರೆದೆ ಬದುಕನ್ನು 'ಶಾಶ್ವತದ ಪೆಟ್ಟಿಗೆ ಸೇರಿಸುವ ಬಯಕೆಯಾಗುತ್ತದೆ. ಇಲ್ಲಿಗೆ ಅವರ ನಿಲುವು ಖಚಿತವಾಗುತ್ತದೆ.[೨೩೪]

ಅಂತರಾತ್ಮ ಅಥವಾ ಪ್ರಜ್ಞೆ ಎನ್ನುವುದು ನಮ್ಮಲ್ಲಿಯೇ ಸುಪ್ತವಾಗಿದ್ದು ಪ್ರತಿಯೊಬ್ಬರಲ್ಲೂ ಎಚ್ಚರಿಕೆಯ ಗಂಟೆ ಬಾರಿಸುತ್ತಿರುತ್ತದೆ. ಅದು ಮಾನವೀಯ ಮೌಲ್ಯಗಳನ್ನು ನೆನಪಿಸುವ, ತಪ್ಪು ಹೆಜ್ಜೆಯಿಟ್ಟಾಗ ಗದರಿಸುವ ಒಂದು **'ಕಾವಲು'**ಶಕ್ತಿ[೨೩೫] ಎಂಬುದು ಈ ಕವನದ ಸಾರವಾಗಿದೆ. ಇದು ಬೆಂಗಾವಲು ಶಕ್ತಿಯೂ ಹೌದು. ಅನೇಕರು ಇದನ್ನು ಗುರುತಿಸುವುದಿಲ್ಲ ಅಥವಾ ಸದ್ದು ಕೇಳಿ ಅದನ್ನು ತುಳಿದು ಸೈತಾನನ ವಲಯಕ್ಕೆ ಕಾಲಿಡುತ್ತಾರೆ.

ಎದೆಯ ಕುಹುರವ ತಿವಿದು ಒಳದನಿಯ ಹೊರಗೆಳೆದು
ಲೋಕ ಕುಹುರವ ತೆರದಿ ಗುಟ್ಟು ರಟ್ಟಾಗುತಿದೆ!
ಎದೆಯ ಐಸಿರಿ ಸಿಡಿದು ಬಟ್ಟಬಯಲಾಗುತಿದೆ!
ಎನ್ನ ಒಲುಮೆಯ ತುಳಿವ ಸರ್ಪಕಾವಲಿದೇನು?
ಎನ್ನ ಗುಟ್ಟಿನ ನಡುವೆ ಒಳಸಂಚು ಸಂಚರಿಸಿ
ಎನ್ನ ಪಿಸುಮಾತಿನಲ್ಲಿ ಏನೆಂದೊ ಪಿಸುಗುಟ್ಟಿ
ಏನೇನೋ ಮಾಡುತಿದೆ ಶಾಂತಿ ತಾರದೆ ಬಗೆಗೆ!
ಏನು ಕಾವಲೋ ಕಾಣೆ, ಎತ್ತ ನೋಡಿದರಿಲ್ಲ.[೨೩೬]

ಈ ಕವಿ ಧರ್ಮಭೀರುವಾದುದರಿಂದ ಮಾಡುವ ಕೆಲಸದ ಪರಿಣಾಮದ ಬಗೆಗೆ ಚಿಂತನಶೀಲನಾದುದರಿಂದ ಮತ್ತು ಹಿತವಚನಗಳನ್ನು ಕೇಳುವ ಸಂಸ್ಕಾರದವನಾದುದರಿಂದ ಈ ಒಳಗಿನ ದನಿಯನ್ನು ಸೂಕ್ಷ್ಮವಾಗಿ ಕೇಳಿಸಿಕೊಳ್ಳಲಿಲ್ಲ ಅಂತರ್ ಶ್ರವಣ ಸತ್ವ ಉಳ್ಳವನಾಗಿರುವುದರಿಂದ ಅದರ ಸ್ವರೂಪವನ್ನೂ ಚಿತ್ರಿಸಬಲ್ಲವನಾಗಿದ್ದಾನೆ. ಈ ಸತ್ವ ವ್ಯಕ್ತಿಗೆ ಸರ್ಪಗಾವಲಾಗಿ ಬಿಡುಗಣ್ಣನಾಗಿ ಪಿಸುಗುಟ್ಟುವ ಹಿತವಚನಿಯಾಗಿ ಕೆಲಸ ಮಾಡುತ್ತಿರುತ್ತದೆ ಎಂದು ಕವಿ ಭಾವಿಸಿದ್ದಾನೆ.

ಪ್ರಕೃತ 'ಕಾಗೆ' ಎಂಬ ಕವನ ತನ್ನ ಸಾಂದ್ರ ಸಾಮಾಜಿಕ ಪ್ರಜ್ಞೆಯಿಂದ ತುಂಬ ಗಮನಾರ್ಹವಾಗಿದೆ. ನವೋದಯ ಕಾವ್ಯ ಸಮುದಾಯದಲ್ಲಿ ಅದಕ್ಕೊಂದು ವಿಶಿಷ್ಟ ಸ್ಥಾನವುಂಟು. ದಲಿತ, ಬಂಡಾಯ ಕಾವ್ಯವನ್ನು ನವೋದಯ ಕವಿಗಳೆ ಮುನ್ನಿರೀಕ್ಷಿಸಿದರು ಎಂಬುದಕ್ಕೆ ಇಂಥ ಕವನಗಳು ಸಾಕ್ಷಿ.

ಕಾಗೆಯೊಂದು ಅನ್ಯೋಕ್ತಿ; ನಾಟಕೀಯವಾದುದೂ ಹೌದು. ಹಿಂದುಳಿದವರಿಗೆ, ದಲಿತರಿಗೆ, ಶೋಷಿತರಿಗೆ ಕಾಗೆ ಸಂಕೇತವಾಗಿದೆ.[೨೩೭]

ಹಾಗೆ ನೋಡಿದರೆ, ಕೋಗಿಲೆಯೆ ವಿಜೃಂಭಿಸುವ ಕನ್ನಡ ಕಾವ್ಯ ಪ್ರಪಂಚಕ್ಕೆ ಕಾಗೆಯನ್ನು ಮೊದಲು ಕರೆತಂದವರು ಬಸವಣ್ಣನವರು. ಕಾಗೆಯೊಂದಗುಳ ಕಂಡರೆ, ಕರೆಯದೇ ತನ್ನ ಬಳಗವನು?" ಎಂದು ಅವರು ಸಮಾನತೆಯ ಮತ್ತು ಸಹಕಾರದ ಪ್ರತೀಕವಾಗಿ ಕಾಗೆಯನ್ನು ಚಿತ್ರಿಸಿದ್ದಾರೆ. ಮಹದೇವಯ್ಯನವರ ಕವನ ಕುವೆಂಪು ಅವರ 'ಗೊಬ್ಬರ'ವನ್ನು ನೆನಪಿಗೆ ತರುತ್ತದೆ. ಅದರಿಂದ ಪ್ರಭಾವಿತವಾಗಿಯೂ ಒಂದು ದೃಷ್ಟಿಯಿಂದ ಅದಕ್ಕಿಂತ ಅರ್ಥಪೂರ್ಣವಾಗಿದೆ. ಒಂದು ರೀತಿಯಲ್ಲಿ ಕವಿ 'ಕಾಗೆ' ಯನ್ನು ದಲಿತ ವರ್ಗಕ್ಕೆ ಹೋಲಿಸಿದ್ದಾರೆ. 'ಒಣಗಿದೆಲೆ, ಕಲ್ಲುಗಳ ಮೇಲೆಲ್ಲ ಕವಿತೆ ಬರೆಯುತ್ತಾರೆ. ಆದರೆ ನೀನು ಅವಕ್ಕಿಂತ ಕೀಳಾದೆಯಾ? ಎಂದು ಕವಿ ಕೇಳುತ್ತಾರೆ. ಮರದ ತುದಿಯಲ್ಲಿ ಹೊಂಚು ಹಾಕುತ್ತ ಕದಿಯಲೆಂದು "ಹೊಟೆಗಿಲ್ಲದಿದ್ದರೆ ಕದಿಯದಿರುವುದು ಹೇಗೆ"[೨೩೮] ಚಿತ್ರದಿಂದ ಪ್ರಾರಂಭವಾಗುವ ಈ ಕವಿತೆ ಅದರ ಹೊಳೆವ ಮೈಬಣ್ಣವನ್ನು ಮೆಚ್ಚುವಂತೆ ಮಾಡುತ್ತದೆ.

ಹೊಳೆಹೊಳೆವ ಕರಿಮೈಯ ಕಾಂತಿಯನ್ನು ಹೊರಗೆರಚಿ,
ಅದರೊಳಡಗಿಹ ಎನಿತೆನಿತೊ ಬಣ್ಣಗಳ ತೋರಿ,
ಕಾಗೆ ಕಾ! ಕರ್‍ರ! ಕಾ! ಕಾಗೆ ಕಾ! ಕಾ!
ಮುಗಿಲುಬಿಲ್ಲಿನ ಬಣ್ಣ ರೆಕ್ಕೆಯಲಿ ಹುದುಗಿರಲು
ಹೆಮ್ಮೆಯಿಂದಲೇ ಕೂಗಿ ನಕ್ಕು ನಲಿಯುವ ಕಾಗೆ!"[೨೩೯]

ಕಾಗೆಯು ಆ ಹೊಳೆವ ಕಪ್ಪನ್ನು ಮೆಚ್ಚಿದವರು ಮೆಚ್ಚಬೇಕಿದ್ದರೂ ವಿರಳ. ನಾವದನ್ನು ಮೆಚ್ಚದಿರುವುದಕ್ಕಾದರೂ ಕಾರಣ ಉಚ್ಚ ನೀಚತೆಯ ಭಾವ ನಮ್ಮನ್ನು ಪೀಡಿಸುತ್ತಿರುವ ಆ ಭಾವ ಪ್ರಾಣಿ ಪಕ್ಷಿ ಪ್ರಪಂಚವನ್ನು ಪೀಡಿಸಹೊರಟಿದೆ. ಅದಕ್ಕೆ ನಾವೆ. ಹಣ್ಣಾಗಲಿ ಅನ್ನವಾಗಲಿ ನೀಡದೆ ದಂಡಿಸಿದ್ದೇವೆ. ಏನು ಮಾಡಿದರೂ ಆ ಕಾಗೆ "ಹೊಟ್ಟೆಯುರಿಯನ್ನು ಮರೆತು ಮತ್ತೆ ಬೇಡುತ್ತದೆ. ತನ್ನ ಬಾಳಿಗಾಗಿ ಮರುಗಿ ಒಂದು ಕಣ್ಣನ್ನೂ ಮುಚ್ಚದೇ ತನ್ನನ್ನು ಕೇಳುವರಿಲ್ಲ ಎಂಬ ಕೊರಗು ಕಡೆಗೂ ಉಕ್ಕಿ, ಇರಲಿ, ಕೀಳೆಂದು ನೂಕುತ್ತಿರುವ ಈ ಜನರೆ ನಾಳೆ ಸೊಗಸು ಕಾಣುತ್ತಾರೆ! ಎಂದು ಭಾವಕ್ಕೆ ಬರುತ್ತದೆ.

"ಮುಂದೆ ಬರುವುದು ನಮಗೆ ಆಳ್ವಿಕೆಯ ಹಿರಿಗಾಲ!
ಅರಸುತನ ಬಳಿಸಾರೆ ಸೊಗವನ್ನೆ ಕಾಣುವೆವು!
ಕಾಗೆ ಕಾ! ಕರ್‍ರ!ಕಾ! ಕಾಗೆ ಕಾ! ಕಾ
ಕಬ್ಬಿಗರು ರಸಿಕಜನ ನೂಕುವರು ಕೀಳೆಂದು,
ಎಮಗಿಹುದು ಎಮ್ಮೆಗಳ ಹಿರಿತನವು ಅಳಲೇಕೆ?
ಕಾಗೆ ಕಾ! ಕರ್‍ರ! ಕಾ! ಕಾಗೆ ಕಾ! ಕಾ!
ಕೋಗಿಲೆಯ ಮೈಕಾಂತಿ ಎಮಗಿಂತ ಚೆಲುವೇನು?
ಮರಗಳಲ್ಲಿ ಮರೆಯಾಗೆ ಮೊರೆಯಿಟ್ಟು ಗೋಳಾಡೆ
ಆರಿಗರಿಯದ ತೆರದಿ ಅಳಲು ಸುರಿದೆಳಲುತಿರಲು
ಹೊಗಳುವರು ಪಂಚಮದ ಇಂಚರವ ಕೇಳೆಂದು
ನಮ್ಮ ದನಿ ಕಿರಿದೆಂದು, ನಮ್ಮಳಲು ಹಾಳೆಂದು!
ದೂಷಿಪರು ದಿನದಿನವು, ನುಡಿದರೂ ಹಾಳಾಯ್ತೆ!
ಎಮ್ಮ ನುಡಿ ಗೋಳಾಟಕ್ಕಿಂತಲೂ ಕೀಳಾಯ್ತೆ?"[೨೪೦]

ದೀನವಾಗಿದ್ದ ದಲಿತವರ್ಗ ತನ್ನನ್ನು ಪ್ರತಿಪಾದಿಸಲು ಪ್ರತಿಷ್ಠಿಸಲು ನಿರ್ಭೀತವಾಗಿ ಹೊರಡುವ ದಿಟ್ಟಧಾಟಿಯನ್ನು ಹೀಗೆ ವ್ಯಕ್ತಪಡಿಸಿದ ಕವಿತೆ ಮತ್ತೆ ಮುಂದುವರಿಯುತ್ತದೆ.

ಕೆಚ್ಚಿನಲಿ ನಚ್ಚಿಹೆವು ಸೊಗವು ಬರುವುದನರಿತು
ನಮ್ಮ ಬಾಳಿನ ಗೋಳು ಅನುಭವಿಸಿ ಅಪ್ಪಿಹೆವು!
ನಮ್ಮ ರೂಪನು ನೋಡಿ ನಲಿಯುವೆವು ಲಜ್ಜೆಯೇಂ?

ಹೆಮ್ಮೆಯಲಿ ಬಾಳುವೆವು ನಮ್ಮ ಗತಿಯನು ತಿಳಿದು.
ಕಾಲಚಕ್ರದ ಸುತ್ತು ಕಾಗೆಗಳ ಆಳಿಕೆಗೆ!
ಆರದೇಂಹಂಗಿಲ್ಲ! ಆರನೂ ಲೆಕ್ಕಿಸೆವು!
ನಮ್ಮ ಬಾಳಿದು ಕಿರಿದು, ಹಿರಿದಾಗಿ ಬೆಳಗುವುದು
ಕಾಗೆ ಕಾ! ಕರ್‍ರ! ಕಾ ಕಾಗೆ ಕಾ! ಕಾ[೨೪೧]

ಕಾಗೆ ತನ್ನ ಕಾಲ ಬರುತ್ತದೆನ್ನುವ ಆಶಯ ತೋರುವುದು, ಮೇಲಾಗಿ ತನ್ನ ರೂಪಿಗೆ ತಾನು ನಾಚಬೇಕಾಗಿಲ್ಲ ಎನ್ನುವ ಕೆಚ್ಚು ತಾಳುವುದು ದಿಟ್ಟತರ ನಿಲುವೇ ಸರಿ. ಆಳುವವರ ಬಣ್ಣಗಳ ಪೂಜ್ಯವಾಗುತ್ತದೆಂಬ ತತ್ತ್ವವುಂಟು. ಆದರಿಂದ ತೆಗಳುವರೆ ಹೊಗಳುವವರಾಗುತ್ತಾರೆಂಬ ಧೈರ್ಯವೂ ಉಂಟು. ಕಾಗೆಯ ಭವಿಷ್ಯವಾಣಿ ಇಂದು ದಿಟವಾಗಿರುವುದನ್ನು, ಆಗುತ್ತಿರುವದನ್ನು ನೋಡುತ್ತಿದ್ದೇವೆ. ಮಹದೇವಯ್ಯನವರು ದಶಕಗಳ ಹಿಂದೆಯೇ ಸಮಾಜದ ವಿಕಟ ವಿಷಮತೆಯನ್ನು ಲಕ್ಷಿಸಿದರು ಮಾತ್ರವಲ್ಲ, ಸಾಮಾಜಿಕ ಪರಿವರ್ತನೆಯನ್ನು ಮುಂಗಂಡರು; ಅದಕ್ಕಾಗಿ ಅವರ ಹೃದಯ ತುಡಿಯಿತು, ಮಿಡಿಯಿತು.

ಕಾಗೆಯ ದುರವಸ್ಥೆಯನ್ನೂ ಹಿರಿಮೆಯನ್ನೂ ಒಟ್ಟಿಗೆ ಹಿಡಿದಿಟ್ಟಿರುವ 'ಕಾಗೆ' ಕವನ ಹೀಗೆ ಕುತೂಹಲಕರವಾಗಿದ್ದರೂ, ಸಾಂಕೇತಿಕತೆಯಂತೆ ವಾಚ್ಯತೆಯೂ ಅದರಲ್ಲಿ ಕಂಡುಬರುತ್ತದೆ. ಇದು ಸಹಜವೇ; ಇಂಥ ರಚನೆಗಳಲ್ಲಿ ಕಲೆಗಿಂತ ಸಾಮಾಜಿಕ ಕಳಕಳಿ ಮತ್ತು ಜೀವಪರವಾದ ಆಶಯ ಮುಖ್ಯವಾಗುತ್ತದೆ.

ಟಿ. ಎನ್. ಮಹದೇವಯ್ಯನವರ **'ಚಿತ್ರಗಾರ'** ಒಂದು ಅಪೂರ್ವ ಕವನ. ಭಾವನಾತ್ಮಕ ನೆಲೆಯಲ್ಲಿ ವಸ್ತುವನ್ನು ಅರ್ಥೈಸಿದರೂ ಸಹ ಊಹಾತ್ಮಕ ಕಲೆಗಿಂತ 'ಇರುವಿಕೆ'[೨೪೨]ಯ ಅರಿವಿಗೆ ಹೆಚ್ಚು ಒತ್ತುಕೊಡುವ ಮನೋಧರ್ಮ ಇದರಲ್ಲಿದೆ. ಕಲ್ಪನೆಗಿಂತ ನೈಜತೆಗೆ ಬೆಲೆಕೊಡುವ ವಾಸ್ತವಿಕ ಪ್ರಜ್ಞೆ ಸುಂದರವಾಗಿ ಈ ಕವನದಲ್ಲಿ ರೂಪುತಳೆದಿದೆ.

ಅತ್ಯುತ್ತಮವಾದ ಸೌಂದರ್ಯದ ಪರಿಕಲ್ಪನೆಯೊಂದಿಗೆ ಕಾವ್ಯ ಆರಂಭವಾಗುತ್ತದೆ. ಇಲ್ಲಿ ಕವಿಯೇ ಕಲೆಗಾರ ಅರ್ಥಾತ್ ಚಿತ್ರಗಾರ. ಈತ ಹೆಣ್ಣಿನ ಬಣ್ಣನೆಗೆ ತೊಡಗುವ ಕವಿಯೂ ಹೌದು ಆಕೆಯ ಸುಂದರವಾದ ರೂಪವನ್ನು ಕಡೆದು ರೂಹಿಡಿದು ಮೂಡಿಸಬೇಕೆಂಬ ಉತ್ಕಟ ಆಸೆಯುನ್ನುಳ್ಳ ಕಲಾವಿದನೂ ಹೌದು. ಇದು ಸೊಗಸಿಗೆ ಸೊಗಸು ಬೆರತಂತೆ. ಚೆಲುವು ದ್ವಿಗುಣಗೊಂಡಂತೆ, ಜೀವಭಾವಗಳ ಸುಂದರ ಸುಲಗ್ನದಂತೆ.

ತನ್ನ ಮನಸ್ಸಿನಲ್ಲಿ ಉಳಿದ ನಲ್ಲೆಯ ರೂಪು ಚಿರಕಾಲ ಕಾಣಲಿ ಎಂಬ ಭಾವದಿಂದ ಚಿತ್ರಗಾರ ತನ್ನ ನಲ್ಲೆಯ ರೂಪಚಿತ್ರ ಬರೆಯಲು ಹೊರಟಿದ್ದಾನೆ. ಉದ್ದಕ್ಕೂ ಅವನ ಮಾತುಗಳೇ ಕ್ರಿಯೆಯೆ ಜೊತೆ ಸಾಗುವ ಪರಿ ಕಥನತಂತ್ರದ ವೈಖರಿಯಾಗಿದೆ.

ತಾನೊಲಿದ ಚೆನ್ನೆಯನ್ನು ಅವಳೊಲಿದ ತಾಣಕ್ಕೆ ಕರೆಯುತ್ತಾರೆ. ಆ ನಲ್ಲೆಯ ಅನುಪಮ ರೂಪರಾಶಿಯನ್ನು ವರ್ಣಚಿತ್ರದಲ್ಲಿ ಸೆರೆಹಿಡಿಯಲು ಬಯಸುತ್ತಾನೆ. ಅದರಿಂದಾಗಿ ಅವಳ ರೂಪು ತನ್ನ ಮನದಲ್ಲಿ ಚಿರಕಾಲ

ಇರುತ್ತದೆಂಬ ನಂಬಿಕೆ ಹೆಬ್ಬಯಕೆಯಾಗಿ ಕಾಡುತ್ತದೆ. ಮೇಲಿನ ಉದ್ದೇಶ ಸಾಧನೆಗಾಗಿ ಆ ಸುಂದರಿಯನ್ನು ಒಂದರಗಳಿಗೆ ಚಿಕ್ಕಮಣೆಯೊಂದರ ಮೇಲೆ ಕೂರಲು ಕರೆಯುತ್ತಾನೆ.

ಬಹುದಿನದ ಮನದಾಸೆ ತೀರಿ ತೀರದ ಬಾಸೆ
ಇಂದೇನೋ ಬಿಡುವಾಯ್ತು ಅರಗಳಿಗೆ ನಿಲ್ಲು
ಮೊಗದಿರುಹಿ ತುಸು ಇಳುಹಿ ಕಣ್ಣೆವೆಯನೆತ್ತಿ ಹಿಡಿ
ನಿನ್ನ ನೋಟಕೆ ಎದೆಯ ಜೀವ ಬೆಳಗುತಿದೆ
ಇರುಳ ದಾರಿಯ ಬೆಳಗಿ ತೋರ್ವ ಸೆಳಮಿಂಚಿನಂತೆ
ಬೇಸರಿಸದಿರು ರಾಣಿ ನನ್ನ ಕಡೆ ನೋಡು[೨೪೩]

ಅವಳ ಚಿತ್ರ ಬಿಡಿಸಬೇಕು ಎಂಬುದು ಅವನ ಬಹುದಿನದ ಬಯಕೆ. ಆದರೆ ಅದಕ್ಕೆ ಬಿಡುವೇ ಇರಲಿಲ್ಲ. ಇಂದೇನೊ ಬಿಡುವು ದೊರೆತಿದೆ. ಅರೆಗಳಿಗೆ ಮುಖ ತಿರುಗಿಸಿ ನಿಂತರೆ ಚಿತ್ರ ಬಿಡಿಸುವುದಾಗಿ ಹೇಳುತ್ತಾನೆ. ಅವಳ ಕಣ್ಣ ಸೌಂದರ್ಯವಾದರೊ ಅದೆಂತಹದು! ಅವಳ ನೋಟಕೆ ಇವನ ಎದೆಯ ಜೀವ ಬೆಳಗುತ್ತಿದೆ. ಕತ್ತಲೆಯ ರಾತ್ರಿಯಲ್ಲಿ ಸೆಳೆಮಿಂಚು ದಾರಿಯನ್ನು ಬೆಳಗಿ ತೋರುವಂತೆ ಅವಳ ಕಣ್ಣು ಕಾಂತಿಯುಕ್ತವಾಗಿದೆ.

ಸಲಹೆ ಸೂಚನೆಗಳು ಮುಂದುವರಿಯುತ್ತಲೇ ಇವೆ. ಮೊಗದ ನಿಲುವು ಸ್ವಲ್ಪ ಎಡಕ್ಕೆ ಬಾಗಬೇಕು. ಮುಂಗುರುಳು ಚಲಿಸುತ್ತಿರಬೇಕು. ಇಳಿಬಿದ್ದ ಕಡೆ ಸ್ವಲ್ಪ ಬಲಕ್ಕೆ ಸುಳಿಯಬೇಕು.

ಏಕಭಂಗಿಯಿಂದ ಬೇಸರವಾಗಿ ಅವಳು ಭಂಗಿ ಬದಲಾಯಿಸಿ ಬಿಡುತ್ತಾಳೆ. ಆಗ ಮತ್ತೆ ಇವನ ಉಪದೇಶ

ಏನು ಸೊಗಸಿನ ರೂಪು ಅರೆಗಳಿಗೆ ಸುಮ್ಮನಿರು
ನೀನೆನ್ನ ಮನದನ್ನನೆ; ಹೊಸಬಳೇ ಎನಗೆ
ಉಷೆಯಂತೆ, ನಿಶೆಯಂತೆ, ನೆಳಲು ಬೆಳಕಾಗಿರುವೆ[೨೪೪]

ಎಂದು ಲಘುವಾಗಿ ಗದರಿಸುತ್ತಾನೆ. ಚಿತ್ರ ಮುಂದುವರಿದಂತೆ ಚಿತ್ರಗಾರ ಕವಿಯೂ ಆಗಿಬಿಡುತ್ತಾನೆ. ಕಲೆಯ ಮಿತಿಯನ್ನು ಸೂಚಿಸುವ ಕುಶಲ ವಿಮರ್ಶಕನೂ ಆಗುತ್ತಾನೆ.

ತೆರೆಯ ಮೇಲೆ ಕಾಣಿಸಿದ ರೇಖೆ ಬಾಣದ ಹಾಗೆ ನಿನ್ನ ಸಿರಿಯ ಮೊಗ ಬಾಗಿ ಮೂಡದಿರಲು ಸಾಧ್ಯವೆ? ನಿನ್ನ ಮೂಗಿನ ಎಸಳು, ಮೊನೆಯಾದ ಕುಡಿನೋಟ ಕುಂಚದ ಎಳೆತಕ್ಕೆ ಸಿಕ್ಕಿ ಬಾರದಿರುತ್ತದೆಯೇ?[೨೪೫] ಎಂದೆಲ್ಲಾ ಪ್ರಶ್ನಿಸುತ್ತಿರುವಾಗಲೆ ಅವಳ ಕೆನ್ನೆಗಳು ಕೆಂಪೇರಿ ನಾಚಿಕೆ ಹೊಮ್ಮುತಿದೆ. ಕಲಾವಿದ ಧೃತಿಗೆಟ್ಟರೂ ಸಹ ಧೃತಿಗೆಡದ ಹಾಗೆ ಧೈರ್ಯವಹಿಸಿ ಅರೆಗಳಿಗೆ ಸುಮ್ಮನಿರುವಂತೆ ಕೇಳುತ್ತಾನೆ. ಅವಳ ತುಂಬುಗೆನ್ನೆಯ ಕೆಂಪು ಇವನ ಎದೆಯಲ್ಲಿ ರಾಗವನ್ನುಂಟುಮಾಡುತ್ತದೆ. ಅವಳೆದೆಯ ಪ್ರೀತಿಯ ಹೂಬಾಣ ಇವನ ಎದೆಯಲ್ಲಿ ನಾಟುತ್ತದೆ. ಚೆಲುವು ಒಲವಾಗುತ್ತದೆ. ಅವಳ ಕಮನೀಯ ಕಾಂತಿಯಲ್ಲಿ ಕಲಾವಿದನ ಕುಂಚ ಸೋಲುತ್ತದೆ. ಅವಳ ಓರೆನೋಟದ ಬೆಡಗು ಇವನ ಎದೆಯಾಸೆಯನ್ನು ಬಿತ್ತರಿಸಿದೆ. ಅವಳ ಲಾವಣ್ಯದ ಬಳುಕಿಗೆ ಬಣ್ಣ

ಅಂಜುತ್ತಿದೆ. ಅಂದರೆ ಆಕೆಯ ವಾಸ್ತವ ಕಲಾರೂಪಕ್ಕಿಂತ ಸುಂದರವಾದದ್ದು ಎಂಬ ಸೌಂದರ್ಯಬೋಧೆ ಇಲ್ಲಿದೆ.

ಈ ಕವಿತೆಯ ಸೂಕ್ಷ್ಮಸ್ಫೋಟಿಸುವುದು ಕವನದ ಕೊನೆಯ ಚರಣದಲ್ಲಿ

ನಿನ್ನ ಬಳಿ ಸೋಂಕಿನಲಿ ನನ್ನ ಕಲೆ ಸಾಗದಿದೆ
ಮನದ ಹಂಬಲಕಳುಕಿ ಕೈ ಬೆರಳು ನಡುಗಿ
ಕುಂಚವಿಟ್ಟೆನು ಸಾಕು, ವರ್ಣಪಾತ್ರೆಯ ನೂಂಕು
ತೆರೆಯ ಸರಿಸುತ್ತ ನನ್ನ ಸನಿಯಕೆ ಬಾ!
ನಿಜದ ರೂಪನು ಬಿಟ್ಟು ಸಟೆಯ ಮೂರ್ತಿಯ ನಿಲಿಸಿ
ಆದ ರೂಹನು ಕಡೆದು ಓಲೈಸಬೇಕು?
ಹೃದಯ ಭಿತ್ತಿಯ ಮೇಲೆ ಶಾಶ್ವತದ ರೂವಿಹುದು
ಜೀವವೆರಡೂ ಬೆರೆತು ಹೊನಲೊಂದೆ ಇರಲು[೨೪೬]

ಮನದನ್ನೆಯನ್ನು ಹತ್ತಿರ ಕೂರಿಸಿಕೊಂಡು ನೋಡುತ್ತಿದ್ದರೆ ಚಿತ್ರಶಕ್ತಿಗೆ ಭಂಗ ಬಂದೀತೆಂದು ಚಿತ್ರಗಾರ ಅವಳನ್ನು ರೂಪದರ್ಶಿಯಾಗಿ ದೂರ ಕೂರಿಸಿದ. ವಸ್ತುನಿಷ್ಠವಾಗಿ ಬರೆಯಬಹುದೆಂಬ ಕಲಾಪ್ರಜ್ಞೆ ಅವನದು. ಆದರೆ ಚಿತ್ರ ಮುಗಿಯುತ್ತ ಬಂದಂತೆ ಅವಳ ಬಳಿಸೋಂಕಿನಲ್ಲಿ ಕಲೆ ಸಾಗದಂತಾಗಿದೆ. ಈ 'ಬಳಿಸೋಂಕು'[೨೪೭] ಕವಿಯ ಒಂದು ಸುಂದರ ಶಬ್ದರಚನೆ. ಎದುರಿಗೆ ಇದ್ದು ಕೈ ಕೈ ಮುಟ್ಟಿದಾಗ ಅದು ಸೋಂಕು. ದೂರದಲ್ಲಿ ಎದುರು ಬದುರು ಕುಳಿತಿದ್ದಾರೆ. ಸ್ಪರ್ಶೇಂದ್ರಿಯಗಳಿಗೆ ಕೆಲಸವಿಲ್ಲ. ಆದರೆ ಅವಳ ಸಾನ್ನಿಧ್ಯವೇ ಸ್ಪರ್ಶಕ್ಕಿಂತ ಶಕ್ತವಾದ ಆತ್ಮೀಯ ಸಾಮೀಪ್ಯ! ಕವಿ ಭಾವನೆಯಲ್ಲಿ ಈ ಬಳಿಸೋಂಕನ್ನು ಚಿತ್ರಿಸಿಕೊಂಡಾಗ ಕೈಬೆರಳು ನಡುಗಿ, ಕುಂಚಕ್ಕೆ ಏನೂ ಕೆಲಸವಿಲ್ಲ ಎನ್ನಿಸಿ ನಲ್ಲೆಯನ್ನು ತನ್ನ ಬಳಿಗೆ ಆಹ್ವಾನಿಸುತ್ತಾನೆ. ಆಕೆಯ ರೂಪ ಚಿರಕಾಲವಿರಲೆಂಬ ಆಸೆಯಿಂದ ಚಿತ್ರಗಾರ ಕುಂಚ ಹಿಡಿದು ರೂಪಿಸಲು ಪ್ರಯತ್ನಮಾಡಿದ.

ಈ ಕವಿತೆಯಲ್ಲಿ ಇನ್ನೊಂದು ಒಳನೋಟವಿದೆ. ಅದು ಚಿತ್ರಗಾರ ಮತ್ತು ಆತನ ಪತ್ನಿಯ ನಡುವಣ ದಾಂಪತ್ಯ ಸಂತೋಷ. ಸಹಜವಾಗಿ ಸುಂದರಿಯಾದವಳು ಆಪ್ತಳೂ ಆಗಿ ಪತಿ ಬಯಸುವ ಎಲ್ಲ ಹಾವಭಾವ ವಿಭ್ರಮಗಳನ್ನೂ ಅಭಿನಯಿಸಿ ತೋರಿರುವುದು ಮಾತಿನ ಹಂಗಿಲ್ಲದೆ ನಮ್ಮ ಅನುಭವ ಕೋಶಕ್ಕೆ ಇಳಿಯುತ್ತದೆ. ಇದೊಂದು ಸಾರ್ಥಕ ಕವನ.

ಈ ಕವನದಲ್ಲಿ ಸಾಧಕನೋರ್ವನ ವಿಫಲ ಪ್ರಯತ್ನದ ಪ್ರಾಮಾಣಿಕ ನಿರೂಪಣೆ ಇದೆ. ಸೋಲಿಗೆ ಗೆಲುವಿನ ಸ್ಪರ್ಶ ನೀಡಿರುವುದೇ ಇಲ್ಲಿನ ಹೆಗ್ಗಳಿಕೆ. ಏಕೆಂದರೆ ಆ ಸೋಲು ನೈಸರ್ಗಿಕವಾದುದು. ಮಾನವನ ಸಹಜವರ್ತನೆಗೆ ಸಾಕ್ಷಿಯಾದುದು. ಕಲೆ ಏನಿದ್ದರೂ ಅದು ವಾಸ್ತವದ ನೆರಳು. ಅದು ನಿಜದ ಪ್ರತಿಬಿಂಬವೇ ಹೊರತು ತಾನೇ ನಿಜವಲ್ಲ. ಕಲೆ ನಿಜಕ್ಕೆ ಹತ್ತಿರವಾಗಬಹುದು ಅಥವಾ ನಿಜವನ್ನು ಮಹೋನ್ನತವಾಗಿ

ವೈಭವೀಕರಿಸಬಹುದು. ಆದರೆ ತಾನೇ ನಿಜವಾಗಲು ಸಾಧ್ಯವಿಲ್ಲ. ನಿಜದ ಸುಖಕ್ಕೆ ಮೀಟುಗೋಲಾಗಬಹುದು. ಆದರೆ ನಿಜಕ್ಕೆ ಸಾಟಿಯಾಗಲಾರದು.

ಕಲೆಗಾರನಾದ ಕವಿ ಉದ್ದಕ್ಕೂ ಸಾಧನೆಯ ಶಿಖರವನ್ನೇರುತ್ತಾ ಹೋಗುತ್ತಾನೆ. ಆದರೆ ವಾಸ್ತವವಾದಿಯಾದ ಕವಿ ಕೊನೆಯಲ್ಲಿ ಹೆಣ್ಣಿನ ಜೀವಂತ ಸೌಂದರ್ಯದಲ್ಲಿ 'ಮೌಲ್ಯ' ಕಾಣುತ್ತಾನೆ. ಅವಳ ನಿಜದ ಸೌಂದರ್ಯ ಈಗಾಗಲೇ ಹೃದಯ ಭಿತ್ತಿಯ ಮೇಲೆ ಇರುವುದರಿಂದ ಮತ್ತೆ ಅದನ್ನು ಚಿತ್ರದ ಮೂಲಕ ಕಾಣುವ ಅಗತ್ಯವಿಲ್ಲ ಎನ್ನುತ್ತಾನೆ. ಈ ಬಗೆಯ ಜೀವನ ಮತ್ತು ಕಲೆಯ ಅಂತರ್‌ಸಂಬಂಧ ವೇದಗಳ ಕಲದಿಂದಲೂ ಚರ್ಚೆಗೊಳ್ಳುತ್ತಲೇ ಬಂದಿದೆ. ಅಂತಹ ಒಂದು ಮಾನಸಿಕ ಸಂಘರ್ಷ ಇಲ್ಲಿ ಸುಂದರವಾದ ಕವನವಾಗಿದೆ.

ಕಾವ್ಯದುದ್ದಕ್ಕೂ ಶೃಂಗಾರ ಸ್ಥಾಯಿಯಾಗಿದೆ. ಹೆಣ್ಣಿನ ಚೆಲುವಿನ ಸುಂದರ ಬಣ್ಣನೆ ಅದಕ್ಕೆ ಪುಟ ಕೊಟ್ಟಿದೆ. ಅರ್ಥವತ್ತಾದ ಮಾನಸಿಕ ಒಳತೋಟಿ. ಕ್ರಮಕ್ರಮೇಣವಾಗಿ ಹೆಣ್ಣಿನ ಚೆಲುವಿನ ಗೆಲುವು. ಕಲಾವಿದನ ಸೋಲು ಅದನ್ನು ಒಪ್ಪಿಕೊಳ್ಳುವ ಪ್ರಾಮಾಣಿಕತೆ ಕಾವ್ಯದಲ್ಲಿ ಮನ ನಂಬುವಂತೆ ಚಿತ್ರಿತವಾಗಿದೆ.

ಕವಿ ಒಂದುದಿನ ಬೆಳದಿಂಗಳನ್ನು ನೋಡುತ್ತಿದ್ದಾರೆ, ಇದಕ್ಕಿದ್ದಂತೆ ಆ ತಿಂಗಳಿನ ಕಡಲಿನಲ್ಲಿ ಒಂದು ನೆರಳು ಮೂಡುತ್ತದೆ. ಅಲ್ಲಿ ಕವಿಗೆ ಒಂದು ಭವ್ಯ ಮಾನವಾಕೃತಿ ಕಾಣುತ್ತದೆ. ಅದು ಶಾಂತ ಗಂಭೀರವಾದ ಮುಖ ಆದರೂ ದಿಟ್ಟಿಸಿ ನೋಡಿದಾಗ ಆ ಭವ್ಯ ಮುಖಮುದ್ರೆಯಲ್ಲಿ ಯಾವುದೋ ಶೋಕಭಾವ **'ಮಹಾರಾತ್ರಿ'** ಕವನದಲ್ಲಿ ಧ್ವನಿತವಾಗುತ್ತದೆ. ಇನ್ನಷ್ಟು ಸೂಕ್ಷ್ಮವಾಗಿ ಗಮನಿಸುತ್ತ ಹೋದಂತೆ ಬಸವಣ್ಣನವರ ಎದೆಯ ಬನದಲ್ಲಿ ಕಿಚ್ಚಿನ ಉರಿ ಏಳುತ್ತಿರುವುದು ಕಾಣುತ್ತದೆ. ನಾನಾ ಚಿಂತನೆಗಳಿಂದ ದೀಪ್ತನಾದ ಕವಿ ಬಸವಣ್ಣನವರನ್ನೇ ಕೇಳುತ್ತಾನೆ.

ತಿರೆಯ ಸಾಮ್ರಾಜ್ಯದಲಿ ನೀನೋರ್ವ ಸಿರಿವಂತ
ಅರಸನಾಳ್ವಿಕೆಯಲ್ಲಿ ನೀನೋರ್ವನಧಿಕಾರಿ
ಭೋಗ ಸಂಪದಗಳಿಗೆ ನೆಲವೀಡು ಕಲ್ಯಾಣ
ದಂಡನಾಯಕ ನೀನು ಏಕಿಂತು ನಿಡುಸುಯ್ವೆ.
ಗುಡಿಯೊ ಗುಡಿಸಲ ಸೇರಿ ಭಿಕ್ಷೆ ಬೇಡುವ ನರನ
ಮಡದಿ ಮಕ್ಕಳಗೂಡಿ ಸುಡುವ ಬಾಳಿನ ಹಾಡೊ
ಕಡುಹಗೆಯ ಕೈದುಗಳಿಗಾಹುತಿಯೊ ಅಭಿಮಾನ
ಏನು ಸಂಕಟ ನಿನಗೆ ಮಾರ್ನುಡಿಯ ನುಡಿಯದಿಹೆ.

ಆ ಮೂರ್ತಿಯನ್ನು ನೋಡುತ್ತ ಧ್ಯಾನಿಸುತ್ತ ಇರುವಾಗ ಕವಿಗೆ. ಉತ್ತರವೂ ಭಾಸವಾಗುತ್ತದೆ. ದೇವಮಂದಿರವೊಂದನ್ನು ಪೂರ್ಣಗೈಯುವ ಆಸೆ ಬಸವಣ್ಣನವರದಾಗಿತ್ತು.

ದೇವ ಮಂದಿರವೊಂದ ಪೂರ್ಣಗೃವಾಸೆಯಲಿ
ಮಂಗಳದ ಮೂರುತಿಯಲಿ ಅಂಗಕಳವಡಿಸಿರ್ದ
ಲಿಂಗಸಂಗದ ಭಾವ ಸುಖದ ಸವಿ ನನಸೊ
ಹೊಂಗಳಸವನು ಹೂಡಿ ಶುಭಮಂಗಳವನೊರೆದೆ.[೨೩೧]

ಮಾನವನನ್ನು ದೇವ ಸಾನ್ನಿಧ್ಯಕ್ಕೆ ಸಿದ್ಧಪಡಿಸುವುದು ಅವರ ಕನಸಾಗಿತ್ತು. ಇದು ನೆರವೇರಲಿಲ್ಲವೆಂಬ ಅರಕೆಯ ಭಾವ ಅವರ ಮುಖದಲ್ಲಿ ಕವಿಗೆ ಕಾಣುತ್ತದೆ.

ಮಹಾತ್ಮರ ನೆನಪು ಆದಾಗಲೆಲ್ಲ ಅವರುಗಳ ಸಾಧನೆಯ ಬಗೆಗೆ ಮೆಚ್ಚುಗೆ ಮೂಡಿದರೆ ಇನ್ನೊಂದು ಕಡೆ ಜನತೆ ಅದನ್ನು ಸರಿಯಾಗಿ ಸ್ವೀಕರಿಸಲಿಲ್ಲ ಎಂಬ ಕೊರಗು ನಮ್ಮ ಚಿಂತನೆಗೆ ಗಂಟುಹಾಕಿಕೊಳ್ಳುತ್ತದೆ.

ಗಾಂಧೀಜಿಯವರ ಗೋರಿಯನ್ನು ನೆನೆದಾಗ ಮೂಡಿರುವ ಕವನ 'ರಾಜಘಾಟ್' ನವೋದಯದ ಕವಿಗಣಕ್ಕೆಲ್ಲ ಗಾಂಧೀಜಿ ಸ್ಫೂರ್ತಿಯ ಕೇಂದ್ರವಾಗಿದ್ದರು. ಆಗಿನ ಯುವಕರೆಲ್ಲ ಜೀವನದ ಆದರ್ಶಗಳನ್ನು ಗಾಂಧೀಜಿಯವರು ಬದುಕಿದ, ಬೋಧಿಸಿದ ರೀತಿಯಿಂದ ರೂಪಿಸಿಕೊಳ್ಳುತ್ತಿದ್ದರು. ಗಾಂಧೀಜಿಯವರ ಜೀವನಸೂತ್ರಗಳು ಪ್ರಪಂಚದ ಆರೋಗ್ಯಕರ ಜೀವನಕ್ಕೆ ಅತ್ಯಗತ್ಯವಾದ ಸೂತ್ರಗಳೇ ಆಗಿವೆ ಎಂಬುದನ್ನು ಕವಿ ಇಲ್ಲಿ ಗುರುತಿಸಿದ್ದಾರೆ.

ರಾಯಭಾರಿಗಳಿತ್ತ ಹೂದಂಡೆ ಹೊರೆಯೇನು?
ವಿಶ್ವ ಪಯಣಿಗರಿತ್ತ ಕರುಣೆ ಕಾಣಿಕೆಯೇನು?
ಕಲೆ ಜ್ಞಾನ ಸಂಸ್ಕೃತಿಯ ನಿತ್ಯ ನೈವೇದ್ಯವೇನು?
ಹಿಂಸೆಯೆಂದೆಂಬೊಂದು ಕಿಚ್ಚು ಕರಗದತನಕ?[೨೩೨]

ಗಾಂಧೀಜಿಯವರೊಂದಿಗೇ ಅವರು ಕಾಣಿಸಿದ ಆದರ್ಶಗಳೂ ಮರೆಯಾಗಿವೆಯೆಂದು ಕವಿ ಕೊರಗಿದ್ದಾರೆ, ಆದರೂ ಗಾಂಧಿ ಒಂದು ಲೋಕಕಲ್ಯಾಣದ ಭಾವಕ್ಕೆ ಕೇಂದ್ರ ಬಿಂದುವಾಗಿರಲಿ ಎಂಬುದು ಕವಿಯ ಆಶಯ.

ಹಿಂಸೆಯಿಂದೆಂದೆಂದು ಲೋಕ ಬದುಕದು ಎಂದು
ಅಣುಬಾಂಬು ಅಸ್ತ್ರಗಳ ಅತುಲ ಜಲಕೆಸೆದಂದು
ಮಿಥ್ಯದಿಂ ಸತ್ಯದೆಡೆ ಮನುಜ ನಡೆ ಎಂದಂದು
ದೆಸೆಮೊಳಗಿ ದನಿಗೂಡಲಿ ನಿನ್ನ ಶಾಂತಿಯಂದು[೨೩೩]

ಗಾಂಧಿಯವರ ಆದರ್ಶಗಳೆಲ್ಲ ಇಂದು ಪಳೆಯುಳಿಕೆಗಳಂತೆ ಕಂಡರೂ ಸಮಾಜ ಚಿಂತಕರ ದೃಷ್ಟಿಯಲ್ಲಿ ಮೇರುಸದೃಶ ವ್ಯಕ್ತಿಯಾಗಿಯೇ ಗಾಂಧೀಜಿ ಉಳಿದುಕೊಂಡಿದ್ದಾರೆಂಬುದಕ್ಕೆ ಈ ಕವಿತೆ ಸಾಕ್ಷಿ. ಈ ಕವಿತೆ ಶೋಕಗೀತೆಯಾಗುವುದರ ಜೊತೆಗೆ ಗಾಂಧೀಜಿಯವರ ಆದರ್ಶಗಳೂ ನಮ್ಮ ದೇಶದಲ್ಲಿ ಗುಂಡೇಟಿಗೆ ಸಿಕ್ಕಿವೆ ಎಂಬ ವಿಚಾರವನ್ನು ಹರಳುಗಟ್ಟಿಸುತ್ತದೆ.

ಹೆಣ್ಣಿನ ಸೌಖ್ಯ ಸೌಮ್ಯಮುಖದ ಹಿಂದೆ ಒಳಗಿನ ಯಾತನೆಗಳನ್ನು ಕೆದಕಿ ನೋಡುವ ಕವಿಯ ಹಂಬಲ **'ಮುಳ್ಳು ತಾಕಿತೆ ರಮಣಿ'** ಕವನದಲ್ಲಿ ವ್ಯಕ್ತವಾಗುತ್ತದೆ. ಚಳಿಗಾಲ ಬಂದರೆ ಮತ್ತೆ ಬೇಸಗೆ ಬಂದೀತು ಎಂಬ ಆಶಾಭಾವ ಆಂಗ್ಲ ಕವಿಯೊಬ್ಬರದಾದರೆ ಕವಿ ಇಲ್ಲಿ

ಮಾಂದಳಿರ ಮೈದಳೆದ ಸಿರಿ ಬಸಂತನ ಹಿಂದೆ
ನಿಟ್ಟುಸಿರನೆಳೆದಳಲ ಕುಳಿರೆ ಕಾಯುತ್ತಿರುಹುದು
ನಿನ್ನ ಕೋಮಲ ಕಾಯ ಹೂವಿನೆದೆ ಮರೆಯಲ್ಲಿ
ಎನಿತು ಮುಳ್ಳುಗಳಿಹವೋ ಆರು ಬಲ್ಲರೆ ನಾರಿ?

ಎನ್ನುತ್ತಾನೆ. ಅಳಲ ಕುಳಿರು ಎಂದರೆ ಕೊರಗಿನ ಕೊರೆಗಾಳಿ. ಕವಿ ಹೆಣ್ಣಿನ ಬಗೆಗೆ ಎಂಥ ಅನುತಾಪವುಳ್ಳವನು ಎಂಬುದು ಇಲ್ಲಿ ಸ್ಪಷ್ಟ.

ಮುಳ್ಳ ತಾಕಿತೆ ರಮಣಿ ಮುಗುಳು ಮಿಡಿಯುವ ಕಾಲಕೆ?
ಸೊಗದ ಹಿಂದಿನ ದುಗುಡ ಇರುಳ ಹಿಂದಿನ ಹಗಲು

ಈ ಮಾತಿನಲ್ಲಿ ಮಮಕಾರದ ನುಡಿಗಣಿತದ ಹಿಂದೆ ಯಾತನೆಯೆ ಬಡಿತವಿದೆ. ಅವಳ ಬದುಕನ್ನು ವಿಶ್ಲೇಷಿಸಿದಾಗ

ಹೊಳೆಯ ನೀರಿನ ಕೆಳಗೆ ಮೊಸಳೆ ಬಾಯ್ದೆರೆದಿಹುದು!
ಬಾನ ನೀಲಿಯ ಮಧ್ಯೆ ಮಿಂಚಿನೊಡಲಿನ ಕೆಳಗೆ
ಸಿಡಿಲಿನಬ್ಬರವೆದ್ದು ಗುಡುಗಿಸಿದೆ ಗುಂಡಿಗೆಯ

ಎಂದು ಅಪಾಯದ ಸೂಚನೆಗಳನ್ನೇ ಕವಿ ಕೊಡುತ್ತಿದ್ದಾನೆ. ಸಮಸ್ತ ಸ್ತ್ರೀಕುಲದ ಜೀವಯಾನದ ವಿಶ್ಲೇಷಣೆ ಇಲ್ಲಿದೆ.

ಪತಿಯ ಗೈರುಹಾಜರಿಯಲ್ಲಿ ಮನೆಯ ನಾಲ್ಕು ಮೂಲೆಗಳಲ್ಲಿ ಬಂಧಿತಳಾದ ಪತ್ನಿಯ ಮನಸ್ಥಿತಿಯನ್ನ ಕವಿ **'ಬಂಧನ'** ಕವನದ ಮೂಲಕ ವಿವರಿಸಲು ಹೊರಟಿದ್ದಾರೆ. ಪತಿಯ ಗೈರುಹಾಜರಿಯಲ್ಲಿ ಪತ್ನಿ ರಾತ್ರಿ ಸಣ್ಣ ಹಣತೆಯನ್ನು ಹಚ್ಚಿ ಸತಿಯ ಶುಭವನ್ನು ಹಾರೈಸುತ್ತಾಳೆ. ಆದರೆ ಮಾನಸಿಕವಾಗಿ ಅವಳು ಬಿಡುಗಡೆಯ ಭಾವವನ್ನು ಹೊಂದುತ್ತಿದ್ದಾಳೆ.

ಆವುದೋ ಬನದಲ್ಲಿ ಇನಿಯನೊಂದಿಗೆ ನಲಿಯೆ
ಮನೆಯ ಮಂದಿಯು ತಡೆದು ನಿಲಿಸಬಲರೇ ಮನವ?

ಈ ದ್ವಂದ್ವ ಚಿತ್ರಣವೇ ಕವಿತೆಯ ವಸ್ತು. ಭೌತಿಕವಾಗಿ ಆಕೆಗೆ ಅಡೆತಡೆ ಇವೆ.

ಸಂಜೆ ಸಾಗರದಿಂದ ಕೆಂಪುರತ್ನವನರಸಿ
ಸಾಲಿಟ್ಟು ಬೆಳಗುತಿಹ ಚೆಲುವಿನರಸಿಯ ಕೂಡೆ

ಸಾಗಿ ಹೋಗಿದೆ ಮನವು ಅಭಿಸಾರಕೆಂದು
ಒಲವು ಕಟ್ಟುವ ನೇಣು ಹಲ್ಲಲ್ಲಿವಿನ್ನು[೨೪೮]

ಆದರೆ ಮನೋಸ್ಮೃತಿ ಪಟಲವನ್ನು ಹಾಯಿದೋಣಿಗೆ ಬಳಸಿಕೊಂಡರೆ ಆಕೆ ಎಲ್ಲ ಬಂಧನಗಳನ್ನು ಮೀರಿ ಪತಿಯ ಬಳಿ ಇರಬಹುದಲ್ಲ ಎಂಬುದು ಕವಿಯ ಆಶಯ.

ಬದುಕಿನಲ್ಲಿ ಸತ್ಯ-ಶಿವ-ಸುಂದರತೆಯನ್ನು ಆರಾಧಿಸುವ ಮನಸ್ಸು ಹೊಸ ವರ್ಷದಲ್ಲೂ ಅದು ಪುನಃ ಸಾಕಾರಗೊಳ್ಳಬೇಕೆಂದು ಹಂಬಲಿಸುತ್ತದೆ. ಆ ಹೊಸವರ್ಷದ ಸಂಭ್ರಮ, ಉಲ್ಲಾಸಗಳು ಸಾಮಾನ್ಯವಾದವುಗಳಲ್ಲ. ನಿಸರ್ಗದ ಅನಂತ ಚೆಲುವನ್ನು ವೈಭವೀಕರಿಸಿ ನೋಡುವಂಥವು. ಅಂತಹ ಮನಸ್ಸೊಂದು ಮೂರ್ತರೂಪದ ವ್ಯಕ್ತಿತ್ವ ಗಳಿಸಿಕೊಂಡು 'ಹೊಗಳುಭಟ್ಟ'ರಾಗಿ ಪರಿಮಿಸಿರುವುದನ್ನು '**ಹೊಸ ವರ್ಷದ ವೈತಾಳಿಕರು**' ಕವನ ಧ್ವನಿಸುತ್ತದೆ.

ವೈತಾಳಿಕರು ಎಂದರೆ ವಂದಿಮಾಗಧರು, ಕಥಕರು ಎಂದರ್ಥ. ಇವರು ದೊರೆಯ ವೈಭವವನ್ನು ಸಭೆಗೆ ಪರಿಚಯಿಸುತ್ತಾರೆ. ಕವಿಯ ದೃಷ್ಟಿಯಲ್ಲಿ ಹೊಸ ವರ್ಷದ ಹೊಸಿಲಲ್ಲಿ ನಿಲ್ಲುವ ವೈತಾಳಿಕರು ಜೀವಿಗಳ, ಲೋಕದ ಅಭ್ಯುದಯವನ್ನು ಕುರಿತು ಹಾಡುತ್ತಿದ್ದಾರೆ. ಹೊಸ ವರ್ಷದ ಉದಯದೊಂದಿಗೆ ಭೂತ ವರ್ತಮಾನ ಭವಿಷ್ಯತ್ತುಗಳ ಚಿಂತನೆಯೂ ಬೆರೆತುಗೊಂಡಿರುವ ಸಂಕೀರ್ಣ ಕವನ ಇದು.[೨೪೯]

ಈ ವೈತಾಳಿಕರು ಹೊಸವರ್ಷಕ್ಕೆ ಮಂಗಳ ಹಾಡಲು ಮೂಡಣ ಬಾನಿನ ಮುಗಿಲ ತೆರೆಯನ್ನು ಸರಿಸುತ್ತ ಬರುವ ಇವರು ಕಿನ್ನರ ಕಂಠದಿಂದ ಚಿನ್ನದ ಗಿಂಡಿಯಲ್ಲಿ ಅಮೃತವನ್ನು ಇಳೆಗೆ ಸುರಿಯುತ್ತಾರೆ. ತಮ್ಮ ಬರುವಿಕೆಯನ್ನು ಮುಂಗಡವಾಗಿ ಸಾರುವಂತೆ ರನ್ನದ ಕಹಳೆಯನ್ನು ಊದುತ್ತಾರೆ. ಸುಂದರ ಕಂಠದಿ ಗೀತೆಯನ್ನು ಹಾಡಿ, ಒಲವನ್ನು ಊಡುತ್ತಾ ಧರೆಯ ಕಡೆಗೆ ಬರುತ್ತಾರೆ.

ಹೊಸ ವರ್ಷದ ಹೊಸ ಹೂಗಳು ಹೆಣೆದಿಹ
ಮುಕುಟದ ತಲೆಯಲಿ ತೊಟ್ಟಿಹರು
ಬನಸಿರಿ ಸುಂದರ ತರುಲತೆ ತಂದಿಹ
ಚಿನ್ನದ ಚಿಗುರನು ಉಟ್ಟಿಹರು
ನವವರ್ಷದ ನವಸಂದೇಶವನು
ಧರೆಯಲಿ ಸಾರುತ ಬಂದರು ತಾವು.[೨೫೦]

ಇವರು ಭೂಮಿಯಲ್ಲಿ ಬೆಳೆದವರಲ್ಲ. ಅವರು ದೇವಲೋಕದಿಂದ ಧರೆಗೆ ಇಳಿದು ಬಂದ ಶುಭಸಂದೇಶಕರು ಎನ್ನುವುದು ಕವಿಯ ಕಲ್ಪನೆ. ಹೊಸ ಹೂಗಳ ಮುಕುಟವನ್ನು ತೊಟ್ಟು, ಚಿನ್ನದ ಚಿಗುರನ್ನು ಉಟ್ಟು ನವವರ್ಷದ ನವಸಂದೇಶವನ್ನು ಭೂಮಿಗೆ ಸಾರುತ್ತಾರೆ. ಸುಂದರ ಭಾವದ ಸುಮ ಮುಡಿದು, ಚಂದದ ಚಿಗುರಿನ ಕಲೆ

ಧರಿಸಿದರೂ ಅವರಿಗೆ ಮನುಷ್ಯಲೋಕದ ಕಷ್ಟಗಳ ಅರಿವಿದ್ದು ಸುಖದುಃಖದ ಗಿರಿಕಣಿವೆಯನ್ನೇರಿ ಬಂದವರು ಆಸೆ ನಿರಾಸೆಯ ಬಯಲಲ್ಲಿ ಚಿಗುರು ಹಿಡಿದು ಬಂದವರು. ದಿವಿಜರ ಕನಸಿನ ಭಾವದ ಸರೋವರದಲ್ಲಿ ಮಿಂದು ಎದ್ದವರು, ಜೀವವಿಕಾಸ ಇವರ ಗುರಿ, ಮುಗಿಲೆಡೆಗೆ ಏರುವ ಯಾನವನ್ನು ಹತ್ತಿಸಲು ಇವರು ಬರುತ್ತಾರಂತೆ. ಜಗದ ಸೌಂದರ್ಯದಿಂದ ಉಲ್ಲಸಿತವಾದ ಕವಿ ಮನಸ್ಸು ಕಲ್ಪನೆಯ ಬೆನ್ನು ಏರಿ ಮುಗಿಲಯಾನಕ್ಕೆ ಹಂಬಲಿಸುತ್ತದೆ. ಹಂಬಲ ಹಾರುವ ಹಕ್ಕಿಯಾಗುತ್ತದೆ. ಅದಕ್ಕೆ ಭಾವದ ಅನುಭವವೇ ರೆಕ್ಕೆಯಾಗಿ, ಮನದುತ್ಸಾಹವೇ ಸಾರಥಿಯಾಗಿ ಹೊಂದಿಸುತ್ತಾರೆ. ಇವರು ರವಾನಿಸುವ ಸಂದೇಶವೂ ಸ್ವಾಗತಾರ್ಹವಾದದ್ದೇ:

ಹಳದನು ಕಳಚಿರಿ ಹೊಸದೈತಂದಿದೆ
ಸೊಗದಲಿ ಸವಿಯಿದೆಯನುಭವಿಸಿ
ಜೀವದೊಳುದಿಸಿದೆ ಹೊಸ ಕಾವೆದ್ದಿದೆ
ದುಗುಡದೊಳಡಗಿದೆ ತಡಬೆರೆಸಿ
ಬಲೆಬೀಸುವ ಜಗಜಾಲವೆ ಸಾಕು
ಕಲೆ ಸಾರುವ ತವ ನನ್ನಿಯೆ ಬೇಕು.[೨೬೧]

ಬದುಕನ್ನು ಲವಲವಿಕೆಯಿಂದ ತುಂಬಿಸುವ ಸಜೀವ ಧೋರಣೆ, ಆಶಾವಾದ, ವ್ಯಕ್ತಿಸಾಹಸಕ್ಕೆ ಕರೆ-ಈ ಭಾವಗಳೆಲ್ಲ ಇಲ್ಲಿ ಕಲೆಯಾಗಿ ಮಾರ್ಪಟ್ಟಿರುವುದು ಮೆಚ್ಚಬೇಕಾದ ವಿಷಯ. ಕವನದ ಆಶಯವನ್ನು ಉತ್ಸಾಹದಿಂದ ಜೀಕಿಸುತ್ತ ಸಾಗುವ ಈ ಕವನದ ಲಯಮಾಧುರ್ಯವು ನವೋದಯದ ಸಿದ್ಧಿಗಳಲ್ಲಿ ಒಂದು ಎನ್ನಬಹುದು.

ಒಟ್ಟಿನಲ್ಲಿ ಸೌಂದರ್ಯಾರಾಧನೆಯೊಂದಿಗೆ ಸಂದೇಶವನ್ನೂ ಒಳಗೊಂಡು ನವಿರುಭಾವವನ್ನು ಕಟ್ಟಿಕೊಡುವುದರಲ್ಲಿ ಕವನ ಸಾರ್ಥಕತೆಯನ್ನು ಪಡೆದಿದೆ.

'ಒಂದಿರುಳು' ಇದೊಂದು ನಿಡುಗವನ. ಮೃತ್ಯು ಚಿಂತನ ಇದರ ವಸ್ತು. ಕಾಲ ಕತ್ತಲಿನ ಸಾಮ್ರಾಜ್ಯದ ಬೆಳಗು-ಕತ್ತಲೆಗಳಿಗೆ ಇರುವ ಎಲ್ಲ ಶಾಬ್ದಿಕ ಅಲಂಕಾರಿಕ ಅರ್ಥಗಳೂ ಇಲ್ಲಿ ಅನ್ವಯವಾಗುತ್ತವೆ. ಬೆಳಕು ದೃಷ್ಟಿಗೆ, ಕಾಣ್ಕೆಗೆ, ಮನಸ್ಸಿನ ಸಮಾಹಿತತೆಗೆ, ವಿದ್ಯೆಗೆ, ಲೋಕಹಿತಕ್ಕೆ, ನಿರ್ಭಯಕ್ಕೆ ಸಂಕೇತವಾದರೆ ಇರುಳು ಕಪ್ಪುತನಕ್ಕೆ-ಅಜ್ಞಾನಕ್ಕೆ-ಮೌಢ್ಯಕ್ಕೆ- ರೌದ್ರತೆಗೆ ಭಯಾನಕತೆಗೆ-ಸಾವಿಗೆ-ಹಿಂಸೆಗೆ-ಆಕ್ರಮಣಕ್ಕೆ ಸಂಕೇತವಾಗುತ್ತದೆ.

ಸಾವು ಎಂಬ ಕತ್ತಲೆ ಜೀವನವನ್ನು ಮಂಗನಂತೆ ಕುಣಿಸುತ್ತದೆ. ಮಂಕುಬೂದಿ ಎರಚುತ್ತದೆ. ಮಾಯೆಯನ್ನು ಮುತ್ತುಕ್ಕುತ್ತದೆ. ಈ ಕರಿಯ ರೆಕ್ಕೆಯ ಹೊಡೆತಕ್ಕೆ ಸಾಮ್ರಾಜ್ಯಗಳೇ ತತ್ತರಿಸಿ ನಿರ್ಮೂಲವಾಗಿವೆ. 'ಬಾಳು ಕನಸಲ್ಲ ಸೊಗದ ಜೀವನ'[೨೬೨] ಎಂದು ವಿಶ್ವವಿಜೇತರಾಗಿ ಮೆರೆದವರು ಕೂಡಾ ರೆಕ್ಕೆಯ ಹೊಡೆತಕ್ಕೆ ಸಿಕ್ಕಿ ನಲುಗಿದ್ದಾರೆ.

ಕಾಲಾಗ್ನಿ ಹಬ್ಬಿರಲು
ಸತ್ಯ ಮಡಿದಿರಲು
ಭೇದಭಾವದ ಬುದ್ಧಿ
ಜಗವ ಸುಡುತಿರಲು
ಆತ್ಮ ಶಾಂತಿಯ ರಸವು
ಬತ್ತಿ ಬಯಲಾಗೆ,
ಜೀವಕಳೆ ಜಡವಾಗಿ
ಚೇತನವು ಮಡಿದು
ಕೊರಗುತಿಹ ಜಡದಲ್ಲಿ
ಚೇತನವ ತಂದು
ಸೊದೆಯ ಸವಿಯನು ನೀಡಿ
ರಸದ ರುಚಿಯಿತ್ತು
ಕಾರಣಿಕರವತರಿಸಿ
ಚಿರಶಾಂತಿಯಿತ್ತು
ಜೀವ ರಸವಾಹಿನಿಯ
ಹೊನಲೊಂದ ಹರಿಸಿ
ಬರಿಯೆದೆಗೆ ಉಣಿಸಿತ್ತು
ಹಾದಿಯನು ತೋರಿ.

ಎಲ್ಲ ಸೋತಿರುವ ಕಡೆ ಕಾರಣಿಕರು ಸಿದ್ಧರು. ಈ ಕತ್ತಲ ಗರ್ಭವನ್ನು ಸೀಳಿ ತಮ್ಮೆದೆಗೆ ಬೆಳಕನ್ನು ತಂದುಕೊಂಡು ಸಾಕ್ಷಾತ್ಕಾರದ ನಂತರ ಲೋಕಕ್ಕೆ ತಮ್ಮ ತಪಸ್ಸನ್ನು ಧಾರೆಯೆರೆಯಲು ನುಗ್ಗುತ್ತಾರೆ ನಿಜ. ಅವರು ಜೀವರಸವಾಹಿನಿಯ ಹೊನಲನ್ನು ಕೊಡಬಲ್ಲವರು. ಆದರೆ ಕತ್ತಲೆಯ ಇಂದ್ರ ಹೆಣ್ಣಿನ ರೂಪವನ್ನು ಮುಂದಿರಿಸಿ ಇಂಥವರನ್ನೆಲ್ಲ ನಿರ್ನಾಮ ಮಾಡಿರುವ ಸಂಗತಿ ಪುರಾಣದಿಂದ-ಇತಿಹಾಸದಿಂದ ಸ್ಪಷ್ಟವಾಗಿದೆ. ಹೀಗೆ ಕತ್ತಲೆ ಹಿರಿಯರನ್ನು, ಬಾಲರನ್ನು, ಪ್ರೇಮಿಗಳನ್ನು, ಬೆಳಕು ಹುಡುಕುತ್ತ ಹೋದವರನ್ನು ನಿರ್ನಾಮ ಮಾಡುವ ಹುನ್ನಾರ ಹಾಕಿದೆ.

ಕವಿ ಹೇಳುವ ಇನ್ನೊಂದು ಸಂಗತಿಯಿದೆ. ಕತ್ತಲೆ ನಾಟಿ ಸೈನಿಕರು ಮಾಡಿದಂತೆ ಅದ್ಭುತ ವರ್ಣರಹಿತ ಪ್ರಚಾರದಲ್ಲಿ ತೊಡಗುತ್ತದೆ. ಕತ್ತಲೆ-ಸಾವುಗಳ ಬಗೆಗೆ ಜನರಲ್ಲಿ ಭಯಭಾವ ತುಂಬಿಕೊಳ್ಳುವಂತೆ ಮಾಡಿದೆ.

ಮೃತ್ಯು ಭೀಕರ; ಅದರ ಒಡಲು ಕರಿದು, ಅದು ಹಿಂಸಾಜೀವಿ ಎಂಬ ವ್ಯವಸ್ಥಿತ ಪ್ರಚಾರ ಎಲ್ಲ ಕಡೆ ನಡೆದಿದೆ. ಜನ ಹುಟ್ಟು ಸಾವುಗಳ ಕತ್ತಲೆ-ಬೆಳಕುಗಳ ಅನಿವಾರ್ಯತೆ ಸಹಜತೆಯ ಸೂಕ್ಷ್ಮಗಳನ್ನು ಅರ್ಥಮಾಡಿಕೊಳ್ಳುವ ಗೋಜಿಗೆ ಹೋಗದೆ ಭಯದ ಪ್ಲೇಗಿನ ಸೋಂಕಿಗೆ ಸಿಕ್ಕಿಬೀಳುತ್ತಾರೆ. ದಿಗ್ಭ್ರಾಂತಿ ಕವಿದು ಜನ ಸದಾ ಭೀತಿಯ ರಾಹುವಿನ ಹಿಡಿತದಲ್ಲಿ ನಲುಗುತ್ತಾರೆ.

ಆದರೆ ಈ ಕತ್ತಲು ಗರ್ಭವನ್ನು ಸೀಳಿ ಜ್ಞಾನವೆಂಬ ಬೆಳಕು ವ್ಯಕ್ತಿಯನ್ನು ತಟ್ಟಿ ಎಬ್ಬಿಸಿ ನಲ್ನುಡಿಯನ್ನು ನುಡಿದು ಜೀವಕ್ಕೆ ಭರವಸೆ ತುಂಬುತ್ತಿದೆಯೆಂಬುದನ್ನು ಮರೆಯಬಾರದು. ಹುಟ್ಟು ಸಾವುಗಳೆರಡನ್ನೂ ಮುಕ್ತಸ್ಥಿತಿಯಿಂದ ನೋಡಬೇಕೆಂಬ ಹೊಸ ಬಗೆಯ 'ಪ್ರತ್ಯಭಿಜ್ಞಾದರ್ಶನ' ಈ ಕವಿತೆಯಲ್ಲಿದೆ.

'ಸ್ವಾತಂತ್ರ್ಯ' ಕವನದಲ್ಲಿ ಸ್ವಾತಂತ್ರ್ಯವನ್ನು ಕವಿ ಮಹದೇವಯ್ಯನವರು ಒಂದು ವಸ್ತು ಅಥವಾ ಸ್ಥಿತಿ ಎಂಬ ಭಾವನಾಮವನ್ನಾಗಿ ಕಾಣದೆ ಒಬ್ಬ ವ್ಯಕ್ತಿ ಎಂದು ಕಲ್ಪಿಸಿ ಅದನ್ನು ಸ್ವಾತಂತ್ರ್ಯಪುರುಷ ಎಂದು ಸಂಬೋಧಿಸುತ್ತ ಹೋಗಿದ್ದಾರೆ. ಈ ಕವಿತೆ ಬರೆಯುವ ಅವಧಿಯಲ್ಲಿ ಕನ್ನಡದಲ್ಲಿ ನವೋದಯದ ಮಿತಿಗಳನ್ನು ಸಂದುಗಳನ್ನು ಏಕತಾನತೆಯನ್ನು ಸಿದ್ಧಹಳಿಗಳಲ್ಲಿ ಸಾಗುವುದರ ಅಸುಖವನ್ನೂ, ಆಶಯುಗಳು ಬದಲಾಗಿರುವುದನ್ನೂ ವಸ್ತುಸ್ಥಿತಿಯನ್ನೂ ಕಂಡುಕೊಂಡಿದ್ದರು. ನವ್ಯಕಾವ್ಯ ನಿಧಾನವಾಗಿ ಪಾದಾರ್ಪಣ ಮಾಡುತ್ತಿದ್ದ ಕಾಲ ಅದು. ಛಂದಸ್ಸಿನಲ್ಲಿಯ ಆಡುಮಾತಿನ ಲಯದ ಮುಕ್ತಛಂದ ಜನಪ್ರಿಯವಾಗತೊಡಗಿತ್ತು. ಶ್ರೀ ಟಿ.ಎನ್. ಮಹದೇವಯ್ಯನವರು ಈ ಸಂಕ್ರಮಣ ಸ್ಥಿತಿಯನ್ನು ಕೂಡ ಸೂಕ್ಷ್ಮವಾಗಿ ಗಮನಿಸಿದ್ದರೆಂಬ ಸಂಗತಿ ಹಾಗೂ ಬದಲಾದ ಸಂದರ್ಭದೊಂದಿಗೆ ಹೆಜ್ಜೆ ಹಾಕುವಂಥ ಉದಾರವಾದಿಗಳೆಂಬ ಸಂಗತಿ ಈ ಕವಿತೆಯಿಂದ ಸ್ಪಷ್ಟವಾಗುತ್ತದೆ.

ಸ್ವಾತಂತ್ರ್ಯವು ಬರುವವರೆಗೆ, ಬಂದ ಹೊಸತರಲ್ಲಿ ಜನರಿಗಿದ್ದ ಉತ್ಸಾಹ ಹುಮ್ಮಸ್ಸು ಹೇಳತೀರದು.

ವಿಜಯ ಗೀತೆಗಳೇನು!
ತಾಯ್ನುಡಿಯ ಗೆಲುವೇನು!
ಹಾಡು ಹಾಡಿದುದೇನು!
ಜನನೀ ಜನ್ಮಭೂಮಿಶ್ಚ
ಸ್ವರ್ಗಾದಪಿ ಗರೀಯಸಿ

ಎಂದು ಕೂಗಿದ ಕೊಂಬು ಕಹಳೆಗಳ ಕಲರವವೇನು? ಆದರೆ ಸ್ವಾತಂತ್ರ್ಯದ ಗಿಡವನ್ನು ನೆಟ್ಟು ಅದು ಹೂತು ಹೂಬಿಟ್ಟು, ಕಾಯಿ, ತನಿವಣ್ಣು, ರಸ ಒಸರುವ ತನಕ ಅಷ್ಟೆ. ಅನಂತರದ ಕೆಲವು ವರ್ಷಗಳಲ್ಲಿ ಗಾಂಧೀಜಿಯವರ ಕೊಲೆಯೊಂದಿಗೆ ಈ ಎಲ್ಲ ಆವೇಗಗಳ ಕೊಲೆಯೂ ಆಯಿತು. ಇದನ್ನು ಕವಿ

ನಮ್ಮ ಕೈಗೇಣಿನಲಿ ನಮ್ಮ ಕೊರಲಿನ ಉರುಳೆ
ನಮ್ಮ ನೇಹಿಗರಲ್ಲಿ ನಮ್ಮದೇ ಸಾವಿರಲೆ?
ಕಣ್ಣುಗುಳಿಗಳ ಸುತ್ತ ಕಪ್ಪು ದೆವ್ವದ ನೆರಳು.

ಎಂದು ಸಮರ್ಥ ಶಬ್ದಚಿತ್ರದಿಂದ ಧ್ವನಿಸುತ್ತಾರೆ.

ಟಿ.ಎನ್. ಮಹದೇವಯ್ಯ ಅವರ ಸಮಗ್ರಕಾವ್ಯ ಸಂಪುಟದಲ್ಲಿ 'ಗಿರಣಿಗಳು' ಕವಿತೆ ನವೋದಯದ ಭಾವನಾತ್ಮಕತೆಯಿಂದ ಬಿಡುಗಡೆ ಹೊಂದಿದ ನಿಷ್ಠುರ ವಾಸ್ತವದ ಚಿಂತನೆಯನ್ನು ಒಳಗೊಂಡಿದೆ. ಕನ್ನಡ ಸಾಹಿತ್ಯದಲ್ಲಿ ತತ್ವಪದಕಾರರಾದ ಶಿಶುನಾಳ ಶರೀಫರು ಗಿರಣಿಗಳನ್ನು ತಾತ್ವಿಕ ಚಿಂತನೆಗೆ ಪ್ರತಿಮಾತ್ಮಕವಾಗಿ ಬಳಸಿಕೊಳ್ಳುತ್ತಾರೆ. ಆದರೆ ಇಲ್ಲಿ ಕವಿ ಗಿರಣಿಗಳನ್ನು ಯಾವುದೇ ಬಗೆಯ ಪ್ರತಿಮಾತ್ಮಕತೆಗೆ ಬಳಸಿಕೊಳ್ಳದೆ ವಾಚ್ಯದ ನೆಲೆಯಲ್ಲಿಯೇ ಗಿರಣಿಗಳ ಅದ್ಭುತ ಕಾರ್ಯವೈಖರಿಗೆ ಸಂಭ್ರಮಾಶ್ಚರ್ಯಗಳಿಂದ ಪರೋಕ್ಷವಾಗಿ ಪ್ರತಿಕ್ರಿಯಿಸಿ ಅವು ಮನುಷ್ಯ ಸಮಾಜಕ್ಕೆ ಎಷ್ಟು ಮಾರಕವಾಗಬಲ್ಲುದೆಂಬುದನ್ನು ನಿಷ್ಠುರ ಶಬ್ದಗಳಲ್ಲಿ ವಿವರಿಸುತ್ತಾರೆ.

ಗಿರಣಿಗಳ ಅದ್ಭುತ ಕಾರ್ಯಕ್ಕೆ ಆನಂದ ಆಶ್ಚರ್ಯಗಳನ್ನು ಅಭಿವ್ಯಕ್ತಿಸುತ್ತಿರುವ ವ್ಯಕ್ತಿಯನ್ನು ಸಂಬೋಧಿಸಿ ಹೇಳುವ ಮೊದಲ ಭಾಗದ ಕವಿತೆಯಲ್ಲಿ ಆ ವ್ಯಕ್ತಿಯ ಪ್ರತಿಕ್ರಿಯೆಯನ್ನು ಸೂಕ್ಷ್ಮವಾಗಿ ಗಮನಿಸಿದ ಕವಿ ಪ್ರಶ್ನೆಗಳ ಮೂಲಕವೇ ಪರೋಕ್ಷವಾಗಿ ಯಂತ್ರಗಳ ಕಾರ್ಯಸ್ವರೂಪವನ್ನು ವಿವರಿಸುತ್ತಾರೆ. ಯಂತ್ರಗಳ ಭೂತಗಾತ್ರ. ಭೈರವ ರವ, ಚಕ್ರಗಳ ವಾಯುವೇಗ ಅದು ಹೊರ ಉಗುಳುವ ಹೊಗೆ, ಕರ್ಕಶನಾದ ಇದೆಲ್ಲಕ್ಕೂ ವಿಸ್ಮಯ ಪಡುತಿಹೆಯಾ? ಎಂಬ ಪ್ರಶ್ನೆ ಮೇಲಿಂದ ಮೇಲೆ ಕೇಳಿ ಬರುತ್ತದೆ.

ಭೂತದ ತೆರೆದ ಯಂತ್ರವ ನೋಡಿ, ಭರಗುಟ್ಟುವ
ಭೈರವ ರವವನು ಕೇಳಿ 'ಸರಸರ' ಸುತ್ತುವಾ
ಚಕ್ರಗಳ ವಾಯುವೇಗವ ಕಂಡು, ಮನಸೋತು
ನಿಂತಿರ್ಪೆಯೇನು? ಬೆಳಗಿನಿಂದ ಸಂಜೆಯತನಕ
ವಾಯು ರಾಶಿಯನು ಕಲಕಿ ಕಲಕಿ ನಭವನೇ
ಕಪ್ಪುಮೋಡದಿ ಮುಚ್ಚುವಾ ಧೂಮರಾಶಿಯನು
ನೋಡುತಿಹೆಯೇನು? ಕರ್ಕಶದ ಆ ಗಾನವನು
ಕೇಳಿ ಧಡಧಡ ಕುಟ್ಟುವ, ಬಡ ಬಡ
ಬಡಿಯುವ, ಸ್ಥಳದಿಂ ಸ್ಥಳಕೇ ಓಡುತಲಿರುವ

ಭೀಕರಾಕೃತಿಗಳು ಕಂಡು, ಭೈರವ ತೆರೆದ
ನಿನಾದವ ನೀ ಕೇಳಿ ವಿಸ್ಮಯ ಪಡುತಿಹೆಯಾ?

ಯಂತ್ರಗಳ ಭೀಕರಾಕೃತಿ, ಧಡಧಢಗುಟ್ಟಿಸುವ ಮತ್ತು ಕರ್ಕಶ ಸದ್ದು, ಉಗುಳವ ಹೊಗೆ ನಭವಾವರಿಸುವುದು-ಮುಂತಾದ ವಿವರಗಳ ಮೂಲಕ ಪರಿಸರ ಮಾಲಿನ್ಯ, ಶಬ್ದಮಾಲಿನ್ಯಗಳ ಕಡೆ ನಿರ್ದೇಶನವಿದೆ. ಆಕಾರ ಮತ್ತು ಸದ್ದುಗಳ ಬಗ್ಗೆ.......... 'ವಿಸ್ಮಯ ಪಡುತಿಹೆಯಾ?' ಎಂಬ ಪ್ರಶ್ನೆಯ ಹಿಂದೆ ಕವಿಯ ಮೆಚ್ಚುಗೆಯ ಭಾವಕ್ಕಿಂತ ಮುಂದೆ ಬರುವ ಎರಡು ಭಾಗಗಳಲ್ಲಿನ ವಿವರಗಳನ್ನು ಗಮನಿಸಿದಾಗ ಆ ಪ್ರಶ್ನೆಯ ಹಿಂದೆ ಕವಿಯ ಜಿಗುಪ್ಸೆ ಮತ್ತು ಕ್ರೋಧವಿರುವುದು ಸ್ಪಷ್ಟವಾಗಿದೆ. ಯಂತ್ರ ಸಂಸ್ಕೃತಿ ಮಾನವೀಯತೆಗೆ, ಮಾನವೀಯ ಸ್ಪಂದನಗಳಿಗೆ ಹೇಗೆ ಮಾರಕವಾಗಿದೆ ಎಂಬುದನ್ನೇ ವಿವರಿಸುತ್ತಾರೆ.

ಮನುಕುಲದ ವಿನಾಶ ದುಡಿವವರ ದುರಂತವನ್ನು ಬಸಿರಲ್ಲಿ ಅಡಗಿಸಿಕೊಂಡ ಈ ಯಂತ್ರಗಳು ಸಾವಿರಾರು ಸೋದರರನ್ನು ಮುಕ್ಕಿ ತಿನ್ನುವ ಭೂತ, ಪೆಡಂಭೂತವಾಗಿಯೂ, ರಕ್ತ ಹೀರುವ ಮನುಜರ ಮೈ ಮೂಳೆಗಳನ್ನೆಲ್ಲ ಕಟಕಟ ಕಡಿದು ತಿನ್ನುವ ಭೂತಗಣವಾಗಿಯೂ ಅದರ ಶಬ್ದ ಅಟ್ಟಹಾಸವಾಗಿಯೂ ಅದು ಉಗುಳುವ ಹೊಗೆ ನರಮೇಧದ ಕುಂಡದಿಂದ ಹೊರಟ ಹೊಗೆಯಾಗಿಯೂ ಕಾಣಿಸುವುದಲ್ಲದೆ ಈ ಗಿರಣಿಗಳು ಮೃತ್ಯು ಸಂಕೇತಗಳಾಗಿ ಪರಿಣಮಿಸಿವೆ ಎನ್ನುವುದು ಕವಿಯ ನಿಲುವು. ಗಿರಣಿಗಳ ಕೆಲಸಕ್ಕೆ ಹೋಗುವವರು ಮೃತ್ಯುಕೂಪಕ್ಕೆ ಹೋದಂತೆಯೇ! ಅದರ ಕೂಗು ಮೃತ್ಯುವಿನ ಜಯಭೇರಿಯಾಗಿ ಕೇಳಿಸುವುದು.

ನಿನ್ನ ಸೋದರರ ತಲೆಬುರುಡೆಗಳ ಧಡಧಡನೆ
ಕುಟ್ಟಿ, ಕುಟ್ಟಿ, ಮುಂಡಗಳ ಬಡಿಬಡಿದಪ್ಪಳಿಸಿ,
ಗಾಲಿಗಳ ಕೆಳಗೆಲುಬುಗಳ ಕಟಕಟನೆ ಮುರಿದು,
ರಕ್ತವನು ಹೀರಿ ಹೀರಿ, ನರಮಾಂಸವ ಬೇಸಿ-
ತಿಂದು ನಾಲಿಗೆಗಳು ಚಾಚಿ ರಕ್ತವ ಕುಡಿದು,
ಚಪ್ಪರಿಸಿ, ಭೀಷಣತರ ನರ್ತನವ ಮಾಡುತ
ಕೇಕೆಯು ಹಾಕಿ ಎದೆ ಬಿರಿವಂತೆ, ನಗುತಿರುವ
ಪಿಶಾಚಿದಳದಾಲಯ! ನಿನ್ನಣ್ಣತಂಗಿಯರ
ಭೀಕರ ಮಸಣವಿದೇ! ಆ ಯಂತ್ರಗಳ ಮನೆಯಾ!!!

ಯಂತ್ರಗಳ ಗಿರಣಿಗಳ ರೂಪಕಲ್ಪನೆ ಮಾನವಾರೋಪಿತವಾಗಿ ದೈತ್ಯಭೀಕರರಾಕೃತಿಯ ಸಮಾಜ, ಮನುಜಕುಲಘಾತಕ ಶಕ್ತಿಯಾಗಿ ಪರಿಣಮಿಸಿರುವಂತೆ ವಿವರಿಸಿದ್ದಾರೆ. ಬೇಂದ್ರೆಯವರ 'ಕುರುಡು ಕಾಂಚಾಣ' ಕುವೆಂಪುರವರ 'ಕಲ್ಕಿ'ಕವನಗಳನ್ನು ನೆನಪಿಗೆ ತರುತ್ತದೆ. ಇಲ್ಲಿನ ವಿವರಗಳು. ಭಯ, ಬೀಭತ್ಸ, ತಲ್ಲಣಗೊಳಿಸುವ

ರೀತಿಯಲ್ಲಿ ಯಂತ್ರಗಳ ವಿಧ್ವಂಸಕ ಸ್ವರೂಪವನ್ನು ಭಾಷೆಯ ಮೂಲಕ ಪರಿಣಾಮಕಾರಿಯಾಗಿ ಹಿಡಿದಿಟ್ಟಿದ್ದಾರೆ. ಪಟಪಟನೆ ಮುರಿವ, ಕಟಕಟನೆ ಕಡಿವ ಇತ್ಯಾದಿ ಅವ್ಯಯ, ಅನುಕರಣೆ, ದ್ವಿರುಕ್ತಿ ಶಬ್ದಗಳಿಂದ ಮತ್ತು ಬೇಯಿಸಿ ತಿನ್ನುವ ನರಮಾಂಸ, ನಾಲಿಗೆ ಚಾಚಿ ಹೀರಿ ಹೀರಿ ಕುಡಿವ ರಕ್ತ, ಭೀಕರ ಮಸಣ, ನೂರಕ್ಕೆ ನೂರಾಗಿ ಕೇಳಿ ಬರುವ ಗರ್ಜನೆ-ಇತ್ಯಾದಿ ವಿವರಗಳು ಭೀಕರ ಭೀಭಿತ್ಸ ಪರಿಸರವನ್ನು ನಿರ್ಮಿಸಿ ಕೊಡುವಲ್ಲಿ ಸಾರ್ಥಕವಾಗಿವೆ. ಈ ವಿವರಣೆಯ ಹಿನ್ನೆಲೆಯಲ್ಲಿ ಏಕೆ ವಿಸ್ಮಯ ಪಡುವೇ?[೨೭೦] ಏಕೆ ನಸುನಗೆ ತೋರುತಿಹೆ?-ಎಂಬ ಪ್ರಶ್ನೆಗಳಿಗೆ ಉತ್ತರ ಸಿಗುತ್ತದೆ. ಇಷ್ಟೊಂದು ಕ್ರೌರ್ಯ, ಹಿಂಸೆ, ವಿನಾಶ, ದುರಂತಗಳಿಗೆ ದಾರಿಯಾಗಿಸುವ ಈ ಯಂತ್ರಗಳು ಸ್ವಾಗತಾರ್ಹವಲ್ಲ. ಮನುಷ್ಯನನ್ನು ಬದುಕಿಸುವುದಕ್ಕಿಂತ, ಅವನ ಜೀವನೋಪಾಯಕ್ಕೆ ದಾರಿಯಾಗಿಸುವುದಕ್ಕಿಂತ ಅವನ ವಿನಾಶವನ್ನೇ ಒಳಗೊಂಡ ಯಂತ್ರ ಸಂಸ್ಕೃತಿಗೆ ಕೈಗಾರಿಕೀಕರಣಕ್ಕೆ ಧಿಕ್ಕಾರವೆನ್ನುವ ಧೋರಣೆಯೇ ಇಹಿ ಕವನದ ಉದ್ದಕ್ಕೂ ಕಾಣಿಸುತ್ತದೆ. ಈ ಗಿರಣಿ ಕವಿತೆ ಕವಿಯ ಸಾಮಾಜಿಕ ಪ್ರಜ್ಞೆಗೆ, ಮಾನವೀಯ ದೃಷ್ಟಿಗೆ ಅತ್ಯುತ್ತಮ ಉದಾಹರಣೆಯಾಗಿದೆ. ಯಂತ್ರೀಕರಣ, ಕೈಗಾರಿಕೀಕರಣದಿಂದ ಲಕ್ಷಾಂತರ ಮಂದಿ ಉದ್ಯೋಗ ವಂಚಿತರಾದರು. ಪರಿಣಾಮವಾಗಿ ಹಸಿವು, ಬಡತನಗಳಿಂದ ನೋವು, ಸಾವಿನ ಕರಾಳ ಸಮಸ್ಯೆಗಳು ವಿಜೃಂಭಿಸಿದವು. ಇದೆಲ್ಲವನ್ನೂ ಕಂಡ ಮನಸ್ಸಿಗೆ ಯಂತ್ರಗಳು, ಗಿರಣಿಗಳು, ಕಾರ್ಖಾನೆಗಳು ಮನುಷ್ಯನ ಸಾವಿಗೆ, ದುರಂತಕ್ಕೆ ದಾರಿಮಾಡುತ್ತವೆ ಎಂಬ ನಂಬಿಕೆ ಬಲಿದಾಗ ಸಹಜವಾಗಿ ಯಂತ್ರಗಳ ಬಗ್ಗೆ ಮೂಡುವ ರೋಷ, ಆಕ್ರೋಶಗಳೇ ಇಲ್ಲಿಯೂ ಎದ್ದು ಕಾಣುತ್ತದೆ. ರಗಳೆ ರೀತಿಯ ಸಾಲುಗಳಲ್ಲಿ ನಿರೂಪಣೆ ಸಾಗಿದೆಯಾದರೂ ಈ ಕವಿತೆಗೆ ಧ್ವನಿ ಸೂಕ್ಷ್ಮತೆಗಳು ಇಲ್ಲವೆಂಬುದಕ್ಕೆ ಗುರುತಿಸಬಹುದು.

'ಸಮಾಧಾನ' ಕವಿತೆಯಲ್ಲಿ ಜೀವನದ ದ್ವಂದ್ವ, ವಿಪರ್ಯಾಸ, ನಿಗೂಢತೆಗಳನ್ನು ವಿಷಾದದ ನೆಲೆಯಲ್ಲಿ ನಿಲ್ಲಿಸಿ ನೋಡುವ ಕವಿ ಮಹದೇವಯ್ಯನವರು, ಅವುಗಳಿಂದ ಸಮಾಧಾನವೊಂದನ್ನು ಕಂಡುಕೊಳ್ಳುವಂತಿದೆ ಈ ಕವಿತೆ. ಹತಾಶೆಯಲ್ಲೂ ಸದಾಶಯದ ನಿರೀಕ್ಷೆಯನ್ನು ಇಟ್ಟುಕೊಳ್ಳುವ ಧೋರಣೆ ಕವನದ ತಿರುಳು. ಬಾಳಿನಲ್ಲಿ ಕೊರತೆಗಳಿರುವುದಿಲ್ಲವೆಂದಲ್ಲ ಈ ಕೊರತೆಗಳನ್ನು 'ಸುಖ ಕೊರತೆಗಳಾಗಿ ಪರಿವರ್ತಿಸುವುದು ಕಷ್ಟ. ಕಷ್ಟದ ಹಾದಿಯಲ್ಲಿ ಬೆಳಕಿನ ಕೈಮರಗಳು ಇದ್ದೇ ಇರುತ್ತವೆ. ಇವುಗಳ ಮೇಲಿನ ನಂಬಿಕೆಯಿಂದ ನಡೆಯಬೇಕೆಂಬುದೇ ಕವನದ ಅಂತರ್ಗತ ಧ್ವನಿಯಾಗಿದೆ.[೨೭೧]

ಜೀವನದಲ್ಲಿ ಸೋತ ಜೀವವೊಂದು ಭರವಸೆಯ ಪರ್ಯಾಯ ಸ್ಥಿತಿಯನ್ನು ಯೋಚಿಸುತ್ತದೆ ಈ ಕವಿತೆ. ಇದಕ್ಕೆ ಪ್ರಕೃತಿಯಲ್ಲಿನ ವೈಚಿತ್ರ್ಯಗಳನ್ನು ರೂಪಕಗಳನ್ನಾಗಿ ಬಳಸಿಕೊಳ್ಳುತ್ತದೆ. ಯಾವುದೂ ಎಲ್ಲಿಯೂ ನಿಲ್ಲುವಂಥದಲ್ಲ; ಬದಲಾವಣೆಯನ್ನು ಬಯಸುವಂಥದು. ಕವಿ ಕವನದೊಳಗೆ ರೂಪಿಸಿಕೊಳ್ಳುವ ಸೂತ್ರವಿದು.

ಕವಿ ಇಲ್ಲಿ ತನ್ನನ್ನೇ ಕಾಣಲು ಹೊರಡುತ್ತಾರೆಯೇ ಹೊರತು ಜಗವನ್ನಲ್ಲ, ಆದರೆ ಅದೇ ಜಗತ್ತಿಗೆ ಸಾಂತ್ವನದ ಸಂಕೇತವಾಗಿ ಮಾರ್ಪಡುವುದು ವಿಶೇಷ. ಕವನ ಧಾಟಿಯನ್ನು ಗಮನಿಸಿದರೆ ಸುಖದ ಹಿಂದಿನ ದುಃಖಕ್ಕಿಂತ, ದುಃಖದ ಮುಂದಿನ ಸುಖದಲ್ಲಿ ಕವಿಗೆ ಹೆಚ್ಚು ಆಸಕ್ತಿ. ಕಾಲದ ಪರಿಭ್ರಮಣೆಯಲ್ಲಿ ಮೇಲು ಕೀಳಿನ ಪರಿಗಣನೆಯ ಜೀವನ ಮೀಮಾಂಸೆಯನ್ನು ಕೊಡಲು ಕವಿ ಮುಂದಾಗುತ್ತಾರೆ.

ಇರುಳ ಬರುವುದ ಕಂಡು ಬೆದರಬಹುದಿಂದು,
ಸಂಜೆಗೆಂಪಿಗೆ ದುಗುಡ ಪಿರಿದಾಗಬಹುದು!
ಕಾರಿರುಳೆ ಸೂರ್ಯನನು ನುಂಗಲೂಬಹುದು!
ಅಳುಕಲೇಕದಕಾಗಿ? ಹಿಂಜರಿಯಲೇಕೆ?[೨೭೧]

ಕವನದ ಆರಂಭದಲ್ಲಿಯೇ ಇರುಳು-ಹಗಲಿನ ಆವರ್ತನ ಕ್ರಿಯೆಯನ್ನು ಕವಿ ಪ್ರಸ್ತಾಪಕ್ಕೆ ತರುತ್ತಾರೆ. ಇರುಳು ಕ್ರಮೇಣ ಹಗಲನ್ನೂ ಅದಕ್ಕೆ ಕೇಂದ್ರವಾದ ಸೂರ್ಯನನ್ನು 'ನುಂಗಿ' ಬಿಡುವ ಚಿತ್ರಣವನ್ನು ಮುಂದಿಡುತ್ತಾರೆ. ಇರುಳು ಬರಬಹುದೆಂಬ ನಿರೀಕ್ಷೆಯೇ 'ಬೆದರಿಕೆ'ಯುಂಟು ಮಾಡುವ ವಿಷಯ ಎಂಬುದನ್ನು ಕವಿ ಬಲ್ಲರು; ಇದರ ಪರಿಣಾಮವಾದ 'ದುಗುಡ'ದ ಕಲ್ಪನೆಯೂ ಕವಿಗಿದೆ. ಇಷ್ಟಾದರೂ "ಅಳುಕವೇಕದಕಾಗಿ? ಹಿಂಜರಿಯಲೇಕೆ? ಎಂದು ಪ್ರಶ್ನಿಸುವ ಕವಿಯ ಧ್ವನಿಯಲ್ಲಿ ದೃಢತೆಯನ್ನು ಕಾಣುತ್ತೇವೆ. ಕತ್ತಲೆಯಿಂದ ಬರುವ ಅಳುಕನ್ನೂ ಹಿಂಜರಿತವನ್ನೂ ಅವರು ಸವಾಲಾಗಿ ಸ್ವೀಕರಿಸುತ್ತಾರೆ; ಅದನ್ನು ಗೆಲ್ಲಲು ಪರ್ಯಾಯವನ್ನು ಹುಡುಕಿಕೊಳ್ಳುತ್ತಾರೆ. ಹೀಗೆ ಒದಗಿ ಬರುವ ಸವಾಲನ್ನು ಪ್ರಶ್ನಿಸುವ ಕವಿ, ಇರುಳಿನ ನಂತರ ಬರುವ ಹಗಲಿನ ಆಶ್ವಾಸನೆಯಲ್ಲಿ ಅದಕ್ಕೆ ಉತ್ತರವನ್ನು ಕಂಡುಕೊಳ್ಳುತ್ತಾರೆ. ಇದು ಸಹಜವಾಗಿ ಅವರಿಗೆ ಸಮಾಧಾನವನ್ನು ತಂದುಕೊಡುತ್ತದೆ. ಇದನ್ನು ಸಮರ್ಥಿಸಲೆನ್ನುವಂತೆ "ಬೆಳಗಾದರಾಯ್ತು ಬಿಡು ಮುಂಬೆಳಗು ಮೂಡುವುದು" ಎಂಬ ಮಾತುಗಳು ಬಂದಿವೆ. ಮತ್ತೆ ಜೀವನದಲ್ಲಿ 'ಕಾಂತಿ', ಆ ಮೂಲಕ 'ಸೊಗಸು' ಮೈದೋರುವ ಭರವಸೆಯಲ್ಲಿ ಕವಿ ಸಮಸ್ಯೆಯನ್ನು ಬಗೆಹರಿಸಿಕೊಳ್ಳುತ್ತಾರೆ.[೨೭೨]

ಇದೇ ಬಗೆಯ ಪ್ರಶ್ನೆ ಮತ್ತು ಪರಿಹಾರವನ್ನು ಚಂದ್ರನ ಏರಿಳಿತಗಳಲ್ಲಿ ಕವಿ ಕಾಣಲು, ಅದನ್ನು ಹೋಲಿಕೆಯಾಗಿ ಬಳಸಿಕೊಳ್ಳುತ್ತಾರೆ. ಸರಳವಾಗಿ ಹೇಳುವುದಾದರೆ. ಅಮವಾಸ್ಯೆಯವರೆಗೆ ಚಂದ್ರ ಕಳೆದುಕೊಳ್ಳುತ್ತಾ ಹೋಗುವುದನ್ನೂ, ಆಮೇಲೆ ಹುಣ್ಣಿಮೆಯವರೆಗೆ ಬೆಳೆಯುತ್ತಾ ಹೋಗುವುದನ್ನೂ ಕವನ ಅಭಿವ್ಯಕ್ತಿಗೆ ತಂದಿದೆ. ಚಂದ್ರನ 'ನವೆ'ಯುವ ಕ್ರಿಯೆಯಲ್ಲಿ 'ಜೇನ್ನೊರೆ ಬತ್ತಿ' ಹೋಗುತ್ತದೆಂದು ಕವಿಗೆ ಆತಂಕವಿದೆ. ಆದರೆ ಇದರಿಂದ ಕವಿ ವಿಚಲಿತರಾಗುವುದಿಲ್ಲ; ಅದಕ್ಕಾಗಿಯೇ "ದುಗುಡದಿಂ ಕಿರಿದಾಗಲೇಕೆ"[೨೭೪] ಎಂದು ಕೇಳುತ್ತಾರೆ.

'ಕಾವ್ಯದ ಕಾರುಣ್ಯ' ಕವನ ಎರಡನೆಯ ವಿಶ್ವಸಮರವನ್ನು ಕುರಿತದ್ದು ಎಂಬುದು ಸೂಚಿತವಾಗಬಲ್ಲದು. ಇದಕ್ಕೆ ಹಿನ್ನೆಲೆಯಾಗಿ ಕವಿ ರನ್ನನ ಗದಾಯುದ್ಧದ ಪ್ರಸಂಗವನ್ನು ನೆನಪಿಸುತ್ತಾರೆ. ಕುರುಕ್ಷೇತ್ರ ಯುದ್ಧದ ಕೊನೆಯ ದಿನ ಭೀಮನ ಗದಾಘಾತದಿಂದ ತೊಡೆಮುರಿದು ಮಡಿದ ಚಕ್ರವರ್ತಿ ಸುಯೋಧನನು ಸರ್ವನಾಶದ ಸಂಕೇತ.

ರುದ್ರನು ತನ್ನ ಉರಿಗಣ್ಣನ್ನು ತೆರೆದು ಸಮಸ್ತ ಭರತಖಂಡವನ್ನೇ ಸುಟ್ಟು ಬೂದಿಮಾಡಿದಂತೆ, ಕುರುಭೂಮಿ ಮರುಭೂಮಿ ಆಗಿ ಮಾರ್ಪಟ್ಟಿತು. ಆ ಸಂದರ್ಭದಲ್ಲಿ ಕವಿ ಕರುಣೆಯ, ಸಾಂತ್ವನದ ಮಳೆಗೆರೆದು, ಉಳಿದ ಪಾಂಡವರು ಮತ್ತು ಇತರ ಜನರು ಶಾಂತಿಪರ್ವದಲ್ಲಿ ನೆಮ್ಮದಿಯನ್ನು ಕಂಡಂತೆ ವರ್ಣಿಸಿದ್ದಾನೆ. ಈ ಕವಿಕಾಣ್ಕೆ ವ್ಯಾಸಭಾರತದಿಂದ ಬಂದದ್ದು. ಆ ಪ್ರಸಂಗವನ್ನು ಟಿ.ಎನ್. ಮಹದೇವಯ್ಯನವರು ವರ್ಣಿಸಿರುವ ರೀತಿ ಸಾರ್ಥಕವಾಗಿದೆ.

ಭೀಮ ಪರಾಕ್ರಮ ಪ್ರಳಯದ ಉರಗ
ಜಡೆಜೆಲ್ಲಿದರೂ ಕೆಡದೆ
ಹೆಡೆ ಬಿಚ್ಚಿದರೂ ಬಿಡದೆ
ಗಾರುಡ ಬಚ್ಚಿದರೂ ಬಿಡದೆ
ಗಾರುಡ ಮಂತ್ರದ ಸ್ವರಸಮ್ಮೋಹದಿ
ಶಾಂತಿಯ ಸಲ್ಲಿ (ಸ್ಥಾಪಿ)ಸಿದೆ,
ಅಭಿಮಾನಧನ ವೀರ ಸುಯೋಧನ
ತಪ್ತ ಶಿರಸ್ಸಿನ ಮೇಲೆರೆದೆ
ಅಪೂರ್ವ ಕರುಣೆಯ ಅಮೃತ ಸೇಚನ![೨೭೫]

ಅದೆಲ್ಲ ಮುಗಿದುಹೋದ ಪುರಾಣ ಕತೆ, ಚರಮಗೀತೆ. ಆದರೆ ಆಧುನಿಕ ಯುಗವಾದ ಈಗ ಪರಿಸ್ಥಿತಿ ಏನಾಗಿದೆ? ಮುಂದುವರಿದ ಶ್ರೀಮಂತ ರಾಷ್ಟ್ರಗಳು ಪೈಪೋಟಿಗೆ ತೊಡಗಿ, ಲೋಕಶಾಂತಿ ಭಂಗಕಾರಕ ಅಣ್ವಸ್ತ್ರಗಳ ಸಿದ್ಧತೆಯಲ್ಲಿ ಪಿತೂರಿ ನಡೆಸಿ, ಮೇಲಾಟದಲ್ಲಿ ಮುಂದಾಗಿವೆ. ಇದರಲ್ಲಿ ಎಲ್ಲ ಬಗೆಯ ತಳತಂತ್ರ ಒಳಸಂಚುಗಳೆಲ್ಲ ಬಳಕೆಗೊಂಡಿವೆ. ಮೇಲ್ನೋಟಕ್ಕೆ ಶಾಂತಿಯ ಹೆಸರನ್ನು ಹೇಳುತ್ತ, ಒಳಗಡೆ ಗುಟ್ಟಾಗಿ ಮದ್ದುಗುಂಡುಗಳ ತಯಾರಿಕೆಯಲ್ಲಿ ತಮ್ಮ ಸಮಸ್ತ ಶಕ್ತಿ ಸಾಮರ್ಥ್ಯಗಳನ್ನು ವ್ಯಯಿಸಿ, ಜಗತ್ತಿನ ಶಾಂತಿಯನ್ನು ಕಲಕಿವೆ. ಎಂದು ಕವಿ ಮರುಕಗೊಂಡು ಹೀಗೆ ನುಡಿದಿದ್ದಾರೆ.

ಅಣುಬಾಂಬುಗಳೆಷ್ಟು ಹುಟ್ಟುತಿವೆ
ಜಲಜನಕದ ಬಾಂಬು ಕಟ್ಟುತಿವೆ

ಅಸ್ತ್ರಶಸ್ತ್ರದ ನಿತ್ಯಾಶೋಧದಲಿ
ವಿಶ್ವದ ಶಾಂತಿಯ ಗೋರಿಯನು![೨೭೬]

ಲೋಕ ಉದ್ಧಾರಕ್ಕೆ ಸತ್ಯಶಾಂತಿ ಅಹಿಂಸೆಗಳೇ ಪರಮ ಮೌಲ್ಯಗಳು ಎಂದು ಸಾರುವ ಕವಿ, ದಾರ್ಶನಿಕರು, ಸಂತರು ಒಂದೆಡೆಗಾದರೆ, ವಿನಾಶಕಾರಕ ಶಸ್ತ್ರಾಸ್ತ್ರ ಸಜ್ಜಿನಲ್ಲಿ ಗುಟ್ಟಾಗಿ ತೊಡಗಿರುವ ರಾಜಕೀಯ ಮುತ್ಸದ್ದಿಗಳು ಮತ್ತೊಂದು ತುದಿಯಲ್ಲಿ ಮಸಲತ್ತು ಮಾಡುತ್ತಿದ್ದಾರೆ. ಇದರ ಪರಿಣಾಮ ಗಂಭೀರತರವಾದುದು. ಇಂಥ ವಿನಾಶಕಾರಕ ಪ್ರವೃತ್ತಿ ಮುಂದುವರಿದಿರುವಾಗ,

ಇನ್ನೆಲ್ಲಿಯದೊ ಕಾರುಣ್ಯ!
ಧರ್ಮದ ತಾರುಣ್ಯ![೨೭೭]

ಎಂಬುದಾಗಿ ಕವಿ ಉದ್ಗರಿಸಿ ವ್ಯಥೆಗೊಂಡಿದ್ದಾರೆ.

ಅಂದಿನ ಆ ವ್ಯಥೆ ಇಂದು ಕೂಡ ಮಾಯವಾಗದೆ, ಲೋಕಪರಿಸ್ಥಿತಿ ಗಂಭೀರವಾಗಿಯೇ ಮುಂದುವರಿದಿರುವುದು, ಟಿ.ಎನ್. ಮಹದೇವಯ್ಯ ಅವರ ಆ ಅಭೀಪ್ಸೆ ಹೇಗೆ ಇವತ್ತಿಗೂ ಪ್ರಸ್ತುತವೆನಿಸುತ್ತದೆ, ಎಂಬುದರ ಅರಿವಾಗಿ, ಅವರ ಲೋಕಕಲ್ಯಾಣದ ಕಳಕಳಿ ಮನದಟ್ಟಾಗುತ್ತದೆ.

ಸಾಮಾನ್ಯವಾಗಿ ವಸಂತಾಗಮನ ಕೋಗಿಲೆಯ ರವ ಎಲ್ಲರಿಗೂ ಪ್ರಿಯವಾದವು. ಆದರೆ 'ಮನದಳಲು' ಕವಿತೆಯಪಾಲಿಗೆ ಆ ಬೇಸಿಗೆಯ ಎಳೆಬಿಸಿಲು ಸಿಡಿಬೆಂಕಿ! ತಂಗಾಳಿ ಕೊರೆವ ಚಳಿಗಾಳಿ! ಕೋಕಿಲಸ್ವನ ಕರ್ಕಶ! ವಸಂತನ ಸಿರಿಯಲ್ಲಿ ಅರಳುವ ಪುಷ್ಪವೈಭವ, ಭ್ರಮರಗೀತೆ ಇವೆಲ್ಲ ಸಂಕಟವನ್ನು ತರುವಂಥದೇ ಆಗಿವೆ. ಪ್ರಕೃತಿಯ ಸೌಂದರ್ಯ ಚಿತ್ರಗಳೆಲ್ಲ ಕವಿಯ ಮೇಲೆ ವಿರುದ್ಧ ಭಾವಗಳ ಸರಮಾಲೆಯನ್ನು ಸಿಡಿಸುತ್ತಿವೆ. ಸುಧೆ ಹರಡಿ ಸುಧೆಯನ್ನು ಸೂಸುವ ಚಂದ್ರ, ಸಿರಿಬನದ ಸೊಗ-ಎಲ್ಲ ಕವಿಯಲ್ಲಿ ದುಃಖವನ್ನು ಹೆಚ್ಚಿಸುತ್ತಿವೆ.

ಬಾಂದಳದ ನೀಲಿಮೆಯು ಮನದೊಳಗೆ ಕವಿದಿರುವ
ಕಾರ್ಮುಗಿಲ ನೆನಪಿತ್ತು ಕಂಬನಿಯ ಸುರಿಸುತಿದೆ
ಸುಯ್ಯಲರು ತೀಡಲದು, ಕವಿಯಲ್ಕೆ ಕಾಯುತಿಹ
ಜಂಜಡದ ನೆನಪಿತ್ತು-ಮೈಯೆಲ್ಲ ನಡುಗಲಹ
ಎನ್ನೆದೆಗೆ ಬಾಳ ಸುರಿದಂತಪ್ಪುದಾಗಲದು.
ಎಲ್ಲಿರುವೆ ನಾನರಿಯೆ ಏನನೋ ನುಡಿಯುವುದು
ಎನ್ನ ಬಗೆಯ ಭಾವದಿ ಮಿಂದೆಲ್ಲವನ್ನೇ ಮರೆತು
ಸಿರಿಬನದ ಸೊಬಗನು ನೋಡಿ ದುಃಖಿಪೆನರಿತು[೨೭೮]

ಮನಸ್ಸಿನಲ್ಲಿ ಯಾತನೆ ತುಂಬಿಕೊಂಡಿದ್ದಾಗ ಪ್ರಸನ್ನವಾದ ಪ್ರಕೃತಿಮುಖ ಕೂಡ ಅಸಹನೀಯವಾಗುತ್ತದೆ. ನಾಯಕ ತನ್ನ ಬಗೆಯ ಭಾವದಲ್ಲಿ ಮಿಂದು ಎಲ್ಲವನ್ನು ಮರೆತಿದ್ದಾನೆ. ಸಿರಿವನದ ಸೊಬಗನ್ನು ನೋಡಿಯೂ ಕುಗ್ಗುತ್ತಿದ್ದಾನೆ. ಭೀತಿಯಿಂದ ನಡುಗುತ್ತಿದ್ದಾನೆ.

ಈ ಕವಿತೆಯಲ್ಲಿ ವ್ಯಗ್ರಗೊಂಡ ನಾಯಕನ ಚಿತ್ರವಿದೆ. ವ್ಯಗ್ರತೆಗೆ ಕಾರಣವೇನೆಂಬುದನ್ನು ಕವಿ ವಿವರಿಸುವುದಿಲ್ಲ. ಯಾವುದೇ ಕಾರಣ ಆದೀತು ಆದರೆ ಸುಂದರ ಪ್ರಕೃತಿ ಕೂಡ ದುಃಖಿತವಾದ ಮನಸ್ಸೊಂದನ್ನು ತಣಿಸಲಾರದು ಎಂಬ ಆಶಯ ಕವಿತೆಯದು. ನಾಯಕ ಪ್ರಕೃತಿಯನ್ನು ತನ್ನ ಮನೋಪ್ರಕೃತಿಯ ಒರೆಗಲ್ಲಿನಲ್ಲಿ ಉಜ್ಜಿ ನೋಡಿರುವುದನ್ನು ಇಲ್ಲಿ ಕಾಣಬಹುದಾಗಿದೆ.

ಜ್ಞಾನ-ಅಜ್ಞಾನಗಳ ಸಂದನ್ನು ಗುರುತಿಸಿ ಹೊಲಿಯಬಲ್ಲ ಒಂದು ವಿವೇಚನೆ "ಅರಿವು ಮರೆವು" ಕವನದ ಸಾರಾಂಶ.

ಮೇಲೆ ಕಾಂಬ ನಭವೆ ಅರಿವು
ಕೆಳಗೆ ಕಾಂಬ ತೆರೆಯ ಮರೆವು
ಪ್ರಪಂಚ ಮಾರುತನೆ ಅರಿವು
ಮಂದ ಸಮೀರನೆ ಮರೆವು
ಬನದ ಸೊಗವ ಮಿಗಿಲು ಮಾಳ್ವ
ವಸಂತನಾ ಸಿರಿಯೆ ಮರೆವು
ನಲಿನ ಬನದ ಸಿರಿಯ ನೆವೆವ
ಚಳಿಯ ಬರವೆ ಅರಿವು ಅರಿವು.

ಅರಿವು ಎಂದರೆ ಯಾವುದು ? ಕವಿಯ ಮಾತಿನಲ್ಲಿ ಹೇಳುವುದಾದರೆ ಮೇಲೆ ಕಾಣುವ ನಭ. ಬೀಸುವ ಚಂಡ ಪವನ, ನಲಿವ ಬನದ ಸಿರಿಯನ್ನು ನೆನೆಸುವ ಚಳಿಯ ಆಗಮನ, ಸುಮದ ಬಾಳ್ವೆ, ಹಣ್ಣೆಲೆ, ನಿಶೆ, ಬರ (ಕ್ಷಾಮ) ಕರುಣೆ, ಧರ್ಮ ಇವೆಲ್ಲ ಅರಿವಿನ ಪಾಲಿಗೆ ಸೇರುವ ವಸ್ತುಗಳು. ಹಾಗೆಯೇ ಮಂದಸಮೀರ, ವಸಂತನ ಸಿರಿ, ಜೀವ, ಚಿಗುರು, ದಿವಿ ಸಿರಿ ಇವೆಲ್ಲ ಮರೆವಿನ ಕಣಜದಲ್ಲಿ ತುಂಬಿಕೊಂಡಿರುವ ವಸ್ತುಗಳು. ಈ ಭಿನ್ನತೆಗಳು ಪಲ್ಲಟಗೊಂಡು ಕೊನೆಗೆ

ನಿಷೆಯ ಅರಿವು, ದಿವಿಯೆ ಮರೆವು
ಬರೆವೆ ಅರಿವು, ಸಿರಿಯೆ ಮರೆವು
ದಿವಿ ನಿಷೆಯರ, ಸಿರ ಬರಗಳ
ಸಂಧಿ ಅರಿವೊ ಮರೆವೊ ಅರಿಯೆ

ಅಂತು ಇಂತು ಕರುಣೆಯರಿವು
ಧರ್ಮವರಿವು ಆದರೇನು?
ಅರಿವೆ ಮರೆವು, ಮರೆವೆ ಅರಿವು
ತಿರೆಯ ಸುಖಕೆ ಎಲ್ಲ ಮರೆವು.[೨೮೧]

ಎಂಬ ಸಿದ್ಧಾಂತಕ್ಕೆ ಕವಿ ತಲುಪುತ್ತಾರೆ.

ಕವಿ ದೃಷ್ಟಿಯಲ್ಲಿ ಅರಿವು ಎಂಬುದೆಲ್ಲ ಮಾನವನ ತಿಳುವಳಿಕೆಯ ನೆಲೆಗಳನ್ನು ಪೋಷಿಸುವ ದ್ರವ್ಯಗಳು. ಮರೆವು ಎಂಬುದು ಅರಿವಿನ ಕಣ್ಣಿಗೆ ತಾತ್ಕಾಲಿಕವಾಗಿ ಕಟ್ಟಿದ ಕರಿಯ ಬಟ್ಟೆಗಳು ಅಷ್ಟೆ. ಈ ತೊಡಕುಗಳನ್ನು ಬಿಡಿಸಿಕೊಂಡರೆ ಮರೆವೇ ಅರಿವಾಗುತ್ತದೆ. ವಿವೇಚನೆಯಿಲ್ಲದಿದ್ದರೆ ಅರಿವೇ ಮರೆವಾಗುವ ಅಪಾಯವೂ ಉಂಟು. ನಾವು ಈ ಭೂಮಿಯಲ್ಲಿ ಸುಖ ಎಂದು ಯಾವುದನ್ನು ಭಾವಿಸುತ್ತೇವೆಯೊ ಅದು ನಿಜವಾಗಿ ಮರೆವು. ಆದುದರಿಂದ ಈ ದ್ವಂದ್ವಗಳನ್ನು ವಸ್ತುನಿಷ್ಠವಾಗಿ ನೋಡುವ ಶಕ್ತಿ ನಮ್ಮಲ್ಲಿ ಬೆಳೆಯಬೇಕು ಎಂಬುದು ಕವಿಯ ಆಶಯ. ಅರಿವು ಮರೆವುಗಳ ನಡುವೆ ಅಡ್ಡಗೀಟು ಹಾಕಿ ಅರಿವು-ಮರೆವು ಎಂದು ಬರೆಯುವುದು ರೂಢಿಯಲ್ಲಿದೆ. ಆದರೆ ವಿಚಾರ ವ್ಯಾಕರಣದಲ್ಲಿ ಈ ಅಡ್ಡಗೀಟಿಲ್ಲ.

ಕವಿ ಸ್ಫೂರ್ತಿ ಯಿಂದ 'ಹೊಮ್ಮುವ ಭಾವ ಚಿಂತನ' ಅಮರವಾದುದು. ವಿಶ್ವ ಮಾನವನೆದೆಯೆ! ಸರಸಿಯೊಂದೆಡೆಯಲ್ಲಿ! ಎಂದೋ ನಿನ್ನಯ ಜನ್ಮ ! ಎಂದು 'ಟಿ.ಎನ್. ಮಹದೇವಯ್ಯ' ಒಂದು ಅಮರಸತ್ಯದ ನಿರ್ಣಯಾತ್ಮಕ ನುಡಿಯಾಡಿ, ಆಶ್ಚರ್ಯಚಕಿತರಾಗಿ ಇವರ 'ಸಹಸ್ರ'ವನ್ನು 'ಭಾವದ ಹುಟ್ಟು' ಮತ್ತು ಕುಲಗುರು ಕವಿತೆಯಲ್ಲಿ ವಿವರಿಸಿದ್ದಾರೆ. ನವೋದಯ ಕಾವ್ಯದ ಮುಖ್ಯವಾಗಿ ಕುವೆಂಪು ಅವರ ಕವನಗಳಲ್ಲಿ- ಇಂಥ ಸ್ಫೂರ್ತಿಯ ಸತ್ಯದ ನಿಲುವನ್ನು ಪ್ರಥಮದಲ್ಲಿ ಹೊಮ್ಮಿಸಿ-ಓದುಗರ ಕುತೂಹಲಕ್ಕೆ ಎಡೆಯಿಲ್ಲದಂತೆ ಮಾಡಿಬಿಡುತ್ತಾರೆ! ಅಮೂರ್ತವಾದ 'ಭಾವ'-ದೇಶ-ಕಾಲ-ವ್ಯಕ್ತಿಗತೀತವಾದುದು. ಆದರೆ ನೆಲೆ, 'ವಿಶ್ವಮಾನವನೆದೆಯ ಸರಸಿ'; ಅಲ್ಲಿ ಎಂದೋ ಆಗಿದೆ ನಿನ್ನ ಜನ್ಮ-ಆಗ 'ಭಾವ' ಹುಟ್ಟಿದೆ. ಅದೊಂದು 'ಪದ್ಮಸುಮ'-ಅದರ ದಳದಳವು ದಳದೆರೆದು, ಅರಳಿ ತನ್ನಲ್ಲಿರುವ "ಪ್ರತಿಭಾ ಸೌರಭ"ವನ್ನು ಜಗತ್ತಿಗೆ ಹರಡಿ-ತನ್ನ ಜನನದ ಸಾರ್ಥಕತೆಯನ್ನು ತೆರೆದುಕೊಳ್ಳುತ್ತದೆ. ಸರೋವರ-ಕಮಲ-ಅರಳುವಿಕೆ-ಮಕರಂದ ಪ್ರಸಾರ-ಮುಂತಾದ ಸುಪರಿಚಿತ ರೂಪಕಗಳಲ್ಲಿಯೇ "ಕಲೆ"ಯ ರಹಸ್ಯವನ್ನು ಬಿಚ್ಚಿಡುತ್ತಾರೆ. ಇಲ್ಲಿ ಮಹಾಕವಿ. ವಿಶ್ವಕವಿ ಎಂದಿಗೂ 'ವಿಶ್ವಮಾನವ'-ಅವನ ಹೃದಯುದಲ್ಲಿ ಸ್ಫುರಿಸುವ 'ಭಾವ'ಗಳಲ್ಲಿ ವಿಶ್ವಮಾನವೀಯವಾದವು, ಕಾಲಾತೀತವಾದುವು-ಆತ 'ಕವಿಕುಲಗುರು' ಆತ ಸರ್ವಕಾಲದ ನರನು ನಿತ್ಯದನು-ಭವಿಯುವನು। (ಅಂಥ) ಕವಿಕೊರಲಿನಿದನಿಯೆ ನಿಜಕಾಮ್ಯ। ಅದು (ನವರಸ) ಲೀಲೆ। ಅದರಿಂದ 'ಕವಿಹೃದಯದ ರಸಧಾರೆ ನಿತ್ಯದನುಭವ ತೃಪ್ತಿ'[೨೮೨] ಎಂಬುದು ಕವಿಯ ನಿಲುಮೆ.

ಭಾವೋದಯದ ಮಹತಿಯನ್ನು 'ಚಿಂತಿಸಿ'ದ ಮೇಲೆ, ಭಾವದ ಲೀಲೆ, ಅದರ "ಶಿಶುಲೀಲೆ"ಯನ್ನು ಹೊಸರೂಪಕದಿಂದ ಬಿಂಬಿಸುತ್ತಾರೆ. 'ಭಾವದ ಹುಟ್ಟಿನ' ಮುಂದಿನ ಸಾಲುಗಳಲ್ಲಿ

ಕವಿ ಕವಿತೆ ಕನಸಿನಲ್ಲಿ
ರಾಗ ರಸ ಸೋಂಕಿನಲ್ಲಿ
ಗರ್ಭ ತಳೆದೆಸೆವಂತೆ
ಶುಭ ಮೂಹೂರ್ತದೊಳೊಮ್ಮೆ
ಅಲರಿಂಪು ನಸುವಾಗಿ-ಕೋಮಲತೆ ಶಿಶುವಾಗಿ
ಎದುರಿಂದೊಗೆತರುವೆ
ನವಜನ್ಮ ! ನವರೂಹು
ನವಕಾಂತಿ! ನವಲೀಲೆ[೨೮೩]

ಕವಿಯ ಭಾವದ ಕನಸು, ಅದಕ್ಕೆ ರಾಗ-ರಸ ಸೋಂಕಿದಾಗ 'ಭಾವ' ಗರ್ಭ ತುಂಬುತ್ತದೆ; ಆ ಭಾವಗರ್ಭ ಬೆಳೆ ಬೆಳೆಯುತ್ತದೆ, 'ಶುಭ ಮೂಹೂರ್ತ'ದಲ್ಲಿ ಅಲರಿಂಪಿನ 'ಪ್ರಾಣ' ತುಂಬಿ, ಕೋಮಲತೆಯೇ ಶಿಶುವಾಗಿ, ಕವಿ-ಕಾವ್ಯಲೋಕ ಗರ್ಭದಿಂದ ಕಾವ್ಯ ಶಿಶು ಜನಿಸುತ್ತದೆ! ಅದು ನವಲೀಲೆ, ಅದರದು ಹೊಸರೂಪು, ಅದಕ್ಕಿದೆ ನೂತನ ಕಾಂತಿ, ಪ್ರಕಾಶ. ಅದೇ ಅದರ ಲೀಲೆ-ಆಟ; ಇದೇ ಕಾವ್ಯ ಜನಿಸುವ ರೀತಿ. 'ಪ್ರಶಾಂತ ಮನಃಸ್ಥಿತಿಯಲ್ಲಿ, ಸ್ಫೂರ್ತಿಯ ಚಿಲುಮೆಯಾಗಿ ಕಾವ್ಯ ಹೊಮ್ಮುತ್ತದೆ' ಎಂಬ ವರ್ಡ್ಸ್‌ವರ್ತ್ ಕವಿಯ ಮಾತನ್ನು ಈ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬಹುದು.[೨೮೪]

'ಭಾವಶಿಶು' ಬೆಳೆದು 'ನವತರುಣಿ'ಯೊಂದಿಗೆ, ಅವಳ ಅರಳುಗೆನ್ನೆಯ ಮೇಲೆ, ನಿತ್ಯರಮಣೀಯವಾದ 'ಅರುಣಕಾಂತಿ' ಮೂಡಿರುತ್ತದೆ. ಅಂತೆಯೇ, ಪ್ರಣಯರಸ ಹೊಮ್ಮುವ ತುಟಿಯ ಮೇಲೆ ಸುಳಿಯುತ್ತದೆ. ಕಂಡೂ ಕಾಣದಂಥ ನಗೆಯಮಲ್ಲಿಗೆ, ಮಲ್ಲಿಗೆಯಂಥ ಸುಮಧುರ ನಗೆ! ನಗೆಯ ಮೊಲ್ಲೆಯಹೂವೂ ಆಗುತ್ತದೆ. ಅಂಥ ಕೆಂದುಟಿಯ, ಬಿಳಿನಗೆಯು 'ಚಿರ ಪರಾಗವ' ಚೆಲ್ಲಿದರೆ, ಅದು ಲೋಕ ಲೋಕಕ್ಕೂ ಕಂಪು ಹರಡುತ್ತದೆ. ಶೃಂಗಾರಕಾವ್ಯದ ರಸಿಕ ಚಿತ್ರಣದಲ್ಲಿ ಜಗತ್ತಿನ ಎಲ್ಲ ಶ್ರೇಷ್ಠ ಕವಿಗಳ 'ರಸಿಕತೆಯ ಸುಳಿ'[೨೮೫] ಸೊಗಸು ಚಿತ್ರಿತವಾಗಿದೆ. ಭಾವನಾಶಿಶು-ಭಾವಕನ್ಯೆ-ಭಾವಪ್ರೌಢೆಯಾದ ಹಂತಗಳನ್ನು ಇದು ಧ್ವನಿಸುತ್ತದೆ.

ಇಂಥ ಸುಮಧುರ ಪ್ರಮದೆ - 'ಜರೆಮರಣಕತಿದೂರ, ರೋಗ ರುಜಿನಕು ದೂರ' ಆಕೆ ಓಡುವ ಕಾಲದ ಒತ್ತಡವನ್ನು ಮೀರಿ, "ಚಿನ್ಮಯಮೂರ್ತಿ"ಯಾಗುತ್ತಾಳೆ. ಮಾನವಸ್ತರವನ್ನು ದಾಟಿ- "ಕಲಾ ಮೂರ್ತಿ"ಯಾಗುತ್ತಾಳೆ. ಆಗ ಅದು ವಿಶ್ವದ ಮೂರ್ತಿ, ಅದರ ಭಾವಲೀಲೆ-ಅರ್ಥ ವಿಸ್ತರಣೆ ಶಾಶ್ವತ. Art

is eternal- ‘ವ್ಯಕ್ತಿಯ ಭಾವ’ ಕಲಾತ್ಮಕ ರೂಪು ತಳೆದು ಚಿರಂತನವಾಗುತ್ತದೆ. ಅಮರ ಪ್ರೇಮದ ಜೀವಂತ ಕಾವ್ಯ ತಾಜಮಹಲ್, ಚಿರಸೌಂದರ್ಯದ ಪ್ರತಿರೂಪ ಮೋನಾಲಿಸಾ, ಭವಸೌಂದರ್ಯದ ಸಂಕೇತ ‘ಗೊಮ್ಮಟ ಜಿನಮೂರ್ತಿ’- ಇಂಥ ಪ್ರತಿಭಾನ್ವಿತ ಕವಿ-ಕಲಾಕಾರರ ಚಿರಕೊಡುಗೆ. ಅದು ಜನನ ಮರಣಕೆ ದೂರ, ಅದು ಮೃಣ್ಮಯತೆಯನ್ನು ದಾಟಿ ‘ಚಿನ್ಮಯ ಕಲಾರೂಪ’ವಾಗುತ್ತದೆ.

ಕವಿ-ಕಾವ್ಯ-ಭಾವ-ಚಿಂತನೆ-ರಸ-ನಿತ್ಯಲೀಲೆ ಮುಂತಾದ ಭಾವ ಶಿಶುವನ್ನು, ಮನೋಗರ್ಭದಲ್ಲಿ ತಳೆದು, ಕಲಾಕುಂಚದಲ್ಲಿ ‘ರೂಪಿಸಿ’, ಸರ್ವಕಾಲ ಚಿಂತನೆಯನ್ನು ೧೯೫೦ರಷ್ಟು ಹಿಂದೆಯೇ, ಕನ್ನಡಕ್ಕೆ ನೀಡಿದ, ಕವಿ ಟಿ.ಎನ್. ಮಹದೇವಯ್ಯ. ನವೋದಯ ಕಾವ್ಯದ ಮರೆಯಬಾರದ ಕವಿ.

‘ಬೇಡಿಕೆ’ ಕವನ ಒಂದು ಪ್ರಾರ್ಥನಾ ಗೀತೆಯಾಗಿದೆ. ಕವಿ ತನ್ನ ಕೃತಿಗೂ ಬದುಕಿಗೂ ದೈವದ ನೆರವನ್ನು ಕೋರುತ್ತಿದ್ದಾನೆ. ಹಗಲಿನ ಆಕಾಶದಲ್ಲಿ ತಾರೆಗಳು ಅಡಗಿದಂತೆ ತಾನು ದೈವದ ಬೆಳಗಿನಲ್ಲಿ ಅಡಗಿಕೊಳ್ಳಬೇಕೆಂಬ ಭಾವ ಕವಿಯದು. ಇದಕ್ಕೆ ಪ್ರಕೃತಿಯ ಉಪಮೆಯ ಮೂಲಕ ಹೇಳುತ್ತಿದ್ದಾರೆ.

ಸಿರಿಬನದ ಜವ್ವನಕೆ ಬಸಂತನಿರುವ ತೆರದಿ
ಎನ್ನೆಲ್ಲ ಕೃತಿಗಿರಲಿ, ನಿನ್ನ ಹಿರಿನೆರವು
ಹಗಲಿನಾಗಸದಲ್ಲಿ ತಾರೆಗಳು ಅಳಿವಂತೆ
ನಾ ನಿನ್ನ ಬೆಳಕಿನಲ್ಲಿ ಅಡಗಲೆಲೆ ದೇವ

ಕವಿಯ ವಿನಯಭಾವ, ಪ್ರಕೃತಿಪ್ರೇಮ, ಜೀವನದ ಆಶಯಗಳು ಇಲ್ಲಿ ವ್ಯಕ್ತಗೊಂಡಿವೆ.

‘ನಿನಗಾಗಿ ಬಂದೆ’ ಈ ಕವನವು ಶರಷಟ್ಪದಿಯ ಧಾಟಿಯ ಕವಿತೆ. ಸೊಗಸಾದ ನಾದಮಾಧುರ್ಯದಿಂದ ಮನ ತಟ್ಟುತ್ತದೆ. ಪ್ರಕೃತಿಯ ಚೆಲುವು ಮೋಹಕವಾಗಿರುವಂತೆಯೇ ಅದರ ಆಹ್ವಾನವೂ ಹಿರಿಯದೇ ಮುಗ್ಧ ಕವಿಗಳನ್ನು ಪ್ರಕೃತಿಯ ಚೆಲುವು ಬಳಿಗೆ ಕರೆಯುವುದು ಅಪರೂಪವೇನಲ್ಲ.

ದೂರದ ಹಳ್ಳಿಯ ದೋಣಿಯನೇರುತ
ತುಂಬಿದ ಹೊಳೆಯಲಿ ನಾ ಬಂದೆ
ತಿರ್ರನೆ ಸುತ್ತುವ ಸುಳಿಗಳ ದಾಟಿಸಿ
ಸುರಿಯುವ ಬೆವರಿನ ಹನಿಯೊರಸಿ
ದಡಗಳನಪ್ಪಿದ ಮರಗಿಡ ಗುತ್ತಿಯು
ನಿಟ್ಟುಸುರುಸುರುತ ನಿಂದಿರಲು
ಓಡುತ ಬಂದೆನು ತೇಲುತ ಬಂದೆನು
ಸಿರಿಮೊಗ ನೋಡುವ ಹಂಬಲದಿ

ದೋಣಿಯೇರಿ ಹೊರಟಾಗ ಕವಿಯ ಮನಸ್ಸಿನಲ್ಲಿ ಮೂಡಿದ ಭಾವಗಳು ಇಲ್ಲಿಯವು. ಇದು ಒಂದು ಬಗೆಯ ನಿಸರ್ಗ ಪ್ರೇಮಗೀತವೂ ಹೌದು ಪ್ರಕೃತಿಯೊಂದಿಗೆ ನಿರ್ಮಲಭಾವದಿಂದ ಬೆರೆಯುವ ಆಶಯ ಕವಿಯದು.

'ಬಾಳಿನ ವೀಣೆ' ಇದೊಂದು ಸೊಗಸಾದ ಸಂಗೀತಗತಿಯ ಮಧುರಗೀತೆ. ತನ್ನ ದೈಹಿಕ ಚೌಕಟ್ಟನ್ನು ವೀಣೆಗೆ ಹೋಲಿಸಿ ಆ ಭಾವವನ್ನು ತಕ್ಕಷ್ಟು ವಿವರವಾದ ಆಲಾಪನೆಗೆ ಬಳಸಿಕೊಂಡಿದ್ದಾರೆ. ತಾನೇ ಆ ವೀಣೆಯನ್ನು ನುಡಿಸಿದರೆ ವಿಕಟನಾದವು ಬರುತ್ತದೆಂಬ ಹೆದರಿಕೆ. ಮಿಟಲರಿಯದ ತಂತಿ ನನ್ನದು ಎಂಬ ಹಿಂಜರಿಕೆ, ಸಡಿಲವಾಗಿ ಕಳಚಿ ಬೀಳುಬಹುದೆಂಬ ಕೊರಗು ಕವಿಯದು. ಆದುದರಿಂದ ತನ್ನನ್ನು ದಿವ್ಯಕ್ಕೆ ಅರ್ಪಿಸಿಕೊಳ್ಳುವ ಕವಿ -

ಮಿಡಿಯಲರಿಯೆನು ದೇವ ಆ ಬಲಿಮೆಯೆನಗಿಲ್ಲ
ಇನಿಗೊರಲ ಸವಿಬೆರಸಿ ಮತದೊಲವ ಹರಸಿ
ಜೀವವೀಣೆಯ ಪಿಡಿದು, ಮೋಹಗೀತೆಯ ಹಾಡಿ
ನಾದ ಝುಂಕೃತಿಯಲ್ಲಿ ಮೈಮರೆಸು ದೇವ! [೩೦೦]

ಎಂದು ಪರವಶತೆಯ ಪ್ರಾರ್ಥನೆ ಮಾಡಿದ್ದಾರೆ.

■■

೪

# ಟಿ. ಎನ್. ಮಹದೇವಯ್ಯನವರ ನಾಟಕಗಳು

ಟಿ. ಎನ್. ಮಹದೇವಯ್ಯನವರ ನಾಟಕಗಳನ್ನು ಅಭ್ಯಾಸ ಮಾಡುವಾಗ ಅವರ ಬಹುತೇಕ ನಾಟಕಗಳು ರೇಡಿಯೋ ನಾಟಕಗಳೇ ಆಗಿವೆ ಎಂಬುದು ಮುಖ್ಯ ಸಂಗತಿಯಾಗುತ್ತದೆ. ರೇಡಿಯೋ ನಾಟಕ ರಂಗನಾಟಕಕ್ಕಿಂತ ಭಿನ್ನ. ರಂಗನಾಟಕ ಕಣ್ಣು ಮತ್ತು ಕಿವಿಗಳಿಗೆ ಸಮಾರಾಧನೆ ನೀಡಿದರೆ, ಬಾನುಲಿ ನಾಟಕ ಕೇವಲ ಕಿವಿಯೊಂದರ ಮೂಲಕವೇ ಎಲ್ಲ ಸಾಧ್ಯತೆಗಳನ್ನು ಪೂರೈಸಿ ಶ್ರೋತೃವಿಗೆ ಸಂತೋಷ ಕೊಡುತ್ತದೆ. ಬಾನುಲಿ ನಾಟಕಕ್ಕೆ ಬೇಕಾಗುವ ಮುಖ್ಯ ಸರಕೆಂದರೆ ಶ್ರವಣಸಾಧ್ಯವಾದ ಭಾಷೆ. ಮೇಲಾಗಿ ಹೇಳುವವನ, ಕೇಳುವವನ ನಡುವೆ ತೊಟ್ಟಿಲಾಗುವ ಶೈಲಿ. ನಾಟಕದ ವಸ್ತುವನ್ನು ಅವಲಂಬಿಸಿ ಬಾನುಲಿ ನಾಟಕದ ಭಾಷೆಯಿರುತ್ತದೆ. ಸಾಮಾಜಿಕ ವಸ್ತುವಾದಾಗ ಗ್ರಾಮ್ಯ ಹಾಗೂ ಪಟ್ಟಣ ಪ್ರದೇಶಕ್ಕೆ ಅನುಗುಣವಾಗಿ ಗ್ರಾಮ್ಯಭಾಷೆ ಹಾಗೂ ತಿದ್ದಿದ, ನಯಗೊಳಿಸಿದ ಭಾಷೆ ಬಳಕೆಗೊಳ್ಳುತ್ತದೆ. ಪೌರಾಣಿಕ ಹಾಗೂ ಐತಿಹಾಸಿಕ ನಾಟಕಗಳಾದರೆ ಗ್ರಂಥಸ್ಥ ಭಾಷೆಯ ಪ್ರಯೋಗವಾಗುತ್ತದೆ. ಸಂಭಾಷಣೆಯ ಸಂದರ್ಭದಲ್ಲಿ ವಾಕ್ಯಗಳು ಚಿಕ್ಕವಾಗಿದ್ದು ಸಾಧ್ಯವಾದಷ್ಟು ಒತ್ತಕ್ಷರಗಳಿಲ್ಲದೆ ಸುಲಭ ಉಚ್ಚಾರಣೆಗೆ ಯೋಗ್ಯವಾಗಿದ್ದರೆ ಮಾತಿನ ಸಂವಹನ ಸಾಧ್ಯವಾಗುತ್ತದೆ. ಶಬ್ದಗಳ ಬಳಕೆ ಹಾಗೂ ಉಚ್ಚಾರ ಬಾನುಲಿ ನಾಟಕದ ಯಶಸ್ಸಿನ ಕೀಲಿಕೈಗಳು. ಶಬ್ದಗಳಿಗೆ ತನ್ನದೇ ಆದ ಅರ್ಥಸಾಧ್ಯತೆಗಳಿವೆ. ಆ ಅರ್ಥಸಾಧ್ಯತೆ ಸಂಭಾಷಣೆಯಲ್ಲಿದ್ದು, ಪ್ರಯೋಗಗೊಳ್ಳುವ ಶಬ್ದಗಳ ಏರಿಳಿವಿನಲ್ಲಿ ಶಬ್ದದ ಅರ್ಥಸ್ಫೋಟವಾಗುತ್ತದೆ. ಶಬ್ದಗಳ ಅಂತರಾಳದಲ್ಲಿ ಲಯವಿನ್ಯಾಸವಿದ್ದು ಅದನ್ನು ಗ್ರಹಿಸುವ ಶಕ್ತಿಯುಳ್ಳ ಲೇಖಕ- ಕಲಾವಿದನಿಗೆ ತಾನು ಆಡುವ ಮಾತಿನ ಪರಿಣಾಮರನ್ನು ಸಂವಹಮಾಡಬಲ್ಲ ಪ್ರಾತಿಭಗುಣವಿರುತ್ತದೆ. ಬಾನುಲಿ ನಾಟಕ ಶ್ರವ್ಯಪ್ರಧಾನವಾದದ್ದರಿಂದ ಅದಕ್ಕೆ ಕಾಲದ ಕಟ್ಟಳೆಯಿರಬೇಕು. ೧೫ ನಿಮಿಷದಿಂದ ಒಂದು ಗಂಟೆಯ ನಾಟಕವಾದರೆ ಪರಿಣಾಮಕಾರಿಯಾಗಿರುತ್ತದೆ. ರಂಗನಾಟಕಗಳಲ್ಲಿ ಮಾತು ಹಾಗೂ ಆಂಗಿಕ ಅಭಿನಯ ಭಾವಾಭಿವ್ಯಕ್ತಿಗೆ ನೆರವಾಗುತ್ತದೆ. ಬಾನುಲಿ ನಾಟಕಕ್ಕೆ ಅಭಿನಯದ

ಅವಕಾಶವಿಲ್ಲವಾದ್ದರಿಂದ ಅಭಿನಯವನ್ನು ಮಾತಿನ ಏರಿಳಿತದಲ್ಲೇ, ಭಾವನೆಯಲ್ಲೇ ಪ್ರಕಟಪಡಿಸಬೇಕು. ರಂಗನಾಟಕದಲ್ಲಿ ಸಂಭಾಷಣೆಯನ್ನು ಮುಖಭಾವದಿಂದ, ಹಾವಭಾವಗಳಿಂದ ಒಪ್ಪಿಸಬೇಕು. ಬಾನುಲಿ ನಾಟಕದಲ್ಲಿ ಪಾತ್ರಗಳು ಕಂಠಪಾಠಮಾಡಿದ ಸಂಭಾಷಣೆಯನ್ನು ಒಪ್ಪಿಸಬೇಕಾಗಿಲ್ಲ, ಹಸ್ತಪ್ರತಿ ಕೈಯಲ್ಲಿ ಹಿಡಿದುಕೊಂಡೇ ಹೇಳಬಹುದು. ಪಾತ್ರಧಾರಿಯ ವೇಷಭೂಷಣದ ಅಗತ್ಯವಿಲ್ಲ. ಒಬ್ಬನೇ ಪಾತ್ರಧಾರಿ ಧ್ವನಿ ಬದಲಿಸಿ ಎಷ್ಟು ಪಾತ್ರಗಳನ್ನಾದರೂ ಮಾಡಬಹುದು. ಬಾನುಲಿ ನಾಟಕದ ಪಾತ್ರಧಾರಿಗಳು ಆಕರ್ಷಕ ವ್ಯಕ್ತಿತ್ವವನ್ನು ಹೊಂದಿರಬೇಕೆಂದೇನೂ ಇಲ್ಲ. ಆದರೆ ಆಯಾ ಪಾತ್ರಕ್ಕೆ ತಕ್ಕ ಧ್ವನಿಯಿರಬೇಕು. ನಿರ್ದೇಶಕನ ಸೂಚನೆಯಂತೆ ಧ್ವನಿಯ ಏರಿಳಿತಗಳಿಂದ ಅಭಿನಯಿಸಿದರೆ, ಸಂದರ್ಭ ಸನ್ನಿವೇಶಗಳನ್ನು ಎಚ್ಚರಿಕೆಯಿಂದ ಗ್ರಹಿಸಿ, ಪಾತ್ರವನ್ನು ಅರ್ಥಮಾಡಿಕೊಂಡು ಮಾತನಾಡಿದರೆ ಒಳ್ಳೆಯ ಪರಿಣಾಮ ಸಾಧ್ಯ. ಸಾಮಾನ್ಯ ನಾಟಕವೂ ಉತ್ತಮ ಅಭಿನಯದಿಂದ (ಧ್ವನಿಯ ಏರಿಳಿತಗಳಿಂದ) ಶ್ರೇಷ್ಠ ನಾಟಕವಾಗಿ ಪ್ರಶಂಸೆ ಗಿಟ್ಟಿಸಬಹುದು.

ಬಾನುಲಿ ನಾಟಕ ಪರಿಣಾಮಕಾರಿಯಾಗಲು ದೃಶ್ಯ ಬದಲಾವಣೆಗೆ ಬ್ರಿಡ್ಜ್ ಮ್ಯೂಸಿಕ್ ಬಳಸಲಾಗುವುದು. ಸಂತೋಷ, ದುಃಖದ ಭಾವನೆಗಳ ಅಭಿವ್ಯಕ್ತಿಗೆ ಸಂಗೀತ ಪರಿಕರಗಳನ್ನು ಬಳಸಲಾಗುವುದು. ಯುದ್ಧ, ಬಿರುಗಾಳಿ, ಸಿಡಿಲು, ಭೂಕಂಪ, ಅಗ್ನಿ, ಕಾರು, ಬಸ್ಸು, ರೈಲು, ವಿಮಾನ, ಸಮುದ್ರದ ಭೋರ್ಗರೆತ, ಹಕ್ಕಿಗಳ ಚಿಲಿಪಿಲಿನಾದ-ಹೀಗೆ ಸನ್ನಿವೇಶಕ್ಕೆ ಅಗತ್ಯವಿರುವ ಧ್ವನಿ ಪರಿಣಾಮವನ್ನು (Sound Effect) ಅಳವಡಿಸಲಾಗುವುದು. ರಂಗಭೂಮಿಯಲ್ಲಿ ತರಲಾಗದ ಧ್ವನಿ ಪರಿಣಾಮವನ್ನು ಬಾನುಲಿ ನಾಟಕದಲ್ಲಿ ತರಲು ಸಾಧ್ಯವಿದೆ. ಹಾಗೆ ತರಲು ಒಳ್ಳೆಯ ಸಂಕಲನಕಾರನ ಕೌಶಲ್ಯದ ಅಗತ್ಯವಿದೆ. ಬಾನುಲಿ ನಾಟಕದ ಆಕರ್ಷಣೆ ಮಧ್ಯೆ ಮಧ್ಯೆ ಬಳಸುವ ಸಂಗೀತದಲ್ಲೂ ಕಾಣಬರುತ್ತದೆ. ಮಾತು, ಶಬ್ದ, ಸಂಕೇತ, ಸಂಗೀತ, ನಿಶ್ಶಬ್ದ-ಇವೇ ಬಾನುಲಿ ನಾಟಕದ ಪರಿಕರಗಳು. ೧೯೭೭ರಲ್ಲಿ ಅಮೆರಿಕನ್ ನಾಟಕಕಾರ ಅರ್ಚಿಬಾರ್ಡ್ ಮ್ಯಾಕ್‌ಲೀಶ್ 'ದಿ ಫಾಲ್ ಆಫ್ ದ ಸಿಟಿ' ಎಂಬ ನಾಟಕ ಬರೆದು ಪ್ರಸಾರ ಮಾಡಿದ. ಅಂದೇ ಬಾನುಲಿ ನಾಟಕದ ಉದಯವಾಯಿತು ಎಂದು ಹೇಳಲಾಗಿದೆ. ಬಾನುಲಿ ನಾಟಕ ಹಲವಾರು ಪ್ರಯೋಗಶೀಲ ತಿರುವುಗಳನ್ನು ಪಡೆದು ಈಗ ಅದೊಂದು ಕಲಾತ್ಮಕ ಅಭಿವ್ಯಕ್ತಿಯಾಗಿ ಜಾಗತಿಕ ನೆಲೆಯಲ್ಲಿ ಸ್ವೀಕೃತವಾಗಿದೆ. ಕರ್ನಾಟಕದಲ್ಲಿ ಇಂದು ಬಾನುಲಿ ನಾಟಕಗಳಿಗೆ ಹೆಸರು ತಂದವರು ಡಾ. ಎಚ್.ಕೆ. ರಂಗನಾಥ್, ಎಂ. ನರೇಂದ್ರಬಾಬು, ಟಿ. ಸುನಂದಮ್ಮ, ನವರತ್ನರಾಂ, ಎಸ್, ಎನ್. ಶಿವಸ್ವಾಮಿ, ಡಾ. ವಸಂತ ಕವಲಿ, ಆದ್ಯ ರಂಗಾಚಾರ್ಯ, ಎ.ಎಸ್. ಮೂರ್ತಿ, ಯಮುನಾಮೂರ್ತಿ, ಎಚ್.ಎಸ್. ಪಾರ್ವತಿ, ಟಿ.ಎನ್. ಮಹದೇವಯ್ಯ ಮುಂತಾದ ಲೇಖಕರು.

ಟಿ. ಎನ್. ಮಹದೇವಯ್ಯನವರು ಕನ್ನಡದ ಶ್ರೇಷ್ಠ ನಾಟಕಕಾರರು, ಅವರ ಕಾವ್ಯ ಕನ್ನಡ ಸಹೃದಯರ ಅವಜ್ಞೆಗೆ ಗುರಿಯಾದಂತೆಯೇ ಅವರ ನಾಟಕಗಳೂ ಗುರಿಯಾಗಿವೆ. ಬದುಕಿನ ಸಮಗ್ರ ವಿಕಾಸವೇ, ಸಂಪೂರ್ಣ ಅಭಿವ್ಯಕ್ತಿಯೇ ಸಾಹಿತ್ಯ ಎಂಬ ಮಾತಿಗೆ ಲಾವಣ್ಯ ಪೂರ್ಣ ಉದಾಹರಣೆ ಟಿ. ಎನ್. ಮಹದೇವಯ್ಯನವರ

ಕೃತಿಗಳು. ಕನ್ನಡ ನಾಟಕ ಸಾಹಿತ್ಯಕ್ಕೆ ತಂದಿರುವ ಕಾಣಿಕೆ ಗಣನೀಯವಾದರೂ ಆಗೀಗ ಮೈತಳೆದಿರುವ ನಾಟಕ ಕೃತಿಗಳ ವಸ್ತುವೈವಿಧ್ಯ, ಪಾತ್ರಸೃಷ್ಟಿ, ರಂಗತಂತ್ರ, ಪ್ರಯೋಗದೃಷ್ಟಿ, ನಿರೂಪಣಾಶೈಲಿ, ಭಾಷೆ ಮೊದಲಾಗಿ ನಾನಾ ದೃಷ್ಟಿಯಿಂದ ಹೊಸತನ ಕಂಡುಬರುತ್ತವೆ. ಅವರ ನಾಟಕಗಳು ನಿತ್ಯ ನೂತನವಾಗಿ ಹೊಸ ಪರಿಸರದಲ್ಲಿ ಸತ್ವಪೂರ್ಣವಾಗಿ ಕಾಣಿಸಿಕೊಳ್ಳುತ್ತವೆ.

ವಸ್ತುವಿನ ಆಯ್ಕೆಯಲ್ಲೇ ಕೃತಿಕರ್ತನ ಜೀವನಪ್ರಜ್ಞೆಯನ್ನು ಅರ್ಥಮಾಡಿಕೊಳ್ಳಬಹುದೆಂದು ಕಾಣುತ್ತದೆ. ಮಹದೇವಯ್ಯನವರು ಮಾನವೀಯ ಮೌಲ್ಯಗಳನ್ನು ಎತ್ತಿಹಿಡಿಯುವಂತಹ, ದುರ್ಬಲ ಹೃದಯಗಳಲ್ಲಿ ಆತ್ಮವಿಶ್ವಾಸದ ಕಿಚ್ಚು ಮೂಡಿಸುವಂತಹ ಆದರ್ಶ ವಸ್ತುಗಳನ್ನೆ ತಮ್ಮ ಕೃತಿಗಳಿಗೆ ಆರಿಸಿಕೊಂಡವರು. ಅವರ ಸಾಹಿತ್ಯವು ಕಥೆ, ಪ್ರಬಂಧ, ಕವನ, ವಚನ, ಸಂಗ್ರಹ, ಸಂಪಾದನೆ-ಮೊದಲಾಗಿ ನಾನಾ ರೂಪದಲ್ಲಿ ಹೊರ ಬಂದಿದ್ದರೂ, ಇವೆಲ್ಲಕ್ಕೂ ಸಿರಿಮುಡಿಯಾಗಿ ಅವರ ನಾಟಕ ಸಾಹಿತ್ಯ ನಿಂತಿದೆಯೆಂದು ಹೇಳಬಹುದು. ಅವರ ನಾಟಕಗಳಲ್ಲಿ ಬರುವ ಪಾತ್ರಗಳಲ್ಲಿ ನಮಗೆ ಕಾಣುವುದು ಉದಾತ್ತ ಗುಣಧರ್ಮ, ಸಹಜ ಸಹೃದಯತೆ; ಅನನ್ಯ ಅನುಭಾವ;[೨]

ಮಹದೇವಯ್ಯನವರು 'ವಿಜಯಶ್ರೀ' ಕೃತಿಯ ಮೂಲಕ ಕನ್ನಡ ನಾಟಕ ಸಾಹಿತ್ಯಕ್ಕೆ ಉತ್ತಮ ಕಾಣಿಕೆ ನೀಡಿದ್ದಾರೆ. ಇದು ನಾಲ್ಕು ಏಕಾಂಕ ರೇಡಿಯೋ ನಾಟಕ ಸಂಗ್ರಹ. 'ವಿಜಯಶ್ರೀ'ಯಲ್ಲಿರುವ ನಾಟಕಗಳು ರೇಡಿಯೋಕ್ಕಾಗಿ ಬರೆದವು. ದೃಶ್ಯನಾಟಕಗಳಂತೆ ಶ್ರವ್ಯ ನಾಟಕಗಳನ್ನು ಪರಿಣಾಮಕಾರಿಯಾಗಿ ಸಂಯೋಜಿಸುವುದು ಸುಲಭವಲ್ಲ. ಕೇವಲ ಶಬ್ದಗಳಿಂದಲೇ ದೃಶ್ಯವನ್ನು ಅನುಭವಿಸುವಂತೆ ಮಾಡುವ ಪ್ರತಿಭೆ ಇಲ್ಲಿಗೆ ಬೇಕಾಗುತ್ತದೆ. ಮಹದೇವಯ್ಯನವರ ರೇಡಿಯೋ ನಾಟಕಗಳಲ್ಲಿ ಅಂತಹ ಪ್ರತಿಭೆಯನ್ನು ಕಾಣಬಹುದು. ಶ್ರವ್ಯನಾಟಕ ರಚನೆಯಲ್ಲಿ ಅವರದು ಸಿದ್ಧಹಸ್ತವೆಂದರೆ ಹೆಚ್ಚು ಒಪ್ಪುತ್ತದೆ.

ಈ ಕೃತಿಯಲ್ಲಿಯಲ್ಲಿರುವ ಮೊದಲ ನಾಟಕವೇ 'ವಿಜಯಶ್ರೀ'. ಮಹಾಕವಿ ಪಂಪನ ಆದಿಪುರಾಣದ ಒಂದು ಪ್ರಸಂಗ. "ಇಲ್ಲಿನ ಕಥಾವಸ್ತು, ಕಥೆ ಹಳೆಯದಾದರೂ ರೂಪಕದಲ್ಲಿನ ದೃಶ್ಯ ಸಂಯೋಜನೆ, ಹೊಸ ಪಾತ್ರಗಳ ರಚನೆ, ಕಥಾ ನಿರೂಪಣೆಗಳು ಸಂಪೂರ್ಣವಾಗಿ ಹೊಸತನ್ನೆ ಒಳಗೊಂಡಿವೆ. ಅದಕ್ಕಾಗಿ ಈ ಕೃತಿ ಎಲ್ಲ ರೀತಿಯಿಂದಲೂ ಸ್ವತಂತ್ರವೆಂದು ಪರಿಗಣಿಸಲ್ಪಡದಿರಲಾರದು"[೩] ಎಂದು ಕೃತಿಕರ್ತರು ಮುನ್ನುಡಿಯಲ್ಲಿ ಹೇಳಿರುವ ಮಾತುಗಳು ಕೃತಿಯಲ್ಲಿ ಸಾರ್ಥಕಗೊಂಡಿವೆಯೆಂದು ಹೇಳಬಹುದು.

ಹನ್ನೊಂದು ದೃಶ್ಯಗಳನ್ನು ಒಳಗೊಂಡಿರುವ ವಿಜಯಶ್ರೀ ನಾಟಕವು ಬಾಹುಬಲಿಯ ವೈರಾಗ್ಯಭಾವದ ಸೂಚನೆಯಾಗಿದೆ. ಭೂಮಂಡಲವನ್ನೆಲ್ಲ ಬಳಸಿದ ಶತ್ರುಗಳನ್ನು ನಿಗ್ರಹಿಸಿ ವಿಜಯಶ್ರೀಯನ್ನು ಎಳೆತಂದು ಸುದರ್ಶನ ಚಕ್ರಕ್ಕೆ ಒಪ್ಪಿಸಿದರೂ ದಿಗ್ವಿಜಯ ಪೂರ್ಣವಾಗದೆ, ಸೋದರ ಬಾಹುಬಲಿಯ ಮೇಲೆ ಕದನಕ್ಕಿಳಿಯುತ್ತಾನೆ ಭರತ. ದೃಷ್ಟಿಯುದ್ಧ, ಜಲಯುದ್ಧ ಕೊನೆಗೆ ಮಲ್ಲಯುದ್ಧ -ಎಲ್ಲದರಲ್ಲೂ ಮಹಾ ಪರಾಕ್ರಮಶಾಲಿಯಾದ ಬಾಹುಬಲಿಯ ವಜ್ರಹಸ್ತಗಳಿಂದ ಭರತನ ಸ್ವರ್ಣಶರೀರ ಸೋಲು ಅನುಭವಿಸುತ್ತದೆ.

ಹಿರಿಯ ಸೋದರನೆಂಬ ಆದರದಿಂದ ಭರತನಿಗೆ ಜೀವದಾನ ಮಾಡಿದ ಬಾಹುಬಲಿ, ಶಾಂತಿ ಕ್ಷಮೆ-ದಮೆಗಳಿಂದ ಧರೆಯನ್ನು ಪಾಲಿಸಿಕೊಂಡು ಹೋಗುವಂತೆ ಅಣ್ಣನಿಗೆ ಹಿತ ನುಡಿಯುತ್ತಾನೆ. ಆದರೆ ಆ ಸೋಲಿನಿಂದ ಅವಮಾನಿತನಾದ ಭರತ ಕ್ರೋಧಗೊಂಡು ಬಾಹುಬಲಿಯ ಶಿರ ಹಾರಿಸುವಂತೆ ತನ್ನ ಸುದರ್ಶನ ಚಕ್ರಕ್ಕೆ ಆಜ್ಞಾಪಿಸುತ್ತಾನೆ. ಆದುದೇ ಬೇರೆ. ಆ ಸುದರ್ಶನ ಚಕ್ರ ಬಾಹುಬಲಿಯನ್ನು ಮೂರು ಬಾರಿ ಪ್ರದಕ್ಷಿಣೆ ಮಾಡಿ ಶಾಂತವಾಗಿ ನಿಲ್ಲುತ್ತದೆ. ಧರ್ಮಯುದ್ಧಕ್ಕೆ ಒಪ್ಪಿದ ಭರತ ಅಧರ್ಮಮಾರ್ಗಕ್ಕೆ ಕೈಹಾಕಿ ಅವಮಾನಿತನಾಗಿ ನಿಲ್ಲುತ್ತಾನೆ.[೪] ಅವನಿಗೆ ಬುದ್ಧಿ ಹೇಳಿದ ಬಾಹುಬಲಿ, ಸಮಸ್ತ ಸಾಮ್ರಾಜ್ಯವನ್ನು ಅಣ್ಣನಿಗಿತ್ತು ವೈರಾಗ್ಯದ ಪರಮಪದವನ್ನು ಸ್ವೀಕರಿಸುತ್ತಾನೆ. ಇದು ಈ ನಾಟಕದ ಕಥಾವಸ್ತು.

ಬೆನ್ನಲ್ಲಿ ಬಿದ್ದವರ ಮೇಲೆ ಯುದ್ಧ ಮಾಡಬೇಕಾಗಿ ಬಂದ ಧರ್ಮಸಂಕಟ, ದಿಗ್ವಿಜಯದ ದುರಾಗ್ರಹದಲ್ಲಿ ಸೋದರ ವಾತ್ಸಲ್ಯವನ್ನು ಬಲಿಗೊಟ್ಟು ದ್ವೇಷದ ಜ್ವಾಲೆ ಮತ್ತು ಅಪ್ರತಿಮ ವೈರಾಗ್ಯದೆದುರು ನೀರಾಗಿ ಹರಿದ ಪಶ್ಚಾತ್ತಾಪ-ಇವುಗಳಲ್ಲಿ ಅದ್ದಿ ತೆಗೆದ ಭರತನ ಪಾತ್ರ ಒಂದು ಕಡೆಯಾದರೆ, ಅತಿಯಾದ ನೆಲದಾಸೆ, ಬಂಧುದ್ವೇಷ, ವಿಜಯದ ಉನ್ನತ್ತತೆಯಿಂದ ಅನ್ಯಾಯವನ್ನು ಪ್ರತಿಭಟಿಸದೆ ಶರಣಾಗಲಾರೆ ಎನ್ನುವ ಕ್ಷಾತ್ರಪೌರುಷ, ಯುದ್ಧದಲ್ಲಿ ಗೆಲುವು ತನ್ನದಾದರೂ ಅಣ್ಣನೆಂಬ ಅಭಿಮಾನದಿಂದ ಜೀವದಾನ ಮಾಡಿದ ಔದಾರ್ಯ ಮತ್ತು ರಾಜ್ಯಾಧಿಕಾರದ ಸಕಲ ವೈಭವಗಳನ್ನು ತೊರೆದು ದೀಕ್ಷೆ ಸ್ವೀಕಾರ ಮಾಡಿದ ಪರಮ ವೈರಾಗ್ಯ ಇವುಗಳಲ್ಲಿ ಮಿಂದು ನಿಂತ ತೇಜೋಮೂರ್ತಿ ಬಾಹುಬಲಿ ಮತ್ತೊಂದು ಕಡೆ ಶ್ರೋತೃಗಳಿಗೆ ಕಣ್ಣಿಗೆ ಕಟ್ಟಿದಂತೆ ನಿಲ್ಲುತ್ತಾರೆ.

ಯುದ್ಧಕ್ಕೆ ಮುನ್ನ ಭರತನಲ್ಲಿಗೆ ಬರುವ ವಿಜಯಶ್ರೀ "ನಿನ್ನ ತಲೆಯ ಮೇಲೆ ಧರ್ಮಸೂಕ್ಷ್ಮದ ಖಡ್ಗ ತೂಗಾಡುತ್ತದೆ. ಎಚ್ಚರಿಕೆಯಿರಲಿ" ಎಂದು ಹೇಳಿ ಹೋಗುವುದು ಮತ್ತು ಬಾಹುಬಲಿಯ ಅಂತಃಪುರಕ್ಕೆ ಹೋಗಿ ವೈರಾಗ್ಯಶ್ರೀಯು "ನಿನ್ನ ಅಪೂರ್ವ ತ್ಯಾಗದಿಂದ ಧರ್ಮವೀರನಾಗು" ಎಂದು ಹಾರೈಸುವುದು ಈ ಸನ್ನಿವೇಶಗಳು ಅತ್ಯಂತ ಅರ್ಥಪೂರ್ಣವಾಗಿ ಮೂಡಿ ಬಂದಿದೆ. ಯುದ್ಧದ ನಂತರ ವಿಜಯಶ್ರೀ ಮತ್ತು ವೈರಾಗ್ಯಶ್ರೀಯರ ಸಂಗಮವಂತೂ ನಿಜಕ್ಕೂ ಮಾರ್ಮಿಕವಾಗಿದೆ. ವಿಜಯ-ವೈರಾಗ್ಯಗಳು ಒಂದಾದ ಮೇಲೆ ಲೋಕದ ಅನಂತ ಕೋಟಲೆಗಳು ಶಾಂತವಾದಂತೆ"[೫] ಎಂದು ಭರತ ಹೇಳುವ ಮಾತುಗಳು ಸಾರ್ವಕಾಲಿಕ ಸಂದೇಶದ ನುಡಿಗಳಾಗಿವೆ. ವಿಚಾರ ಮಂಥನದ ವಿಶಿಷ್ಟ ತಂತ್ರವನ್ನು ಈ ಪಾತ್ರಗಳ ಮೂಲಕ ಅಳವಡಿಸಿರುವ ಮಹದೇವಯ್ಯನವರು ಉತ್ತಮ ಕರ್ತೃಗಳಾಗಿದ್ದಾರೆ. ಅವರ ಸೃಜನ ಶಕ್ತಿಯಲ್ಲಿ ವಿಜಯಶ್ರೀ ವೈರಾಗ್ಯಶ್ರೀ'ಗಳ ಭಾವ ಸಂಗಮವಾಗಿದೆ.

ಸಂಗ್ರಹದ ಎರಡನೆಯ ನಾಟಕ "ವಿದ್ಯಾರಣ್ಯ" ಯವನರ ದಾಳಿ, ಕನ್ನಡಿಗರ ಒಳಜಗಳದಿಂದ ಅನಾಥವಾಗಿದ್ದ ಅಖಂಡ ಕರ್ನಾಟಕದಲ್ಲಿ ಧರ್ಮ, ಸಂಸ್ಕೃತಿ, ಕಲೆ ಮತ್ತು ಸಾಹಿತ್ಯ ಪರಂಪರೆಯ ಪುನರುತ್ಥಾನಕ್ಕಾಗಿ ಆದ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಹಿನ್ನೆಲೆ ಈ ನಾಟಕದ ಕಥೆ.

ಒಂಬತ್ತು ದೃಶ್ಯಗಳನ್ನು ಒಳಗೊಂಡಿರುವ ವಿದ್ಯಾರಣ್ಯ ನಾಟಕದ ದೃಶ್ಯ ಮಾಧವ ಮತ್ತು ಅವನ ಧರ್ಮಪತ್ನಿ ವೀತಿಹೋತ್ರಿಯ ಸಂಭಾಷಣೆಯೊಂದಿಗೆ ಆರಂಭವಾಗುತ್ತದೆ. ನಾಡಿನ ಧರ್ಮ ಸಂಸ್ಕೃತಿ ಸಾಹಿತ್ಯಗಳಿಗೆ ಒದಗಿದ್ದ ವಿಪತ್ತು, ಯವನರ ದಾಳಿಗಳ ವಿರುದ್ಧ ನಡೆದ ಬಲಿದಾನ ಮೊದಲಾದವುಗಳನ್ನು ಈ ದಂಪತಿಗಳ ಸಂಭಾಷಣೆಯ ಮಧ್ಯ ಹಿಂದಿನ ನೆನಪಿನ ರೂಪದಲ್ಲಿ ತರಲಾಗಿದೆ. ಈ ತಂತ್ರ ಶ್ರೋತೃವಿಗೆ ಪರಿಸ್ಥಿತಿಯ ಪರಿಚಯವನ್ನು ಪರಿಣಾಮಕಾರಿಯಾಗಿ ಮಾಡಿಕೊಡುತ್ತದೆ.

"ಧನ ಬಲವೇ ರಾಜ್ಯಸ್ಥಾಪನೆಯ ಸರ್ವಸ್ವವಲ್ಲ. ಸಂಘಟನೆಯಿಂದ ಸಾಮ್ರಾಜ್ಯ ಕಟ್ಟಬೇಕು"[೬] ಎಂದು ವೀತಿಹೋತ್ರಿ ಮಾಧವನಿಗೆ ಹೇಳುವ ಮಾತು ಅತ್ಯಂತ ಸೂಚ್ಯವಾಗಿದೆ. ಆದರೂ ಕನ್ನಡತಾಯಿಯನ್ನು ರಾಜರಾಜೇಶ್ವರಿಯನ್ನಾಗಿಸುವ ಧೈರ್ಯಉತ್ಸಾಹಗಳನ್ನು ತುಂಬಿಕೊಂಡು ಹೊರಡುವ ಮಾಧವ ರಾಜ್ಯ ಸ್ಥಾಪನೆಗಾಗಿ, ಕನ್ನಡ ನಾಡಿನಲ್ಲಿ ಚಿನ್ನದ ಮಳೆ ಕರೆಸುವ ಇಚ್ಛೆಯಿಂದ ತಪಸ್ಸಿಗೆ ಕೂರುವುದು ಮತ್ತು ಭುವನೇಶ್ವರಿಯ ಸಂಜ್ಞಾದೇಶ ಅರಿತು ಸನ್ಯಾಸ ಸ್ವೀಕರಿಸಿ ವಿದ್ಯಾರಣ್ಯರಾದುದನ್ನು ಕೃತಿಕರ್ತರು ಚೆನ್ನಾಗಿ ಚಿತ್ರಿಸಿದ್ದಾರೆ.

'ವಿದ್ಯಾರಣ್ಯ' ನಾಟಕದಲ್ಲಿ ಬರುವ ಸಂಭಾಷಣೆಗಳು ಓದುಗ ಅಥವಾ ಶ್ರೋತೃವನ್ನು ರೋಮಾಂಚನಗೊಳಿಸುತ್ತವೆ; ಸ್ವಾಭಿಮಾನವನ್ನು ಜಾಗೃತಗೊಳಿಸುತ್ತವೆ. ನಾಡಿಗಾಗಿ ಬಲಿದಾನಕ್ಕೂ ಸಿದ್ಧರಿರಬೇಕೆಂಬ ಕೆಚ್ಚೆದೆಯನ್ನು ಮೂಡಿಸುತ್ತವೆ.

ಶರಣಾಗತನಾಗಿ ಬಂದಿದ್ದ ಬಹಾಲುದ್ದೀನ್, ತನ್ನಿಂದಾಗಿ ಕಂಪಿಲಕ್ಕೂ ಕಂಪಿಲವೇ ಯವನರಿಂದ ವಿನಾಶ ಹೊಂದಬೇಕಾಯಿತ್ತಲ್ಲಾ ಎಂದು ಯೋಚನೆ, ಈ "ವಿನಾಶವನ್ನು ನಿಲ್ಲಿಸಲು, ತನ್ನನ್ನು ದಿಲ್ಲೀಶ್ವರಿಗೆ ಒಪ್ಪಿಸಿ ಬಿಡಿ' ಎಂದು ಕೇಳಿದಾಗ ಕಂಪಿಲರಾಯ ಕೊಡುವ ಉತ್ತರ ಕನ್ನಡಿಗರ ಔದಾರ್ಯ ಮತ್ತು ಸ್ವಾಭಿಮಾನಗಳಿಗೆ ಜ್ವಲಂತ ಸಾಕ್ಷಿಯಾಗಿದೆ.[೭]

ಬಹಾವುದ್ದೀನ್! ಅದು ಈ ಜನ್ಮದಲ್ಲಿ ಸಾಧ್ಯವಾಗಲಾರದ ಸಂಗತಿ. ನನ್ನ ದೇಹದಲ್ಲಿ ಪ್ರಾಣವಿರುವತನಕ ಶರಣಾಗತನಾದವನು ಶತ್ರು ವಶನಾಗಲಾರ! ಹೋಗು! ಯವನ ವೀರ; ವ್ಯರ್ಥವಾಗಿ ಆ ರೀತಿಯ ಪ್ರಾರ್ಥನೆ ಮಾಡಬೇಡ. ನನ್ನ ಕಾಡಿನ ಭಟರು ನಿನಗಾಗಿ ಕಾಯುತ್ತಿರುವರು. ಮುಂಬೆಳಗು ಮೂಡುತ್ತಿದೆ. ನಮ್ಮ ಹೆಂಗಸರು ಅಗ್ನಿಪ್ರವೇಶ ಮಾಡುತ್ತಿದ್ದಾರೆ. ನಮಗಿಂದು ಮರಣವೇ ಮಹಾನವಮಿ![೮]

ವಿದ್ಯಾರಣ್ಯರು ಹರಿಹರ ಮತ್ತು ಬುಕ್ಕರಾಯರನ್ನು ತಮ್ಮ ಸಂಕಲ್ಪಸಿದ್ಧಿಗೆ ಸಾಧನವಾಗಿ ಮಾಡಿಕೊಂಡು ಅವರಿಗೆ ಅಪ್ರತಿಮ ಮಾರ್ಗದರ್ಶನ ನೀಡಿ, ಕನ್ನಡಿಗರಲ್ಲಿ ಜಾಗೃತಿಯುಂಟು ಮಾಡಿ 'ವಿಜಯನಗರ' ಸ್ಥಾಪಿಸುತ್ತಾರೆ.

ಪ್ರಸಂಗ ಚಿತ್ರಣಕ್ಕೆ ದೃಶ್ಯ ನಾಟಕಗಳಲ್ಲಿರುವಷ್ಟು ಅವಕಾಶ ಶ್ರಾವ್ಯ ನಾಟಕಗಳಲ್ಲಿರುವುದಿಲ್ಲ. ಸೀಮಿತ ಕಾಲ ಮತ್ತು ಅವಕಾಶಗಳಲ್ಲಿ 'ವಿದ್ಯಾರಣ್ಯ' ನಾಟಕ ವಿಚಾರಪೂರ್ಣವಾಗಿ ರೂಪುಗೊಂಡಿದೆ.

ಸಂಗ್ರಹದ ಮೂರನೆಯ ನಾಟಕ 'ನೀಲಾಂಬಿಕೆ' ಹನ್ನೆರಡನೆಯ ಶತಮಾನದಲ್ಲಿ ಧಾರ್ಮಿಕ, ಸಾಮಾಜಿಕ, ಸಾಹಿತಿಕ ಹಾಗೂ ರಾಜಕೀಯ ಕ್ಷೇತ್ರದಲ್ಲಿ ಅಪೂರ್ವವಾದ ಕ್ರಾಂತಿಯನ್ನುಂಟುಮಾಡಿದ ಮಹಾಕಾರುಣಿಕ ಬಸವಣ್ಣನವರ ಜೀವನದ ಕೊನೆಯ ಘಟ್ಟಕ್ಕೆ ಸಂಬಂಧಿಸಿದುದು. ಬಸವಣ್ಣನವರ ಧರ್ಮಪತ್ನಿ ನೀಲಾಂಬಿಕೆಯೇ ಈ ನಾಟಕದ ಕಥಾನಾಯಕಿ.

ಬಸವಣ್ಣನವರಂಥ ಅಸಾಮಾನ್ಯ ವ್ಯಕ್ತಿಯ ಪತ್ನಿಯಾಗಿ ಅವನ ಕ್ಷೇತ್ರದಲ್ಲಿ ಎಲ್ಲ ಕಾರ್ಯಗಳಿಗೆ ಒತ್ತಾಸೆಯಾಗಿ ನಿಂತ ನೀಲಾಂಬಿಕೆ ಅನುಭಾವದಲ್ಲಿ ಅವನನ್ನು ಮೀರಿಸಿ ನಿಂತವಳು ಎಂಬುದು ಈ ನಾಟಕದ ಮೂಲಕ ಬಿಂಬಿತವಾಗಿದೆ.

ನಾಟಕದಲ್ಲಿ ಒಂಬತ್ತು ದೃಶ್ಯಗಳಿವೆ. ಮೊದಲ ದೃಶ್ಯ ಮಹಾಮನೆಯ ದಾಸೋಹದ ನಂತರ ಲಿಂಗಮ್ಮ - ನೀಲಾಂಬಿಕೆಯರ ಸಂಭಾಷಣೆಯಿಂದ ಪ್ರಾರಂಭವಾಗುತ್ತದೆ.

ಸಾವಿರಾರು ಜನ ಜಂಗಮರ ದಾಸೋಹದಲ್ಲಿ ದಣಿವರಿಯದ ನೀಲಂಬಿಕೆಯನ್ನು ಕಂಡು ಲಿಂಗಮ್ಮ ವಿಶ್ರಾಂತಿ ತೆಗೆದುಕೊಳ್ಳಲು ಕೇಳಿಕೊಳ್ಳುತ್ತಾಳೆ. 'ಮೈಕೈ ಕರಗಿ ಮೂಳೆ ಬಿಟ್ಟುಕೊಂಡವು"[೯] ಎಂದು ಪೇಚಾಡುತ್ತಾಳೆ, ಅದಕ್ಕೆ ನೀಲಾಂಬಿಕೆ ಕೊಡುವ ಉತ್ತರ; ಜಂಗಮರು ಸಂಗಮನಾಥನಂತೆ ಪೂಜ್ಯರು! ಅವರ ಚರಣಸೇವೆ ದೊರಕುವುದೇ ಜನ್ಮಾಂತರದ ಪುಣ್ಯ! ಭೋಗವಿಲಾಸಗಳಲ್ಲಿ ಲೀನರಾಗಿ ಮೈಮರೆತು ಕೊಳೆಯುವುದಕ್ಕಿಂತ ಶರಣರ ಸೇವೆಯಲ್ಲಿ ಸಾಯುವುದೇ ಲೇಸಲ್ಲವೇ?[೧೦]

ಆದರೂ ಲಿಂಗಮ್ಮನ ಒತ್ತಾಯದಿಂದ ತನ್ನ ವಜ್ರದೋಲೆಗಳಿಗೊಪ್ಪುವ ರೇಶ್ಮೆ ಸೀರೆ ಉಡುತ್ತಾಳೆ. ಅಷ್ಟರಲ್ಲೇ ನಾಗಲಾಂಬಿಕೆ ಬಂದು ಬಸವಣ್ಣ ರಾಜಸಭೆಯಲ್ಲಿ ವಿಚಾರಣೆಗೊಳಗಾಗಿದ್ದಾನೆಂದು ತಿಳಿಸುತ್ತಾಳೆ. ಕನಸು ಮನಸುಗಳಲ್ಲೂ ಯಾರಿಗೂ ಕೇಡು ಬಯಸದ ಕೂಡಲಸಂಗನ ಶರಣರನ್ನು ಈ ಜನರ ದೊರೆ ಏನು ಮಾಡೀತು ಎಂಬ ನಿಶ್ಚಲನಂಬಿಕೆ ಅವಳದು. ಅಷ್ಟೊತ್ತಿಗೆ ಬಸವಣ್ಣ ಬಂದು ವಿಷಯ ತಿಳಿಸಿ ಕಲ್ಯಾಣವನ್ನು ಬಿಟ್ಟುಹೋಗುವ ತಮ್ಮ ನಿರ್ಧಾರವನ್ನು ತಿಳಿಸುತ್ತಾರೆ. ಹೆಂಡತಿಯನ್ನು ನೋಡಿ ಭೋಗದ ಅಟ್ಟಹಾಸ ಶಿವಕಿಂಕರಿಗೆ ಬೇಕಾಗಿಲ್ಲವೆನ್ನಲು ನೀಲಾಂಬಿಕೆ ತನ್ನ ಮೊದಲಿನ ಉಡುಗೆ ತೊಟ್ಟು ಗಂಡನ ಜೊತೆ ಹೊರಡುತ್ತಾಳೆ. ಪ್ರಕೃತಿಯಲ್ಲಿ ಒಂದಾದ ಪತಿ-ಪತ್ನಿಯರ ವಿನೀತಭಾವ ವ್ಯಕ್ತವಾಗಿದೆ. ಬಸವಣ್ಣನ ಪಾಲಿಗೆ ಪ್ರಕೃತಿ ವಿಶ್ವಚೈತನ್ಯದ ಕ್ರೀಡಾಭೂಮಿಯಾದರೆ ನೀಲಾಂಬಿಕೆಗೆ ಅದು ಚೈತನ್ಯಕ್ಕೆ ದಾಸೋಹ ಸೇವೆ ಸಲ್ಲಿಸುತ್ತಿದೆ ಎನಿಸುತ್ತದೆ. ಪ್ರಕೃತಿ-ಚೈತನ್ಯಗಳ ಈ ಸಾಮರಸ್ಯವನ್ನು ಬದುಕಿನಲ್ಲಿ ಸಾಧಿಸಬೇಕಾದ ಅಂಗಲಿಂಗಗಳ ಸಾಮರಸ್ಯಕ್ಕೆ ಹೋಲಿಸಿ ವಿಶ್ವರಹಸ್ಯವನ್ನು ಅರಿಯಲು ಪ್ರಯತ್ನಿಸುತ್ತಾರೆ ಬಸವಣ್ಣ.

ಬಸವಣ್ಣನವರನ್ನು ಕಾಣಲು ದಕ್ಷಿಣ ದೇಶದಿಂದ ಕಲ್ಲಿನಾಥ ಕಲ್ಯಾಣದತ್ತ ಹೊರಟ ದಾರಿಯಲ್ಲೆ ಅವರನ್ನು ದರ್ಶಿಸುವ ಭಾಗ್ಯ, ಸಂಭ್ರಮ ಚಿತ್ರಿತವಾಗಿವೆ. ಬಸವಣ್ಣನವರ ಮಾನಸಿಕ ತೊಳಲಾಟ ಅದಕ್ಕೆ ನೀಲಾಂಬಿಕೆಯ ಸಮಾಧಾನ- "ಲೋಕ ಕಲ್ಯಾಣದ ಹೊರೆಹೊತ್ತ ನೀವು ಹೀಗಿರಲು ಸಾಧ್ಯವೆ! ಕಾಡಿನಗಲ ನಿಮಗೆ ಸಾಲದು!

ನೂರಾರು ಜನ ಬಂದು ಹೋಗುವ ಜಂಗಮರಿದ್ದರೂ ಶಿವಾನುಭವ, ಆಧ್ಯಾತ್ಮಿಕ ಸಾಧನೆ, ಸಂಶೋಧನೆ, ಸಮಾಜ ರಚನೆಯ ಅದೆಷ್ಟು ಕಾರ್ಯಗಳ ಹೊರೆ ನಿಮ್ಮ ತಲೆಯ ಮೇಲಿದೆ. ಅವುಗಳನ್ನು ಅರ್ಧದಲ್ಲಿ ಬಿಡಲಾಗುವುದೇ! ಎನ್ನುವ ನೀಲಾಂಬಿಕೆಗೆ ಬಸವಣ್ಣನ ಉತ್ತರ : "ದಿಟ! ನೀಲಾ...... ನನ್ನೊಬ್ಬನ ಲಿಂಗಾನುಸಂಧಾನ ನನಗೆ ಸಾಲದು! ಸಂಗಮನಾಥ ಕೈಹಿಡಿದು ನಡೆಯಿಸಿದಂತೆ ನಡೆಯುತ್ತಿರುವ ಕೂಸು ನಾನು! ತಂದೆ ದಾರಿ ತೋರು! ಹಿಡಿದ ಕೆಲಸ ಕೊನೆಗಾಣಿಸುವ ಸಾಹಸ ನೀಡು....".[೧೧] ಮತ್ತೆ ಅವರಿಗೆ ಕಲ್ಯಾಣಕ್ಕೆ ಹಿಂದುರಿಗಿ ಹೋಗಬೇಕೆನಿಸುತ್ತದೆ. ನೀಲಾಂಬಿಕೆಯ ಕನಸೂ ಅದನ್ನೇ ಸಮರ್ಥಿಸುತ್ತದೆ. ಜಂಗಮ ದಾಸೋಹಕ್ಕಾಗಿ ಹುತ್ತದಲ್ಲಿ ರತ್ನಹಾರವೊಂದು ಸಿಗುತ್ತದೆ. ರತ್ನಹಾರದ ಪ್ರಸಂಗದ ಮೂಲಕ ಕಣ್ತೆರೆದ ಬಿಜ್ಜಳ ಬಸವಣ್ಣನ ಕ್ಷಮೆಕೋರಿ ಅವನನ್ನು ಕಲ್ಯಾಣಕ್ಕೆ ಹಿಂತಿರುಗುವಂತೆ ಕೇಳಿಕೊಳ್ಳುತ್ತಾನೆ. ಬಸವಣ್ಣನ ಜಂಗಮಭಕ್ತಿ-ಪ್ರೇಮಗಳು ಈ ನಾಟಕದಲ್ಲಿ ಉತ್ತಮವಾಗಿ ಟಿ. ಎನ್. ಮಹದೇವಯ್ಯನವರು ಚಿತ್ರಿಸಿದ್ದಾರೆ. ಕಳ್ಳನೊಬ್ಬ ನೀಲಾಂಬಿಕೆಯ ಕಿವಿಯಲ್ಲಿದ್ದ ವಜ್ರದೋಲೆಗಳನ್ನು ತನ್ನ ಪ್ರೇಯಸಿ ಇಷ್ಟಪಟ್ಟಳೆಂದು ಅದನ್ನು ಕದಿಯಲು ಬರುತ್ತಾನೆ. ಆ ರಾತ್ರಿಯಲ್ಲಿ ಮಹಮನೆಗೆ ಬಂದುನಿಂತ ಅವನಿಗೆ ಪತಿ-ಪತ್ನಿಯರ ವ್ಯಕ್ತಿತ್ವದ ದರ್ಶನವಾಗುತ್ತದೆ. ಅವನು ಕಿವಿಗೆ ಕೈಹಾಕಿದಾಗ ಎಚ್ಚರಗೊಂಡ ನೀಲಾಂಬಿಕೆ ಕೂಗಿಕೊಳ್ಳುತ್ತಾಳೆ. ಎಚ್ಚೆತ್ತ ಬಸವಣ್ಣನ ಎದುರು ಕಳ್ಳ ತಾನು ಜಂಗಮನೆಂದು ಹೇಳುತ್ತ ನಿಂತುಕೊಳ್ಳುತ್ತಾನೆ. 'ಜಂಗಮ' ಶಬ್ದ ಕಿವಿಗೆ ಬಿದ್ದ ಕೂಡಲೇ ಬಸವಣ್ಣ ಪರಿಸರವನ್ನೇ ಮರೆತು ಬಿಡುತ್ತಾನೆ. "ಸಂಗಮನಾಥನು ಕಳ್ಳನಾಗಬಲ್ಲನೇ? ತಮಗೇನುಬೇಕು ಆಜ್ಞಾಪಿಸಿ. ಕೇಳಿದ್ದನ್ನು ಕೊಟ್ಟು ಧನ್ಯನಾಗುವೆ"[೧೨].... ಎನ್ನುತ್ತಾರೆ. ಕಳ್ಳ ತನ್ನಾಸೆಯನ್ನು ವ್ಯಕ್ತಪಡಿಸಲು ಪತ್ನಿಗೆ ತಡಮಾಡದೆ ಅದನ್ನು ತೆಗೆದುಕೊಡಲು ಹೇಳುತ್ತಾರೆ. ಆದರೆ ನೀಲಾಂಬಿಕೆ ಇದು 'ಓಲೆಭಾಗ್ಯ, ಬೇರೆ ಕೊಟ್ಟರಾಗದೆ'- ಎನ್ನುತ್ತಾಳೆ. ಸಿಟ್ಟುಗೊಂಡ ಬಸವಣ್ಣ: "ಒಡನಿರ್ದ ಸತಿಯೆಂದು ನೆಚ್ಚಿರ್ದೆನಯ್ಯ! ಕೈಹಿಡಿದ ಸಜ್ಜನೆಯೆಂದು ನಂಬಿರ್ದೆನಯ್ಯಾ! ಅಯ್ಯೋ! ನಮ್ಮಯ್ಯನ ಕೈನೊಂದಿತು!.... ತೆಗೆದುಕೊಡು ಎಲೆ ಚಂಡಾಲಗಿತ್ತಿ! ಕಳ್ಳನ ಮನೆಗೊಬ್ಬ ಬಲುಗಳ್ಳ ಬಂದೊಡೆ ಕೂಡಲಸಂಗಮನಲ್ಲದೆ ಮತ್ತಾರೂ ಅಲ್ಲ"[೧೩] ಎನ್ನುತ್ತಾರೆ. ನೀಲಾಂಬಿಕೆ ತಕ್ಷಣ ಅದನ್ನು ತೆಗೆದುಕೊಡುತ್ತಾಳೆ.

ಪತಿಪತ್ನಿಯರ ಈ ಅನ್ಯೋನ್ಯತೆ ಅರ್ಥವಂತಿಕೆಗಳನ್ನು ಸೂಕ್ಷ್ಮ ಸಹಜವಾಗಿ ಟಿ.ಎನ್.ಮಹದೇವಯ್ಯನವರು ಚಿತ್ರಿಸಿದ್ದಾರೆ. ನೀಲಾಂಬಿಕೆಯ ಆಧ್ಯಾತ್ಮ ಸಾಧನೆಯ ಎತ್ತರ ಅರಿವನ್ನು ಏಳನೆಯ ದೃಶ್ಯದಲ್ಲಿ ಚಿತ್ರಿಸಿದ್ದಾರೆ. ಧ್ಯಾನಮುದ್ರೆಯಲ್ಲಿ ಕುಳಿತ ಅವಳನ್ನು ಕಂಡು ಬಸವಣ್ಣ: "ಅದೆಷ್ಟು ವರ್ಷಗಳ ಕಾಲ ಈ ಆಳವಾದ ಅನುಭವ, ಸಾಮರಸ್ಯದ ಸುಖಕ್ಕಾಗಿ ನಾನು ಹೆಣಗಿದೆ...... ಇದು ಈಕೆಗೆ ಬಹು ಸುಲಭವಾಗಿ ಸಾಧ್ಯವಾಯಿತು ಸಂಗಮನಾಥನ ಕೃಪೆ..... ಜಂಗಮಸೇವೆ, ಲಿಂಗದ ಅನುಸಂಧಾನ ಶಿವಾನುಭವಗಳಲ್ಲಿ ಒಂದೇ ನಿಷ್ಠೆ ನೀಲಳದು!"[೧೪] ಎಂದುಕೊಳ್ಳುತ್ತಾರೆ. ತನ್ನ ಸಹಚರಿ, ಆಧ್ಯಾತ್ಮಗುರಿ ಭಕ್ತಿಭಂಡಾರಿಯನ್ನೇ ಮೀರಿ ಮುಂದೆ ನಡೆದಳು ನೀಲಾಂಬಿಕೆ. ಯಾವುದು ನಡೆಯಬಾರದೆಂದು ಬಸವಣ್ಣನವರು ಹಗಲಿರುಳು ಹೆಣಗಿದರೂ ಅದು ನಡೆದುಹೋಗುತ್ತದೆ. ಶರಣರ ಕೊಲೆಯಾಗುತ್ತದೆ, ಅದರ ಪರಿಣಾಮ ಬಿಜ್ಜಳನ ಕೊಲೆ. ಎಲ್ಲೆಲ್ಲೂ ರಕ್ತಪಾತ, ಅದನ್ನು ನೋಡಿ ಬಸವಣ್ಣ ಕಪ್ಪಡಿಸಂಗಮಕ್ಕೆ ಹೊರಟುಹೋಗುತ್ತಾರೆ.

ಕಲ್ಯಾಣದ ಪರಿಸರ ವಿಷಮಿಸಿದೆ. ಅದನ್ನು ನೋಡಿ ಲಿಂಗಮ್ಮ ಆ ಸ್ಥಳವನ್ನು ಬಿಟ್ಟು ಹೊರಡುವ ಪ್ರಸ್ತಾಪವೆತ್ತಿದಾಗ "ಲಿಂಗಮ್ಮ! ಜೀವದ ಹಂಗುತೊರೆದವರಿಗೆ ಜೀವದ ಮೇಲಿನ ಈ ಭ್ರಮೆ ಭ್ರಾಂತಿಗಳೇಕೆ? ವೃಥಾ ಗಾಬರಿ ಕಳವಳಗಳಿಂದ ಮನಸ್ಸಿನ ಶಾಂತಿಯನ್ನು ಕದಡಿಕೊಳ್ಳಬೇಕೆ? ಎನ್ನುತ್ತಾಳೆ ನೀಲಾಂಬಿಕೆ. ಕಪ್ಪಡಿಗೆ ಹೊರಡಲು ಸಿದ್ಧಳಾಗಿ ಬಂದ ಅತ್ತಿಗೆಗೆ "ಇಲ್ಲಿಲ್ಲದ ಸಂಗಯ್ಯ ಕಪ್ಪಡಿಯಲ್ಲಿರುವನೆ? ವಿಶ್ವತೋ ಬಾಹು, ವಿಶ್ವತೋ ಪಾದ, ವಿಶ್ವತೋ ಚಕ್ಷುವಾದ ಭಗವಂತನನ್ನು ಅಲ್ಲಲ್ಲಿ ಅರಸಬಹುದೇ?" ಎಂದು ಪ್ರಶ್ನಿಸುತ್ತಾಳೆ. ಹಡಪದ ಅಪ್ಪಣ್ಣ ಬಸವಣ್ಣನವರ ಇಚ್ಛೆಯಂತೆ ಅವಳನ್ನು ಕಪ್ಪಡಿಗೆ ಕರೆದೊಯ್ಯಲು ಬಂದಾಗ ಅವಳು ಕೊಡುವ ಉತ್ತರ ನಮ್ಮನ್ನು ದಿಗ್ಭ್ರಮೆಗೊಳಿಸುತ್ತದೆ. "ಇದೇನು ಅಪ್ಪಣ್ಣ? ನಿಮ್ಮ ದಂಡನಾಯಕರಿಗೆ ಈಗೇಕೆ ಈ ಭ್ರಮೆ ಹುಟ್ಟಿತು? ಶರಣಮಾರ್ಗಕ್ಕೆ ಇದು ತರವೇ? ನಾನಾರು ತಾವಾರೆಂಬ ನೆನಹು ಅಳಿದು ಮತ್ತೆ ಮರಹು ಬಂದಿತೆ?........ ನಾನಾರ ಸೇರಿದರೇನು? ನಾನಾರ ಹೊಂದಿದರೇನು? ಪರಿಣಾಮಮೂರ್ತಿ ಬಸವನ ರೂಪು ಇದೋ ಕರಸ್ಥಲದಲ್ಲಿ ಬೆಳಗಿದ ಬಳಿಕ ಸಂಗಯ್ಯನ ಹಂಗು ನಮಗೇಕೆ ಅಪ್ಪಣ್ಣ. ತಂದೆ ಸಂಗಯ್ಯ!..... ಬಸವರಾಜದೇವರ ತಂದೆ ನನ್ನನ್ನು ಅಲ್ಲಿಗೆ ಬರಹೇಳಿದರಂತೆ! ಲಿಂಗತಂದೆ ಇಲ್ಲಿ ನೀನಿಲ್ಲವೇ? ಅಲ್ಲಿ ಉಂಟು ಇಲ್ಲಿ ಉಂಟೆಂಬ ಈ ಉಭಯ ಸಂದೇಹ ಸಂಗನ ಶರಣರ ಹೃದಯದಲ್ಲಿ ಮೂಡಬಹುದೇ? ಹೋಗು ಅಪ್ಪಣ್ಣಾ! ನೀನು ಶಿವಾನುಭವಿಯಾಗಿ ಶಿವನ ನಿಲುವನ್ನು ಅರಿತೂ ಅರಿತೂ ಈ ತೆರೆನ ಸುದ್ದಿ ತರಬಹುದೇ?"[೧೪] ಎಂದು ತಾನು ಇದ್ದಲ್ಲಿಯೇ ಬಯಲನ್ನು ಕಾಣುತ್ತಾಳೆ. ಲಿಂಗದೊಂದಿಗೆ ಅಂಗ ಬೆರೆತುಹೋಗುತ್ತದೆ.

ಶರಣರ ಸಾಂದರ್ಭಿಕ ವಚನಗಳನ್ನು ಅಳವಡಿಸಿಕೊಂಡು ನಾಟಕ ಕರ್ತೃಗಳು ಸುಂದರ ಸಂಭಾಷಣೆ ರೂಪಿಸಿದ್ದಾರೆ. ನುಡಿನುಡಿಗೂ ನೀಲಾಂಬಿಕೆಯ ಶರಣಧರ್ಮ ಪಡಿಮೂಡಿದೆ. ಮಹಿಳಾಲೋಕಕ್ಕೆ, ಅದರಲ್ಲೂ ಗೃಹಿಣೀ ಧರ್ಮಕ್ಕೆ ಒಂದು ಉಜ್ವಲ ಉದಾಹರಣೆಯಾಗುವಂತೆ ಇಲ್ಲಿ ನೀಲಾಂಬಿಕೆಯ ಪಾತ್ರದ ಸೃಷ್ಟಿಯಾಗಿದೆ.

ರಾಜಕೀಯ, ಧಾರ್ಮಿಕ ರಂಗಗಳಲ್ಲಿ ತೊಡಗಿ ಅವುಗಳ ಶುದ್ಧಿಗಾಗಿ ಶ್ರಮಿಸುತ್ತಿದ್ದ ಬಸವಣ್ಣ ಸಂಸಾರವನ್ನು ಕೂಡ ಒಂದು ಯೋಗವೆಂದು ಪರಿಗಣಿಸಲು ನೀಲಾಂಬಿಕೆಯಂಥ ಸತಿಯ ಸಹಕಾರದಿಂದಲೇ ಸಾಧ್ಯವಾದದ್ದು, ಅಂಥ ಸತಿಯ ಸುಂದರ ವ್ಯಕ್ತಿತ್ವವನ್ನು ನಾಟಕದ ಮೂಲಕ ಟಿ.ಎನ್. ಮಹದೇವಯ್ಯನವರು ಬಿಡಿಸಿದ್ದಾರೆ.

ಸಂಗ್ರಹದ ಕೊನೆಯ ನಾಟಕ **"ಮುಕ್ತಾಯಕ್ಕ"**. ಶೂನ್ಯಸಂಪಾದನೆಯಲ್ಲಿ ಬರುವ ಮಹಿಮಾನ್ವಿತ ಪ್ರಸಂಗಗಳಲ್ಲಿ ಮುಕ್ತಾಯಕ್ಕನ ಪ್ರಸಂಗ ಅತ್ಯಂತ ಗಹನವಾದುದು. ಶರಣಧರ್ಮದ ಪರಮ ಗುರಿಯನ್ನು ಈ ಪ್ರಸಂಗದಲ್ಲಿ ಕಾಣಬಹುದು.

ತನಗೆ ಗುರುವಿನಂತಿದ್ದ ಅಜಗಣ್ಣನ ಅಗಲುವಿಕೆಯಿಂದ ದುಃಖಿತಳಾದ ಮುಕ್ತಾಯಕ್ಕನಿಗೆ ಆತ್ಮಜ್ಞಾನಿ ಅಲ್ಲಮಪ್ರಭು 'ನಿಜದ ನಿಲವನ್ನು ತಿಳಿಸಿಕೊಡುವ ಅತ್ಯಂತ ಕ್ಲಿಷ್ಟವಾದ ಪ್ರಸಂಗವನ್ನು ನಾಟಕ ಕರ್ತೃ ಸರಳವಾಗಿ ಚಿತ್ರಿಸಿದ್ದಾರೆ.

ಶೂನ್ಯಸಂಪಾದನೆಯಲ್ಲಿ ಬರುವ ಪ್ರಭು-ಮುಕ್ತಾಯಕ್ಕಗಳ ಸಂಭಾಷಣೆ ಸಾಮಾನ್ಯ ನೋಟಕ್ಕೆ ಅರ್ಥವಾಗುವುದು ಕಷ್ಟ. ಆದರೆ ಮಹದೇವಯ್ಯನವರು ಮೂಲವಚನಗಳ ಸಾರವನ್ನು ಸಂಕ್ಷಿಪ್ತವಾಗಿ ಸರಳ ಮಾತುಗಳಲ್ಲಿ ತಿಳಿಸಿ ಸಾಮಾನ್ಯ ಓದುಗರಿಗೆ ಮತ್ತು ಶ್ರೋತೃಗಳಿಗೆ ಉಪಕಾರ ಮಾಡಿದ್ದಾರೆ.

ಅಜಗಣ್ಣ-ಮುಕ್ತಾಯಕ್ಕಗಳ ಅವಿರಳ ವಾತ್ಸಲ್ಯ "ನೀನೇ ನನ್ನ ಗುರು, ನೀನೇ ಲಿಂಗವಾಗಿರುವೆ" ಎಂದು ಆಕೆ ಅಣ್ಣನನ್ನು ಕುರಿತು ಹೇಳುವ ಭಕ್ತಿ ನುಡಿ, ತಂಗಿಗೆ "ಮುಕ್ತಿಯ ಮಾರ್ಗದಲ್ಲಿ ಮುನ್ನುಡಿಯಿಡು"[೧೬] ಎಂದು ಅಜಗಣ್ಣ ಹೇಳುವ ಆಶೀರ್ವಾದದ ನುಡಿ ಇವು ಅವರ ಗುರು- ಶಿಷ್ಯ ಸಂಬಂಧವನ್ನು ಅಚ್ಚೊತ್ತಿದ್ದಂತೆ ತಿಳಿಸುತ್ತವೆ. ಮಧ್ಯೆ ಮಧ್ಯೆ ಪಾತ್ರಗಳಿಂದ ವಚನಗಳನ್ನು ಹಾಡಿಸಿರುವರು ನಾಟಕ ಕರ್ತೃ. ಶ್ರೋತ್ರಗಳಿಗೆ ಸಂಗೀತದ ಸವಿಯನ್ನೂ ನೀಡುತ್ತಾರೆ.

ಒಟ್ಟಿನಲ್ಲಿ ಮುಕ್ತಾಯಕ್ಕ ಹೃದಯಸ್ಪರ್ಶಿಯಾಗಿದೆ. ವಚನ ಸಾಹಿತ್ಯದ ಆಳವಾದ ಅಭ್ಯಾಸದ ಫಲ ಈ ನಾಟಕ.

ಕನ್ನಡ ನಾಡಿನ ಭಾಗ್ಯಜ್ಯೋತಿ ಬಸವಣ್ಣನವರ ಜೀವನದ ಒಂದು ಮಹತ್ತರವಾದ ಸನ್ನಿವೇಶವನ್ನು ಆರಿಸಿಕೊಂಡು ಲೇಖಕರು ಮೂರಂಕಿನ **'ಕ್ರಾಂತಿಯ ದೀಪ'** ಎಂಬ ಕಲಾಪೂರ್ಣ ನಾಟಕವನ್ನು ರಚಿಸಿದ್ದಾರೆ. ಈ ನಾಟಕ ಹನ್ನೆರಡನೆ ಶತಮಾನದಲ್ಲಿ ಬದುಕಿ ಧಾರ್ಮಿಕಕ್ರಾಂತಿಗೆ ಕಾರಣರಾದ ಬಸವಣ್ಣನವರನ್ನು ಕುರಿತ. ಮೊದಲ ಗ್ರಂಥ ಹರಿಹರನ 'ಬಸವರಾಜದೇವರ ರಗಳೆ' ಅನಂತರ ಭೀಮಕವಿಯ 'ಬಸವ ಪುರಾಣ'ವನ್ನು ಈ ನಾಟಕ ಹೆಚ್ಚು ಹೋಲುತ್ತದೆ ಎಂದು ನಾಟಕಕಾರರು ಹೇಳಿಕೊಂಡಿದ್ದಾರೆ.[೧೭] ನಾಗಲಾಂಬೆಯನ್ನು ಇಲ್ಲಿ ಬಸವಣ್ಣನವರ ತಂಗಿಯೆಂದು ಬದಲಾವಣೆ ಮಾಡಿಕೊಂಡಿದ್ದಾರೆ. ಆಕೆಯು ಅಣ್ಣನವರ ಹೋರಾಟದ ಜೀವನದಲ್ಲಿ ಅರ್ಪಿಸಿದ ಸೇವೆಯನ್ನು ಇಲ್ಲಿ ಚಿತ್ರಿಸಲಾಗಿದೆ. ರುದ್ರನಾಟಕಗಳ ಗಂಭೀರ ವಾತಾವರಣ, ದೈವದ ಆಟ, ಉದಾತ್ತ ಪಾತ್ರ, ಅಪರಿಹಾರ್ಯವಾದ ರಕ್ತಪಾತ ಇವುಗಳಿಂದ ಕೂಡಿದ ಈ ನಾಟಕವು ಹೃದಯಂಗಮವಾಗಿದೆ.

ಈ ನಾಟಕದಲ್ಲಿ ನಡೆಯುವ ಧಾರ್ಮಿಕ ಕ್ರಾಂತಿಯೆಂದರೆ ಬಸವಣ್ಣನವರು ಅಂತ್ಯಜನಾದ ಶರಣ ಹರಳಯ್ಯನ ಮನೆಯಲ್ಲಿ ಆರೋಗಣೆ ಮಾಡುವುದು ಮತ್ತು ಅಂತ್ಯಜ ಹರಳಯ್ಯ ಮತ್ತು ದ್ವಿಜ ಮಧುವಯ್ಯಗಳಲ್ಲಿ ಒಂದು ವಿವಾಹವೇರ್ಪಡಿಸುವುದು ಈ ವಿವಾಹ ಕಾರಣವಾಗಿ ವರ್ಣಾಶ್ರಮವಾದಿಗಳು ದಂಗೆಯೇಳುತ್ತಾರೆ. ಈ ಕ್ರಾಂತಿಯಲ್ಲಿ ಬಿಜ್ಜಳ ಹತನಾಗುತ್ತಾನೆ. ರಕ್ತಪಾತದಿಂದ ನೊಂದ ಬಸವಣ್ಣನವರು ಕೂಡಲಸಂಗಮಕ್ಕೆ ತೆರಳಿ ಐಕ್ಯರಾಗುತ್ತಾರೆ. ಇದು ಈ ನಾಟಕದ ಕಥಾವಸ್ತು.

ಮೊದಲ ದೃಶ್ಯದಲ್ಲಿ ಬಸವಣ್ಣನವರು ಕೂಡಲಸಂಗಮನ ಪ್ರಶಾಂತ ವಾತಾವರಣದಲ್ಲಿ ಸಕಲ ಪ್ರಾಣಿಗಳಲ್ಲೂ ಅನುಕಂಪೆ ಉಳ್ಳವರಾಗಿ ಬದುಕುತ್ತಿದ್ದ ಚಿತ್ರಣವಿದೆ. ಹಾಗೆಯೇ ಬಸವಣ್ಣ ಮತ್ತು ತಂಗಿ ನಾಗಲಾಂಬೆಯರ ವಾತ್ಸಲ್ಯಭರಿತ ಜೀವನದ ಚಿತ್ರಣವಿದೆ. "ಜೀವನದ ಅಶಾಂತಿ, ರಾಷ್ಟ್ರದ ಅಶಾಂತಿ, ಲೋಕದ ಅಶಾಂತಿ ಇವುಗಳ ಅಂಧಕಾರಮಯ ವಾತಾವರಣದಲ್ಲಿ ಶಾಂತಿ ಬೇಕಾದರೆ ಕ್ರಾಂತಿಯೊಂದರ ಕಿರುಹಣತೆಯಾದರೂ ಮೂಡದಿದ್ದರೆ ಬೆಳಕು ಸಿಗುವಂತಿಲ್ಲ"[೧೮] ಎಂಬ ಮಾತನ್ನು ಬಸವಣ್ಣನವರ ಬಾಯಲ್ಲಿ ಆಡಿಸಲು ಈ ದೃಶ್ಯವನ್ನು ನಿರೂಪಿಸಿದಂತಿದೆ. ಬಸವಣ್ಣನವರು ಕಲ್ಯಾಣದಲ್ಲಿ ಮಂತ್ರಿಯಾಗಿ ಬಂದುದರ

ಸೂಚನೆಯಿದೆ. ಬಿಜ್ಜಳನ ತಂಗಿ ಗಂಗಾಂಬೆಗೆ ಬಸವಣ್ಣನವರ ಮೇಲೆ ಪ್ರೀತಿಯಿರುವುದರ ಸೂಚನೆಯು ಅದು ಬಿಜ್ಜಳನಿಗೆ ಪ್ರಿಯವೆಂದೂ ಗೊತ್ತಾಗುತ್ತದೆ. ಆದರೆ ಇದೂ ಕೂಡ ನಾಟಕದ ಮೂಲ ಉದ್ದೇಶಕ್ಕೆ ಯಾವುದೇ ರೀತಿಯಲ್ಲಿಯೂ ಪೂರಕವಾಗದೆ ನಾಟಕದಿಂದ ಹೊರಗೇ ಉಳಿಯುತ್ತದೆ.

ಪಾತ್ರಗಳ ದೃಷ್ಟಿಯಿಂದ ನೋಡಿದಾಗ ಬಿಜ್ಜಳ ನಮಗೆ ಪ್ರಿಯನಾಗುತ್ತಾನೆ. ಇಲ್ಲಿ ಬಿಜ್ಜಳ ಜೈನ. ವಾಸ್ತವವಾಗಿ ಬಿಜ್ಜಳ ಜೈನನಲ್ಲ, ಶೈವ. ಬಹುಶಃ ಬಸವಣ್ಣನವರು ನಡೆಸಿದ ಧಾರ್ಮಿಕ ಕ್ರಾಂತಿಗೆ ಪೂರ್ಣ ಬೆಂಬಲವನ್ನು ಕೊಡಲಿಲ್ಲವೆಂಬ ಕಾರಣದಿಂದ ಅನಂತರ ಬಂದ ಶಿವಪುರಾಣಗಳು, ಕವಿಗಳು ಅವನನ್ನು ಜೈನನೆಂದು ಚಿತ್ರಿಸಿದ್ದಾರೆ. ಇಲ್ಲಿಯ ಬಿಜ್ಜಳ ಹಿತ್ತಾಳೆ ಕಿವಿಯವನಲ್ಲ, ತೆರೆದ ಮನಸ್ಸಿನವನು. ಯಾವುದೇ ವಿಷಯವನ್ನು ತೆರದ ಮನಸ್ಸಿನಿಂದ ನೋಡಬಲ್ಲವನು. ಬಸವಣ್ಣನವರು ಹರಳಯ್ಯನ ಮನೆಯಲ್ಲಿ ಆರೋಗಣೆ ಮಾಡಿದ ಸುದ್ದಿಯನ್ನು ಕೇಳಿ ಉದ್ವಿಗ್ನನಾಗುವುದಿಲ್ಲ. ಬಸವಣ್ಣನವರ ಆರೋಗಣೆಯ ವೇಳೆಗೆ ಅಂತ್ಯಜನಾದ ಹರಳಯ್ಯನ ಮನೆಗೆ ಬರುವಷ್ಟು ಸರಳತೆ ಅವನಲ್ಲಿದೆ. ಇಂತಹ ಬಿಜ್ಜಳ ಹರಳಯ್ಯ ಮಧುವಯ್ಯಗಳಲ್ಲಿ ವಿವಾಹ ಸಂಬಂಧ ಉಂಟಾಗುತ್ತದೆಂಬುದನ್ನು ಕೇಳಿ ಉದ್ವಿಗ್ನನಾಗುತ್ತಾನೆ. ಹರಳಯ್ಯ ಮತ್ತು ಮಧುವಯ್ಯಗಳ ಕಣ್ಣುಗಳನ್ನು ಚುಚ್ಚಿ ಕೊಲ್ಲಲು ಆಜ್ಞಾಪಿಸುತ್ತಾನೆ. ಇದುವರೆಗೂ ನಾವು ಕಂಡ ಬಿಜ್ಜಳನಿಂದ ಇವನು ಬೇರೆಯೋ ಎಂಬಂತೆ ಕಾಣುತ್ತಾನೆ. ಅವನ ನಿಲುವಿನಲ್ಲಿ ಆದ ಬದಲಾವಣೆಗೆ ಸಾಕಷ್ಟು ಆಧಾರವಿಲ್ಲ, ಮತ್ತೆ ಆತನಿಗೆ ಜ್ಞಾನೋದಯವಾಗುತ್ತದೆ, ತನ್ನ ತಪ್ಪಿನ ಅರಿವಾಗುತ್ತದೆ. ಆ ವೇಳೆಗೆ ಕಾರ್ಯ ಮಿಂಚಿಹೋಗಿರುತ್ತದೆ. ತನ್ನ ಗೀವಟಿಗೆಯವರಾದ ಮಲ್ಲಿಬೊಮ್ಮಣ್ಣ ಮತ್ತು ಜಗದೇವರಿಂದ ಹತನಾಗುತ್ತಾನೆ.

ಕ್ರಾಂತಿಯ ಮೂಲಸ್ರೋತವಾದ ಬಸವಣ್ಣನವರು ಭಕ್ತರಾಗಿ ನಮಗೆ ಕಾಣುತ್ತಾರೆಯೆ ಹೊರತು ಕ್ರಾಂತಿಕಾರರಾಗಲ್ಲ. 'ನಾಡಿನಲ್ಲಿ ಕ್ರಾಂತಿಯೊಂದು ನಡೆಯಬೇಕು. ಅದಕ್ಕೆ ಎಲ್ಲರೂ ಯಾವರೀತಿಯಲ್ಲಿ ನೆರವು ಕೊಡಬಲ್ಲಿರೋ ಆಯಾ ರೀತಿಗಳಲ್ಲಿ ನೆರವಾಗಿರಿ'[೧೯] ಎಂದು ಎರಡನೆಯ ಅಂಕದ ಆರನೆಯ ದೃಶ್ಯದಲ್ಲಿ ಜಗದೇವ ಮತ್ತು ಮಲ್ಲಿಬೊಮ್ಮಣ್ಣರಿಗೆ ಹೇಳಿದರೂ ಆ ಕ್ರಾಂತಿ ಅಹಿಂಸಾತ್ಮಕವಾಗಿರಬೇಕೆಂಬುದು ಅವರ ಬಯಕೆ. ಹರಳಯ್ಯ- ಮಧುವಯ್ಯಗಳ ಕೊಲೆಯಿಂದಾಗಿ ರೊಚ್ಚಿಗೆದ್ದ ಶರಣರಿಂದ ಬಿಜ್ಜಳನ ಕೊಲೆಯಾಗಬಹುದೆಂದು ಬಸವಣ್ಣ ಅವನ ರಕ್ಷಣೆಗೆ ಧಾವಿಸುವ ವೇಳೆಗೆ ಬಿಜ್ಜಳನ ಕೊಲೆಯಾಗಿರುತ್ತದೆ. (ಹರಿಹರ ಬಿಜ್ಜಳನನ್ನು ಬಸವಣ್ಣನೇ ಕೊಲ್ಲಿಸಿದನೆಂದು 'ಶಿವದ್ರೋಹಂಗೈದ ಬಿಜ್ಜಳನಂ ಕೊಲಿಸುತುಂ'[೨೦] ಎಂದು ಹೇಳಿದ್ದಾನೆ. ಈ ಅಪವಾದದಿಂದ ಬಸವಣ್ಣನನ್ನು ನಾಟಕಕಾರರು ಪಾರುಮಾಡಿದ್ದಾರೆ.) ರಕ್ತಪಾತದಿಂದ ನೊಂದ ಬಸವಣ್ಣನವರು ಕಲ್ಯಾಣವನ್ನು ತ್ಯಜಿಸಿ ಕೂಡಲ ಸಂಗಮದಲ್ಲಿ ಐಕ್ಯರಾಗುತ್ತಾರೆ.

'Revolution eats her own children' ಎಂದು ನಾಟಕಕಾರರು ಮುನ್ನುಡಿಯಲ್ಲಿ ಹೇಳಿದ್ದಾರೆ. ಮೂರನೆಯ ಅಂಕದ ಏಳನೆಯ ದೃಶ್ಯದಲ್ಲಿ ಬಸವಣ್ಣ ಐಕ್ಯರಾದ ಸಂಗತಿಯನ್ನು ಕೇಳಿದ ಪ್ರಭು 'ಕ್ರಾಂತಿದೇವತೆಗೆ ತನ್ನ ಹೊಟ್ಟೆಯ ಮಕ್ಕಳ ಬಲಿ ಬೀಳುವವರೆಗೂ ಹಸಿವು ಹಿಂಗದು'[೨೧] ಎಂದು ಹೇಳಿ ಶ್ರೀ ಶೈಲದತ್ತ ನಡೆಯುತ್ತಾರೆ.

ನಡೆದ ಧಾರ್ಮಿಕ ಕ್ರಾಂತಿಗೆ ಬಸವಣ್ಣನವರು ಬಲಿಯಾದುದನ್ನು ಅದು ಸೂಚಿಸುತ್ತದೆ. ವ್ಯಕ್ತಿ ಕೊನೆಯಾದ ಮಾತ್ರಕ್ಕೆ ಆತ ನೆಟ್ಟ ಕ್ರಾಂತಿಯ ಸಸಿ ಕಮರಿಹೋಗಬೇಕಿಲ್ಲ. ಈ ಕ್ರಾಂತಿಯಲ್ಲಿ ಬಸವಣ್ಣನವರು ಸೋತಗೆಗೆದ್ದರೆ? ಹೇಳುವುದು ಅಷ್ಟು ಸುಲಭವಲ್ಲ. ನಾಟಕದಲ್ಲಿ ಬಸವಣ್ಣನವರ ಸಂಸಾರದ ಚಿತ್ರಣವಿಲ್ಲದಿರುವುದೊಂದು ಕೊರತೆಯೆನಿಸುತ್ತದೆ. ನಾಟಕ ದುರಂತವೆ?

ನಾಟಕವು ಅನೇಕ ಮಾರ್ಮಿಕ ಮಾತುಗಳಿಂದ, ಅಲ್ಲಲ್ಲಿ ಬರುವ ಕಾವ್ಯಲಹರಿಯಿಂದ, ವಚನಗಳನ್ನು ಸನ್ನಿವೇಶಗಳಿಗೆ ಅಳವಡಿಸಿಕೊಂಡಿರುವ ಜಾಣ್ಮೆಯಿಂದ ಬಸವಣ್ಣನವರ ಅಹಿಂಸೆ, ಶಾಂತಿಗಳ ಬೋಧೆಯಿಂದ ತುಂಬಿದೆ. ಹರಿಹರ ಕವಿಯು ಚಿತ್ರಿಸಿದ ಬಸವಣ್ಣನವರ ವ್ಯಕ್ತಿರೂಪವನ್ನು ಉದ್ಧರಿಸಿಕೊಂಡು ಒಂದು ದೃಶ್ಯವನ್ನು ಯೋಜಿಸಲಾಗಿದೆ. ಈ ನಾಟಕದ ದೃಶ್ಯಗಳ ಹೊಂದಿಕೆ ರಂಗಭೂಮಿಗಿಂತ ಚಲನಚಿತ್ರಕ್ಕೆ ಹೆಚ್ಚು ಒಪ್ಪುವಂತಿದೆ.

'ಕ್ರಾಂತಿಯ ದೀಪ'ದಲ್ಲಿ ಬೆಳಗಿದ ಬಸವಣ್ಣನವರ ಶಾಂತಿ ಸಂದೇಶವು ಮನನೀಯವಾಗಿದೆ. ಒಟ್ಟಾರೆ ಈ ನಾಟಕವು ಪರಿಣಾಮಕಾರಿಯಾಗಿ ಬಂದಿದೆ.

ಕ್ರಿ.ಪೂ. ೨ನೇ ಶತಮಾನದ ಕೊನೆಯಲ್ಲಿ ಬದುಕಿದ್ದ ಗ್ರೀಸಿನ ಮಹಾಮೇಧಾವಿ ಗಣಿತಜ್ಞ ಆರ್ಕಿಮಿಡಿಸನನ್ನು ಕುರಿತು ರಚಿಸಲಾದ ಏಕಾಂಕ ನಾಟಕ **'ಆರ್ಕಿಮಿಡಿಸ್'**. 'ಒಂದು ಕೀಲು ಅದನ್ನಿಡಲು ಒಂದಿಷ್ಟು ಜಾಗ ಇವೆರಡನ್ನು ಕೊಟ್ಟರೆ ಭೂಮಿಯನ್ನೇ ಎತ್ತುತ್ತೇನೆ' ಎಂಬ ಸವಾಲನ್ನೆಸದ ಧೀಮಂತ ಆರ್ಕಿಮಿಡಿಸ್, ಇಂದಿಗೂ ಕೂಡ ಆಗಿ ಹೋದ ಶ್ರೇಷ್ಠ ಗಣಿತಜ್ಞರ ಪಟ್ಟಿ ಮಾಡುವುದಾದರೆ ಮೊದಲ ಮೂರು ಸ್ಥಾನಗಳಲ್ಲೊಂದರಲ್ಲಿ ನಿಲ್ಲುವ ಮಹಾಗಣಿತಜ್ಞ ಆರ್ಕಿಮಿಡಿಸ್. ಈ ಆರ್ಕಿಮಿಡಿಸ್ ತನ್ನ ದೇಶದ ಮೇಲೆ ರೋಮನ್ನರು ದಾಳಿ ಮಾಡಿದಾಗ ಎರಡು ಬಾರಿ ತನ್ನ ಬುದ್ಧಿಮತ್ತೆಯಿಂದ ಅವರು ಸೋತು ಹಿಂತಿರುಗುವಂತೆ ಮಾಡಿದ. ಮೂರನೆಯ ಬಾರಿ ಗ್ರೀಸ್ ರೋಮನ್ನರ ಆಕ್ರಮಣಕ್ಕೊಳಗಾದಾಗ ಸಾಮಾನ್ಯ ರೋಮನ್ ಸೈನಿಕನೊಬ್ಬನಿಂದ ಹತನಾದ. ಅವನ ಸಮಾಧಿಯ ಮೇಲೆ ಸ್ಥಂಭಾಕೃತಿಯಲ್ಲಿ ಕಡೆದ ಗೋಳವನ್ನಿಟ್ಟು ಗೌರವ ತೋರಿದರು. ಇದಿಷ್ಟು ನಾಟಕದ ಕಥಾವಸ್ತು.

ಮೊದಲ ದೃಶ್ಯದಲ್ಲಿ ಗ್ರೀಕ್ ದೇಶವನ್ನು ಗೆದ್ದ ರೋಂ ಸೇನಾಧಿಪತಿ ಮಾರ್ಸೆಲಸ್ಸನ ಸ್ವಗತದಲ್ಲಿ ಮತ್ತು ಆತ ಗ್ರೀಕ್ ಪರಿಚಾರಿಕೆ ಅಥೇನಾಳೊಡನೆ ನಡೆಸುವ ಸಂಭಾಷಣೆಯಿಂದ ಶ್ರೋತೃಗಳಿಗೆ ಆರ್ಕಿಮಿಡೀಸ್‌ನ ಹಿರಿಮೆ ಮೇಧಾಶಕ್ತಿ ಗೊತ್ತಾಗುತ್ತದೆ. ಅವನ ಬಗೆಗೆ ಕುತೂಹಲ ಕೆರಳುತ್ತದೆ. ಎರಡನೆಯ ದೃಶ್ಯದಲ್ಲಿ ಗ್ರೀಕ್ ಪ್ರಜೆಗಳು ಆಡಿಕೊಳ್ಳುವ ಮಾತುಗಳಿಂದ ಈ ಕುತೂಹಲ ಇನ್ನೂ ಹೆಚ್ಚಾಗುತ್ತದೆ. ಅವರ ಸಂಭಾಷಣೆಯಿಂದ, ಆರ್ಕಿಮಿಡೀಸ್ ಒಮ್ಮೆ ತನ್ನ ಗಣಿತ ಜ್ಞಾನದಿಂದ ಅಕ್ಕಸಾಲೆಯ ಕಳ್ಳತನವನ್ನು ಪತ್ತೆ ಮಾಡಿದ್ದು, ಎರಡು ಬಾರಿ ರೋಮನ್ನರ ಧಾಳಿಯನ್ನು-ಒಂದೆರೆಡು ಗಾಲಿಗಳಂತೆ ಕಟ್ಟಿ ಅದಕ್ಕೆ ಒಂದು ಹಗ್ಗದ ಕುಣಿಕೆ ಇಳಿಬಿಟ್ಟು ಕಡಲ ಮೇಲೆ ಬರುತ್ತಿದ್ದ ಯುದ್ಧ ನೌಕೆಗಳನ್ನು ಅಂತರಾಳದಲ್ಲಿ ಎತ್ತಿ ನಿಲ್ಲಿಸುತ್ತಿದ್ದುದು, ಹಡಗುಗಳಿಗೆ ಭೂತಗನ್ನಡಿಗಳ ಸಹಾಯದಿಂದ ಬೆಂಕಿ ಹಚ್ಚುತ್ತಿದ್ದು- ವಿಫಲಗೊಳಿಸಿದ್ದು ಗೊತ್ತಾಗುತ್ತದೆ. ಆರ್ಕಿಮಿಡೀಸ್

ಬದುಕಿದ್ದರೆ ಹೇಗಾದರೂ ಗ್ರೀಕ್ ಸ್ವತಂತ್ರವಾಗುವುದೆಂಬುದರ ಜೊತೆಗೆ ಅವನಿಗೆ ಅಪಾಯ ಸಂಭವಿಸಬಹುದೆಂಬ ಶಂಕೆಯೂ ಇಲ್ಲಿ ವ್ಯಕ್ತವಾಗುತ್ತದೆ. ಮೂರನೆಯ ದೃಶ್ಯದಲ್ಲಿ ಆರ್ಕಿಮಿಡೀಸ್ ಕೊಲೆಯಾಗುವುದು. ಈ ದೃಶ್ಯದ ಪ್ರಾರಂಭದಲ್ಲಿ ಆರ್ಕಿಮಿಡೀಸ್‌ನ ಅಸ್ಖಲಿತ ಏಕಾಗ್ರತೆ ತಿಳಿದುಬರುತ್ತದೆ. ಅನಂತರ ಸಿರಾಕ್ಯೂಸ್ (ಗ್ರೀಕ್ ರಾಜದಾನಿ)ನಗರ ದೇವತೆಯೇ ಪ್ರತ್ಯಕ್ಷಳಾಗಿ ತನ್ನನ್ನು ಸೆರೆಯಿಂದ ಬಿಡಿಸಬೇಕೆಂದು ಕೇಳಿಕೊಂಡರೂ ಗಣಿತದ ಶುಭ್ರ ನಿರ್ಮಲ ತತ್ತ್ವಗಳನ್ನು ಸ್ವಾರ್ಥಕ್ಕಾಗಿ ಬಳಸುವುದು ಉದಾತ್ತ ಕಾರ್ಯವಲ್ಲವೆಂದು ಆರ್ಕಿಮಿಡೀಸ್ ನಿರಾಕರಿಸಿಬಿಡುತ್ತಾನೆ. 'ನಿನ್ನ ಲೆಕ್ಕ ಮುಗಿಯುವ ಮೊದಲೇ ನೀನು ಹಾಳಾಗಿಹೋಗು'[೨೩] ಎಂದು ಶಾಪವನ್ನಿತ್ತು ಸಿರಾಕ್ಯೂಸ್‌ನಗರ ದೇವತೆ ಅದೃಶ್ಯಳಾಗುತ್ತಾಳೆ. ಅವಳ ಶಾಪದಂತೆಯೇ ರೋಮನ್ ಸೈನಿಕನೊಬ್ಬನಿಂದ ಆರ್ಕಿಮಿಡಿಸ್ ಹತನಾಗುತ್ತಾನೆ. ಸಿರಾಕ್ಯೂಸ್ ನಗರ ದೇವತೆಯೇ ಬೇಡಿಕೊಂಡರೂ ವಿಚಲಿತನಾಗದ, ರೋಮನ್ ಸೈನಿಕರ ಧಾಳಿ ನಡೆದಾಗಲೂ ಬಹಿರ್ಮುಖನಾಗದ ಆರ್ಕಿಮಿಡಿಸ್‌ನ ಏಕಾಗ್ರತೆ ನಮ್ಮ ಪ್ರಶಂಸೆಯನ್ನು ಪಡೆಯುವುದರ ಬದಲು ವಿರುದ್ಧ ಪರಿಣಾಮವನ್ನುಂಟುಮಾಡುತ್ತದೆ. ಸಿರಾಕ್ಯೂಸನ ಹೆಂಗಸೊಬ್ಬಳು 'ದೇಶದ ಸ್ವಾತಂತ್ರ್ಯವನ್ನು ನಿರ್ಲಕ್ಷಿಸುವ ಅದಾವ ನಿರ್ವೀರ್ಯ ಶಾಸ್ತ್ರ ಸಮಸ್ಯೆ ಅಡಗಿದೆಯೋ ಕವಡೆಯ ಲೆಕ್ಕದಲ್ಲಿ'[೨೪] ಎಂದು ಹೇಳುವ ಮಾತುಗಳನ್ನು ನಮ್ಮ ಮಾತುಗಳೇ ಆಗುತ್ತವೆ. ಪೂರ್ಣದೃಷ್ಟಿಗೆ ಬೇರೆ ರೀತಿಯೇ ಇದು ಗೋಚರವಾಗಬಹುದು. ಇರಲಿ ಮೊದಲೆರಡು ದೃಶ್ಯಗಳಲ್ಲಿ ಬೆಳೆದ ಭಾವ ನಾಟಕದ ಶಿಖರವಾದ ಮೂರನೆಯ ದೃಶ್ಯದಲ್ಲಿ ಸಾಕಷ್ಟು ಪುಷ್ಟಿ ಪಡೆಯುವುದಿಲ್ಲ ಎಂದೇ ಹೇಳಬೇಕು. ನಾಟಕ ಪುಟ್ಟ ಪುಟ್ಟ ಸಂಭಾಷಣೆಗಳಿಂದ ಮೈಗೂಡಿಸಿಕೊಂಡ ನಾಟಕೀಯತೆಯಿಂದ ಸತ್ವಪೂರ್ಣವಾದ, ಪರಿಣಾಮಕಾರಿಯಾದ ನಾಟಕ ಎಂದು ಹೇಳಬಹುದು.

**'ರುದ್ರಪಶುಪತಿ'** ನಾಲ್ಕು ದೃಶ್ಯಗಳ ಕಿರು ಏಕಾಂಕ. ಬಹುಶಃ ಹರಿಹರನ 'ರುದ್ರಪಶುಪತಿ ರಗಳೆ'ಯ ಆಧಾರದಿಂದ ರಚಿತವಾದುದು. ಪಶುಪತಿ ಮುಗ್ಧಭಕ್ತ. ಅವನಿಗೆ ಶಿವನ ಕ್ಷೇಮದ ಹೊರತು ಮತ್ತಾವುದೂ ಬೇಕಿಲ್ಲ. ಲಿಂಗದ ಮೇಲೆ ಗೊದ್ದಗಳು ಓಡಾಡಿದರೆ ತನ್ನ ಶಿವನಿಗೆ ಎಲ್ಲಿ ನೋವಾಗುವುದೋ ಎಂಬ ಚಿಂತೆ. ಅವನ್ನು ನಿವಾರಿಸದ ಹೊರತು ಅವನಿಗೆ ಸಮಾಧಾನವಿಲ್ಲ. ಒಮ್ಮೆ ಅಮೃತಮಂಥನದ ಪುರಾಣವನ್ನು ಕೇಳಿ ತಾನೇ ಅದನ್ನು ಸೇವಿಸಿದವನಂತೆ ನೋವನ್ನನುಭವಿಸುವನು. ಶಿವನನ್ನು ಆ ಕುತ್ತಿನಿಂದ ಪಾರುಮಾಡಬೇಕೆಂಬುದು ಅವನ ಅಪೇಕ್ಷೆ. ಯಾರು ಎಷ್ಟೊಂದು ವಿಧದಿಂದ ಸಂತೈಸಿದರೂ ಸಮಾಧಾನವಾಗನು. ಶಿವನನ್ನು ಆ ಕುತ್ತಿನಿಂದ ಪಾರುಮಾಡಲು ಸಮುದ್ರದಲ್ಲಿ ಕಂಠಪ್ರಮಾಣ ನೀರು ಬರುವವರೆಗೂ ಹೋಗಿ ಪಂಚಾಕ್ಷರಿ ಮಂತ್ರ ಜಪಿಸುವನು. ಭಕ್ತನನ್ನು ಪರೀಕ್ಷೆ ಮಾಡಿದ ನಂತರ ಶಿವನು ರುದ್ರಪಶುಪತಿಯನ್ನು ಕೈಲಾಸಕ್ಕೆ ಕರೆದುಕೊಂಡು ಹೋಗುವನು. ಶಿವನು ಆಡಂಬರದ ಆಚಾರರಹಿತ ಭಕ್ತಿಗಿಂತ ಮುಗ್ಧಭಕ್ತಿಗೆ ಒಲಿಯುವನೆಂಬುದು ಇಲ್ಲಿ ನಿರೂಪಿತವಾಗಿದೆ. ಈ ಕಥೆಯ ಜೊತೆಗೆ ಕೋಳೂರು ಕೊಡಗೂಸು, ಬೇಡರ ಕಣ್ಣಪ್ಪ ಮೊದಲಾದ ಕಥೆಗಳನ್ನು ಹೋಲಿಸಿ ನೋಡಬಹುದು.

ಮೊದಲ ದೃಶ್ಯದಲ್ಲಿಯೇ ತಿರುತಲೆಯೂರಿನ ಅರ್ಚಕನಿಗೂ ರುದ್ರ ಪಶುಪತಿಗೂ ಇರುವ ವ್ಯತ್ಯಾಸ ಗೋಚರವಾಗುತ್ತದೆ. ಅರ್ಚಕನಿಗೆ ಶಿವಪೂಜೆ ಒಂದು ವ್ಯವಹಾರ. ಭಕ್ತರು ಬಂದರೆ 'ಅಯ್ಯೋ ಭಕ್ತ ಎಲ್ಲಿ

ನಿನ್ನ ಕಾಣಿಕೆ!' ತಟ್ಟೆಗೆ ಹಾಕುವುದು ಬೇರೆ! ತೆಂಗಿನಕಾಯಿ ತಲೆಗಂದಾಯ ಬೇರೆ ಇಟ್ಟು ಬಿಡು!'[೨೫] ಎನ್ನುವ ಲಿಂಗ ಅವನಿಗೊಂದು ಕಲ್ಲು, ಅದೇ ಪಶುಪತಿಗೆ ಸಾಕ್ಷತ್ ಶಿವ. ಲಿಂಗದ ಮೇಲೆ ಗೊದ್ದ ಓಡಾಡಿದರೆ ಅರ್ಚಕನಿಗೆ ಏನೂ ಅನಿಸುವುದಿಲ್ಲ. ಪಶುಪತಿಗಾದರೋ ತನ್ನ ಶಿವನಿಗೆ ಎಲ್ಲಿ ಗೊದ್ದ ಕಚ್ಚುತ್ತವೆಯೋ ಎಂಬ ಹೆದರಿಕೆ. ಇಂತಹ ಭಕ್ತನನ್ನು ಅರ್ಚಕನೆ ಮೊದಲಾಗಿ ತಾಯಿತಂದೆಯರಾದ ಶಚಿದೇವ ರುದ್ರಪ್ರಭುಗಳೂ ಮೂರ್ಖನೆನ್ನುತ್ತಾರೆ. ರುದ್ರ ಪಶುಪತಿ ಸಮುದ್ರದಲ್ಲಿ ಪಂಚಾಕ್ಷರಿಯನ್ನು ಜಪಿಸುತ್ತಿರುವಾಗ ಶಿವನು ಮುದುಕನ ವೇಷದಲ್ಲಿ ಬಂದು ಶಿವನಿಗೆ ಇರುವ ಇನ್ನೂ ಅನೇಕ ರೋಗಗಳನ್ನು ವರ್ಣಿಸುವಾಗ 'ಗಿರಿಜಾ ಕಲ್ಯಾಣ'ದಲ್ಲಿ ವಟುವೇಷದ ಶಿವ ಗಿರಿಜಗೆ ಶಿವನನ್ನು ಕುರಿತು ಹೇಳುವ ಮಾತುಗಳು ನೆನಪಿಗೆ ಬರುತ್ತವೆ.[೨೬]

ನಾಟಕ ಪುಟ್ಟದಾಗಿದ್ದಾರೂ ಚೆನ್ನಾಗಿ ಮೂಡಿದೆ, ಪರಿಣಾಮಕಾರಿಯಾಗಿದೆ. ಮುಗ್ಧಭಕ್ತಿಗೆ ಶಿವನೊಲಿಯುತ್ತಾನೆಂಬ ಮಾತು ಪರಿಣಾಮಕಾರಿಯಾಗಿದೆ. ಹರಿಹರನ ನಿಲವೂ ಇದೇ. ಅಲ್ಲದೆ ಪಂಚಾಕ್ಷರಿಯ ಮಹಿಮೆಯನ್ನೂ ಇದು ಹೇಳುತ್ತದೆನ್ನಬಹುದು.

'ತಲೆಗಡುಕರು' ಟಿ.ಎನ್. ಮಹದೇವಯ್ಯನವರ ಅಪ್ರಕಟಿತ ಕೃತಿ. ಕೌಂಟ್‌ಲಿಯೊ ಟಾಲ್‌ಸ್ಟಾಯ್‌ನ **'Rule by Murder'** ಎನ್ನುವ ಪುಸ್ತಕದ ಹತ್ತನೆಯ ಪುಟದ ಆಧಾರದ ಮೇಲೆ ರಚಿತವಾದದ್ದು ಎಂದು ಕರ್ತೃ ತಮ್ಮ ಹಸ್ತಪ್ರತಿಯಲ್ಲಿ ಸೂಚಿಸಿದ್ದಾರೆ.[೨೭]

ಟಾಲ್‌ಸ್ಟಾಯ್ ತನ್ನ ಪಿತೃಭೂಮಿ ರಷ್ಯಾದ ಬಗ್ಗೆ ಆಳವಾದ ಅಭಿಮಾನವಿಟ್ಟುಕೊಂಡಿದ್ದ ವ್ಯಕ್ತಿ. ಅದರೆ ತನ್ನ ಬರವಣಿಗೆಯಲ್ಲಿನ ದೃಢತೆ, ನಿಷ್ಪಕ್ಷಪಾತ ಮಾನವೀಯ ದೃಷ್ಟಿಗಳಿಂದಾಗಿ ಎಲ್ಲ ಕಾಲಕ್ಕೂ ಒಬ್ಬ ಮಹೋನ್ನತ ಸಾಹಿತಿಯಗಿ ಬೇರೆ ಬೇರೆ ಸಂಸ್ಕೃತಿ- ಪರಿಸರಗಳ ಓದುಗನ ಮೆಚ್ಚುಗೆ ಗಳಿಸಿದ್ದಾನೆ. ಜಾರ್ ಚಕ್ರವರ್ತಿಯ ಕಾಲದ "ಉಳ್ಳವರ"[೨೮] ದೌರ್ಜನ್ಯವನ್ನು ಕಂಡು ರೊಚ್ಚಿಗೆದ್ದ ಟಾಲ್‌ಸ್ಟಾಯ್ ತನ್ನ ಇಳಿವಯಸ್ಸಿನಲ್ಲೂ ಆ ಬಗ್ಗೆ ಕ್ರಿಯಾತ್ಮಕ ಹೋರಾಟ ನಡೆಸಿದವನು. ಸರ್ಕಾರದ ವ್ಯವಸ್ಥೆಯನ್ನು ಕಟುವಾಗಿ ಟೀಕಿಸಿ ಆ ಬಗ್ಗೆ ಅನೇಕ ವಿಚಾರಪೂರ್ಣ ಲೇಖನಗಳನ್ನು ಬರೆದ. ಕೆಲವು ಬರಹಗಳು ಅವನ ದೇಶದಲ್ಲಿ ಬಹಿಷ್ಕೃತವಾದರೂ ಹೊರ ಜಗತ್ತಿನಲ್ಲಿ ಅವು ತಮ್ಮ ಮಾನವೀಯ ವಿಚಾರಗಳಿಂದಾಗಿ ವಿಚಾರವಂತ ಓದುಗರ ಗಮನ ಸೆಳೆದವು.

`Rule by Murder` ಎನ್ನುವ ಶೀರ್ಷಿಕೆಯಡಿಯಲ್ಲಿ ಸರ್ಕಾರ ಅಮಾನವೀಯವಾದ ಕೊಲೆಯನ್ನು ಕೂಡ ಎಷ್ಟು ವ್ಯವಸ್ಥಿತ ರೀತಿಯಲ್ಲಿ ಮಾಡುತ್ತದೆ ಎನ್ನುವುದರ ಭಯಂಕರ ವಾಸ್ತವ ಅಂಶಗಳನ್ನು ಯಥಾವತ್ತಾಗಿ ಹೇಳಿದ್ದಾನೆ.

ದೇಶದ ಬದುಕು ಯಾರ ಕೈಗಳಲ್ಲಿ ಅಡಗಿತ್ತೊ, ಯಾರ ಹಗಲುಗಳ ಮೇಲೆ ಬದುಕಿತ್ತೊ ಅಂಥವರನ್ನು ಕಾರಣ ಸೂಚನೆಗಳಿಲ್ಲದೆ ಸೆರೆಹಿಡಿದು ಕತ್ತಲೆಗೆ ದೂಡಿ ನೇಣಿಗೆ ಸಿದ್ಧತೆ ಮಾಡುತ್ತಿತ್ತು ಅಂದಿನ ಸರ್ಕಾರ. ನೇಣು ಹಾಕುವವನೂ ಅವರ ಬಾಂಧವರೇ. ಆದರೆ ಅವರು ಸರ್ಕಾರದ ಸೈನಿಕ ಸಮವಸ್ತ್ರಗಳಿಂದ ಶೋಭಿಸುತ್ತಿದ್ದರು! ಕುಣಿಕೆ ಬೀಳುವ ಕೊನೆಗಳಿಗೆಯಲ್ಲಿ ಅವನ ಕಿವಿಗಳಿಗೆ ಕ್ರಿಸ್ತನ ಉಪದೇಶಗಳನ್ನು

ಕೇಳಿಸಲಾಗುತ್ತಿತ್ತು!![೨೯] ಅನಂತರ ಕುಣಿಕೆ ಬಿಗಿಯಾಗುತ್ತಿತ್ತು. ಈ ಕಾರ್ಯ ಎಷ್ಟು ಕ್ರಮಬದ್ಧವಾಗಿ ನಡೆಯುತ್ತಿತ್ತೆಂದರೆ ಇದಕ್ಕಾಗಿ ಪ್ರತ್ಯೇಕ ಸಂಬಳ ಪಡೆಯುವ ವ್ಯಕ್ತಿಗಳನ್ನು ನೇಮಿಸಲಾಗಿತ್ತು.

ಸರ್ಕಾರದ ನಿಯಮಗಳಿಗೆ ಬದ್ಧರಾಗದವರನ್ನು ಇಲ್ಲದಂತೆ ಮಾಡುವ ವಿವಿಧ ಕ್ರಮಗಳು ಜನತೆಯ ಬದುಕಿನ ಒಂದು ಅಂಗವಾಗಿ ಬಿಟ್ಟವು. ಹವಮಾನದ ಬಗ್ಗೆ ಮಾತನಾಡುವಷ್ಟೆ ಹಗುರವಾಗಿ ಇವುಗಳ ಬಗ್ಗೆ ಮಾತನಾಡುತ್ತಿದ್ದರು. ಟಾಲ್‌ಸ್ಟಾಯ್ ಇದನ್ನು ಕುರಿತು; of Executions, hangings, murdess and bombs people now write and speak as they used to speak about the weathere, children play at hangings, lads from the high schools, who are almost children, go out on expriating expeditions ready to kill, just as they used to go out hunting.....

In general thanks to the activity of the government, which has allowed killing as a means of obtaining its ends, all crims, robbery, theft, lies, tortures and murder are now considered by miserable people who have been perverted by the government to be most natural deeds people to a man.``

-Rule by murder.

(Depraving the people-p-11-12)

ಒಂದು ತಲೆ ತೆಗೆಯಲು ಇಂತಿಷ್ಟು ಎಂದು ಬೆಲೆಯನ್ನು ನಿಗದಿ ಮಾಡುವ ಮೂಲಕ ಹೇಗೆ ವ್ಯಕ್ತಿಗಳಲ್ಲಿ ಆಸೆ, ಲೋಭ, ಭೀತಿಗಳುಂಟಾಗಿ ನೈತಿಕವಾಗಿ ಅವರನ್ನು ಪತನಗೊಳಿಸುತ್ತವೆ ಎಂಬುದರ ಬಗ್ಗೆ ದೀರ್ಘವಾಗಿ ವಿಶ್ಲೇಷಿಸುತ್ತಾ ಹೋಗಿದ್ದಾರೆ ಟಾಲ್‌ಸ್ಟಾಯ್.[೩೦]

ಟಿ.ಎನ್.ಮಹದೇವಯ್ಯನವರು ಈ ವಿಚಾರಗಳನ್ನೆಲ್ಲ ಒಂದೆಡೆ ಸೇರಿಸಿ ಅದಕ್ಕೆ ನಾಟಕದ ಸ್ವರೂಪವನ್ನು ಕೊಟ್ಟಿದ್ದಾರೆ. ಐದು ದೃಶ್ಯಗಳ ಈ ನಾಟಕದಲ್ಲಿ ಎರಡನೆಯ ದೃಶ್ಯವನ್ನು ಬಿಟ್ಟು ಉಳಿದೆಲ್ಲವೂ ಜೈಲಿನ ಆವರಣ ಪರಿಸರದಲ್ಲೇ ನಡೆಯುವಂಥವು. ಇಲ್ಲಿ ಬರುವ ಅಧಿಕಾರಿಗಳ ಸಂಭಾಷಣೆಯ ಮೂಲಕವೇ ವಸ್ತುಸ್ಥಿತಿಯ ಅರಿವಾಗುತ್ತದೆ ನಮಗೆ.

ಮೊದಲ ದೃಶ್ಯದಲ್ಲಿ ಜೈಲಿನ ಅಧಿಕಾರಿಗಳಿಬ್ಬರ ಸಂಭಾಷಣೆ ಇದೆ. ರಷ್ಯಾದ 'ಒರೆಲ್' ನಗರದ ಮುಖ್ಯ ಜೈಲುಖಾನೆಯಲ್ಲಿ ಕ್ರಾಂತಿಯ ಉರಿಗಾಳಿಯಲ್ಲಿ ಸಿಕ್ಕವರಲ್ಲಿ ದಿನಕ್ಕೆ ೧೬, ೨೬, ೩೬ ತಲೆಗಳಂತೆ ಮುಂಡಗಳಿಂದ ಬೇರೆ ಬೇರೆಯಾಗುತ್ತವೆ. ಜೈಲಿಗೆ ಬರುವ ಈ ಸಂಖ್ಯೆ ಜಾಸ್ತಿಯಾದಾಗ ಜೈಲಿನ ಅಧಿಕಾರಿಗಳಿಗೆ ಸಮಸ್ಯೆ ಎದುರಾಗುತ್ತದೆ. ಸಂಖ್ಯೆ ಪ್ರಕಾರ ಪ್ರತಿದಿನ ಕೊರಳಿಗೆ ಕುಣಿಕೆ ಬಿದ್ದರೂ ಮತ್ತೆ ಸೇರ್ಪಡೆಯಿಂದಾಗಿ ಸಂಖ್ಯೆ ಜಾಸ್ತಿಯಾಗುತ್ತ ಹೋಗುತ್ತದೆ. ಏನೂ ತೋಚದೆ ಒಬ್ಬ ಅಧಿಕಾರಿ "Let them hang themselves"[೩೧] ಎನ್ನುತ್ತಾನೆ.

ಆಗ ಮತ್ತೊಬ್ಬ ಅಧಿಕಾರಿ “ಆ ಪದ್ಧತಿ ಇದ್ದಿದ್ದರೆ ನಮಗೆ ತುಂಬಾ ಉಪಕಾರವಾಗುತ್ತಿತ್ತು. ಆದರೆ ಇಲ್ಲಿ “we have to hang them all” ಎಂದು ಸರ್ಕಾರದ ಆಜ್ಞೆ ಎದುರು ತಮ್ಮ ನಿಸ್ಸಹಾಯಕತೆಯನ್ನು ವ್ಯಕ್ತಪಡಿಸುತ್ತಾನೆ. ನೇಣ್ಹಾಕಲು ಇನ್ನೂ ಎರಡು ದಿವಸ ಸಮಯವಿದ್ದರೂ “ಸಾಯುವವರು ಒಂದು ದಿನ ಮುಂಚೆ ಸತ್ತರೇನು ನಷ್ಟ”[೩೧] ಎಂದು ಮುಂಚೆಯೇ ಗಲ್ಲಿಗೇರಿಸಲು ಸೂಚಿಸುತ್ತಾನೆ ಒಬ್ಬ ಅಧಿಕಾರಿ. ಆದರೆ ಗಲ್ಲುಮರದ ಡ್ಯೂಟಿಗೆ ಯಾರೂ ಇಲ್ಲ. ಇದ್ದ ಒಬ್ಬ ತಲೆಗಡುಕ ರಾಜೀನಾಮೆಕೊಟ್ಟು ಹೋಗಿದ್ದಾನೆ. ತಲೆ ಒಂದಕ್ಕೆ ಐವತ್ತು ರೂ ಬಿಲ್ಲಿನಂತೆ ಮೂರು ದಿನಗಳಲ್ಲಿ ೪೧೦೦ ರೂ ಬಿಲ್ಲುಗಳು ಸಿಕ್ಕಾಗ ಆ ಕೆಲಸಕ್ಕೆ ರಾಜೀನಾಮೆ ಕೊಟ್ಟು ವ್ಯಾಪಾರ ಪ್ರಾರಂಭಿಸಿದ್ದಾನೆ. ಬೇರೆ ಯಾರೂ ಸಿಕ್ಕದೆ ಕೊನೆಗೆ ಹಣದ ಆಸೆಗಾಗಿಯಾದರೂ ಬರುತ್ತಾರೇನೊ ಎಂದು ತಲೆ ಒಂದಕ್ಕೆ ಎಪ್ಪತ್ತೈದು ರೂ ಬಿಲ್ಲಿನಂತೆ ನಿಗದಿ ಮಾಡಿ “ಜಾಹೀರಾತು” ಕೊಡುತ್ತಾರೆ.

ಎರಡನೆಯ ದೃಶ್ಯದಲ್ಲಿ ಜಾಹೀರಾತು ನೋಡಿದ ಇಬ್ಬರು ವ್ಯಕ್ತಿಗಳ ಸಂಭಾಷಣೆ ಇದೆ. ಒಬ್ಬನಿಗೆ ಕೈ ತುಂಬ ಹಣ ಸಿಗುವುದಾದರೂ ತಲೆ ಕಡಿಯುವುದು ಹೇಗೆ ಎನ್ನುವುದೊಂದು ಸಮಸ್ಯೆ. ಅದನ್ನು ನೆನಸಿದರೇ ನಡುಕ. ಅದಕ್ಕೆ ಮತ್ತೊಬ್ಬ ‘ನಡುಕ ಏಕೆ ಹುಟ್ಟಬೇಕು. ಚಳಿ ಬಂದಿದೆಯೆ? ಇಲ್ಲ ನಾನೇನು ಹೆಂಗಸೇ ರಕ್ತ ನೋಡಿ ಹಿಂಜರಿಯುವುದಕ್ಕೆ! ಮೊದಲನೆ ತಲೆ ಕತ್ತರಿಸುವುದಕ್ಕೆ ಶುರುಮಾಡಿದರೆ ಸಾಕು ಆಮೇಲೆ ನಾರು ಕಡಿದ ಹಾಗೆ. ಒಂದರ ಮೇಲೊಂದರಂತೆ.........”[೩೩]

“ಸರ್ಕಾರದವರಿಗೆ ತಲೆಗಡುಕರ ಅಭಾವವಿದೆ. ಈ ಹೊತ್ತಿನಲ್ಲಿ ನಾವು ನಮ್ಮ ಷರತ್ತುಗಳನ್ನು ಹೊತ್ತು ನೋಡಿ ಹಾಕಿದರಾಯಿತು”[೩೪] ಎಂದು ನಿರ್ಣಯಿಸುತ್ತಾನೆ ಅವನು.

ಮೂರನೆ ದೃಶ್ಯದಲ್ಲಿ ಮತ್ತೆ ಜೈಲಿನ ಆಫೀಸಿನ ಕೋಣೆ. ಅಧಿಕಾರಿಗಳಿಬ್ಬರು ತಲೆಗಡುಕರಿಗಾಗಿ ಕಾಯುತ್ತಿದ್ದಾರೆ. ಕಾದು ಬೇಸರಗೊಂಡ ಒಬ್ಬ ಅಧಿಕಾರಿ ಇಪ್ಪತ್ತೈದು ರೂ ಬಿಲ್ಲಿನಂತೆ ತಲೆಯೊಂದಕ್ಕೆ ದರವೇರಿಸಿದರೂ ಇವರಿಗೆ ಬಂದಿರುವ ರೋಗವೇನು? ಸಾಯುವವನು ಸುಮ್ಮನೆ ಸಾಯಲು ಒಪ್ಪುತ್ತಾನೆ. ಗಲ್ಲಿಗೇರಿಸಲು ಆರ್ಡರ್ ಮಾಡುವವರು ಏನೂ ತೊಂದರೆಯಿಲ್ಲದೆ ಆರ್ಡರು ಮಾಡುತ್ತಾರೆ. ನಾವು ಸಹ ಯಾರನ್ನೂ ಉಳಿಸದೆ ಆ ದಿವಸದವರನ್ನು ಮಾರನೇ ದಿವಸವೇ ಶೂಲದ ಮರಕ್ಕೇರಿಸಲು ಸಿದ್ಧರಾಗಿದ್ದೇವೆ. ಹಾಗಿದ್ದರೂ ತಲೆ ಕತ್ತರಿಸಲು ಯಾರೂ ಮುಂದಕ್ಕೆ ಬರದಿದ್ದರೆ ನಾವೇನು ಮಾಡಬೇಕು. ತಲೆಗೊಂದು ಕರೀ ಟೊಪ್ಪಿಗೆ ಹಾಕಿ ಅಲ್ಲಿ ನಿಲ್ಲಿಸಿ ಮರದಿಂದ ಹಗ್ಗ ಎಳೆಯುವುದಕ್ಕೆ ಇವರಿಗೆ ಎಪ್ಪತ್ತೈದು ರೂ ಬಿಲ್ಲುಗಳು......”[೩೫] ಎಂದು ಯೋಚಿಸುತ್ತಾನೆ.

ಕೊನೆಗೊಮ್ಮೆ ತಲೆಗಡುಕನೊಬ್ಬ ಬರುತ್ತಾನೆ. ಅವನು ತನ್ನದೇ ಆದ ಷರತ್ತುಗಳನ್ನು ಅಧಿಕಾರಿಯ ಮುಂದಿಡುತ್ತಾನೆ. “ನನಗೆ ಸರಾಸರಿ ದಿನಕ್ಕೆ ಐದು ತಲೆಗಳಿಗೆ ಕಡಿಮೆ ಇಲ್ಲದಂತೆ ಕತ್ತರಿಸಲು ಅವಕಾಶ ಸಿಗಬೇಕು. ಹಾಗಾದರೆ ಮಾತ್ರ ನಾನು ತಲೆಯೊಂದಕ್ಕೆ ಎಪ್ಪತ್ತೈದು ರೂ ಬಿಲ್ಲಿನಂತೆ ಒಪ್ಪುತ್ತೇನೆ. ಕಡಿಮೆಯಾದರೆ ಆ ದಿವಸದ ಮಟ್ಟಿಗೆ ನೀವು ತಲೆಯೊಂದಕ್ಕೆ ಎಂಬತ್ತು ರೂ ಬಿಲ್ಲಿನಂತೆ ದರ ಕೊಡಬೇಕು”[೩೬] ಎನ್ನುತ್ತಾನೆ. “ನಿನಗೆ

ಈ ತಲೆ ಕತ್ತರಿಸುವ ಕೆಲಸದಲ್ಲಿ previous experience ಏನಾದರೂ ಇದೆಯೋ......" ಎಂದು ಅಧಿಕಾರಿ ಪ್ರಶ್ನಿಸುತ್ತಾನೆ. ಅದಕ್ಕೆ ಆ ಮಾಂಸದ ವ್ಯಾಪಾರಿ "ಹಿಂದಿನ ದೊರೆಗಳ ಕಾಲದಲ್ಲಿ ಈ ಕೆಲಸವನ್ನು ಮಾಸ್ಕೋ ನಗರದಲ್ಲಿ ನಿರ್ವಹಿಸುತ್ತಿದ್ದವರು ನನ್ನ ತಂದೆಯ ಒಡ ಹುಟ್ಟಿದವರು"[೩೭] ಎನ್ನುತ್ತಾನೆ. ಕೊನೆಗೆ ಅವನಿಗೆ ಕೆಲಸ ಆರ್ಡರ್ ಸಿಗುತ್ತದೆ.

ನಾಲ್ಕನೆಯ ಗಲ್ಲುಮರದ ದೃಶ್ಯ. ತಲೆಗಡುಕ ತಲೆಗಳನ್ನು ಕಡಿದು ಹಾಕಿದ್ದಾನೆ. ಕೊನೆಯ ಕಾರ್ಯವನ್ನು ಮಾಡಿ ಮುಗಿಸಿದ್ದಾನೆ. ಅಧಿಕಾರಿ ಅವನಿಗೆ ಆ ದಿನದ ಹಣ ಚೆಕ್ ಮೂಲಕ ಸಿಗುತ್ತದೆಂದು ಹೇಳಿ ಇನ್ನೆರಡು ದಿವಸ ಕೆಲಸವಿರುವುದಿಲ್ಲ ಎನ್ನುತ್ತಾನೆ. ತಲೆಗಡುಕ ತನ್ನ ಷರತ್ತನ್ನು ನೆನಪಿಸುತ್ತಾನೆ. "ಕೆಲಸವಿಲ್ಲದ ದಿನಗಳ ಸಂಬಳ ಕೊಡಲಾಗುವುದಿಲ್ಲ" ಎಂದು ಅಧಿಕಾರಿ ಹೇಳಿದಾಗ "ತಾನು ಈ ಕೆಲಸವನ್ನು ಬಿಟ್ಟು ಹೋಗುವೆ" ಎನ್ನುತ್ತಾನೆ ತಲೆಗಡುಕ. ಆಗ ಅಧಿಕಾರಿ "ರಜಾ ದಿನಗಳ ದಿನ ಒಂದಕ್ಕೆ ಹತ್ತು ರೂ ಬಿಲ್ಲಿನಂತೆ ನಿನಗೆ ಬೋನಸ್ ಕೊಡಲಾಗುವುದು"[೩೮] ಎಂದು ಹೇಳುತ್ತಾನೆ. "ಇಂಥ ರಜಾದಿನಗಳು ತಿಂಗಳಿಗೆ ಇಪ್ಪತ್ತೆಂಟು ಆದರೆ ನನ್ನ ಗತಿ? ಎಂದಾಗ "ಆ ರೀತಿ ಗಾಬರಿಗೆ ಅವಕಾಶವಿಲ್ಲ. ದೇಶದಲ್ಲಿ ದೊಡ್ಡ ದಂಗೆ. ಕ್ರಾಂತಿ ಉರಿಯುತ್ತಿದೆ. ಈ ಸಂಧಿಯಲ್ಲಿ ನಿನಗಲ್ಲದೆ ಮತ್ತಾರಿಗೆ ಕೆಲಸ. ಏನೋ ಈ ದಿವಸ ಹೆಡ್ ಕ್ವಾರ್ಟರ್ಸಿನಿಂದ ಯಾವ ಕೇಸುಗಳೂ ಇಲ್ಲಿಗೆ post ಆಗಿಲ್ಲ ಅಷ್ಟೆ!"[೩೯] ಎನ್ನುತ್ತಾನೆ ಅಧಿಕಾರಿ. ಅಷ್ಟರಲ್ಲಿ ಬೇರೊಬ್ಬ ತಲೆಗಡುಕ ತಲೆಯೊಂದಕ್ಕೆ ಐವತ್ತು ರೂ ಬಿಲ್ಲಿನಂತೆ ಕೆಲಸ ಮಾಡುವೆನೆಂದು ಬಂದಾಗ ಆ ಕೆಲಸ ಅವನಿಗೆ ಸಿಗುತ್ತದೆ.

ಕೊನೆಯ ದೃಶ್ಯ ತುಂಬಾ ವಿಡಂಬನಾತ್ಮಕವಾಗಿದೆ. ಬೆಳಗಿನ ಸಮಯ ೬-೨೫ ವಧೆಗೆ ಎಲ್ಲವೂ ಸಿದ್ಧವಾಗಿದೆ. ಸಂಬಂಧಪಟ್ಟವರೆಲ್ಲ ಅಲ್ಲಿ ನೆರೆದಿದ್ದಾರೆ. ಹೊಸ ತಲೆಗಡುಕನೂ ಬಂದಿದ್ದಾನೆ. ಆಗ ತಲೆಗಡುಕ ಎಪ್ಪತ್ತು ರೂ ಬಿಲ್ಲುಗಳನ್ನು ಕೇಳುತ್ತಾನೆ. ಅಷ್ಟನ್ನು ಕೊಡದಿದ್ದರೆ ತಾನು ಈಗಲೇ ಹೊರಡುವುದಾಗಿ ಸಮವಸ್ತ್ರವನ್ನು ತೆಗೆಯುತ್ತಾನೆ. ಕೊನೆಗೆ ವಿಧಿಯಿಲ್ಲದೆ ಅಧಿಕಾರಿಗಳು ಎಪ್ಪತ್ತೈದು ರೂ ಬಿಲ್ಲುಗಳನ್ನು ಕೊಡಲು ಒಪ್ಪುತ್ತಾರೆ. ತಲೆಗಡುಕ ತನ್ನ ಕರ್ತವ್ಯವನ್ನು ಮಾಡಿ ಮುಗಿಸುತ್ತಾನೆ.

ವ್ಯಕ್ತಿ ತನ್ನ ಬದುಕಿನ ಅವಸರಕ್ಕಾಗಿ ಮಾನವೀಯ ಭಾವನೆಗಳಿಗೆ ತಿಲಾಂಜಲಿಯಿತ್ತು ಕೊಲ್ಲುವ ಈ ವ್ಯವಸ್ಥಿತ ಕ್ರಮವನ್ನು ಹೇಗೆ ಉಪಯೋಗಿಸಿಕೊಳ್ಳುತ್ತಾನೆ ಎಂಬುದರ ಚಿತ್ರಣ ಇಲ್ಲಿ ಸೊಗಸಾಗಿ ಮೂಡಿಬಂದಿದೆ. ಹೃದಯದಾಳದಲ್ಲಿ ಕಿಂಚಿತ್ ಭಯವಿದ್ದರೂ ಅದನ್ನು ಕರ್ತವ್ಯ, ಆಸೆಗಳ ಲೇಪನದಿಂದ ಮುಚ್ಚಿಹಾಕುತ್ತಿದ್ದರು. ಸರ್ಕಾರದ ಪಾಲಿಗೆ ಅವರು ಕೇವಲ ಯಂತ್ರಗಳಷ್ಟೇ. ಮನುಷ್ಯ ಮನುಷ್ಯನಿಗೆ ಮಾಡುವ ಈ ಅನ್ಯಾಯವನ್ನು, ಅಮಾನುಷಕೃತ್ಯವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ ಟಿ.ಎನ್. ಮಹದೇವಯ್ಯನವರು. ಕಾಲ ದೇಶ ಪರಿಸರಗಳಿಗೆ ಧಕ್ಕೆ ಬರದ ರೀತಿಯಲ್ಲಿ ನಾಟಕ ಮೂಡಿಬಂದಿದೆ. ಭಾಷೆ ಸರಳ, ನೇರ. ಟಾಲ್‌ಸ್ಟಾಯನ ಒಂದು ಪ್ಯಾರಾದ ವಿಚಾರವನ್ನು ಐದು ದೃಶ್ಯಗಳ ನಾಟಕವನ್ನಾಗಿ ನಿರ್ಮಿಸಿದ ಟಿ.ಎನ್. ಮಹದೇವಯ್ಯನವರ ಪ್ರತಿಭೆ ಗಮನಾರ್ಹವಾದುದು.[೪೦]



೫

# ಟಿ.ಎನ್. ಮಹದೇವಯ್ಯನವರ ವಿಮರ್ಶಾಕೃತಿಗಳು

ದಿ. ಟಿ.ಎನ್. ಮಹದೇವಯ್ಯನವರು ಕನ್ನಡದ ಆರಂಭಕಾಲದ ಪ್ರತಿಭಾವಂತ ವಿಮರ್ಶಕರಾಗಿದ್ದರು. ಅವರು ಕನ್ನಡ ಹಾಗೂ ಆಂಗ್ಲಸಾಹಿತಿಗಳ ಅನನ್ಯ ಉಪಾಸಕರು. ಪೌರ್ವಾತ್ಯ ಹಾಗೂ ಪಾಶ್ಚಾತ್ಯ ಸಾಹಿತ್ಯಭ್ಯಾಸದಿಂದ ಅವರ ಕವಿತೆ, ವಿಮರ್ಶೆ ಹಾಗೂ ನಾಟಕಗಳು ಒಂದು ಬಗೆಯ ಹೊಸತನವನ್ನು ಮೂಡಿಸಿಕೊಂಡಿವೆ. ಟಿ. ಎನ್. ಮಹದೇವಯ್ಯನವರ ವಿಮರ್ಶಾಲೇಖನಗಳ ವಿಷಯ ವ್ಯಾಪ್ತಿ ದೊಡ್ಡದು. ಅವರು ಬರೆದಿರುವ ವಿಮರ್ಶಾಲೇಖನಗಳಲ್ಲಿ ಅಭ್ಯಾಸದ ವ್ಯಾಪಕ ಪ್ರಮಾಣ, ತೀಕ್ಷ್ಣ ವಿಚಾರದೃಷ್ಟಿ, ಹದಗೊಂಡ ಗರಿಮುರಿಭಾಷೆ, ಚಿಮ್ಮುವ ಉತ್ಸಾಹದ ಬುಗ್ಗೆ, ವ್ಯಾಸಂಗದಲ್ಲಿನ ನಿಷ್ಠೆ - ಇವೇ ಮೊದಲಾದ ವಿಶಿಷ್ಟಗುಣಗಳ ಪರಿಚಯ ಸಹೃದಯಿಗಾಗುತ್ತದೆ. ೧೨ನೇ ಶತಮಾನದ ವಚನಚಳುವಳಿಗೆ ಧೃತಿ-ಗತಿ ಶಕ್ತಿಯಾಗಿದ್ದ ಅನುಭವ ಮಂಟಪದ ಕಾರ್ಯವ್ಯಾಪ್ತಿ, ವೈಚಾರಿಕ ಕ್ರಾಂತಿಗೆ ದನಿಗೂಡಿಸಿದ ಶರಣ ಶರಣೆಯರು, ವಿಚಾರವಂತರ ಕೂಟದಲ್ಲಾದ ಚಿಂತನ ಮಂಥನಗಳು ಹಾಗೂ ವಿಜಯನಗರದ ಅರಸು ಶ್ರೀ ಕೃಷ್ಣದೇವರಾಯನ ಸಾಹಿತ್ಯಪ್ರೇಮವನ್ನು, ಅವನಿಂದ ಪ್ರೇರಣೆ ಪೋಷಣೆ ಪಡೆದ ಸಂಸ್ಕೃತ, ತೆಲುಗು, ಕನ್ನಡ ಕವಿಗಳ ಕೊಡುಗೆಯನ್ನು ಸಮೀಕ್ಷಿಸುವ ಗುರಿಯುಳ್ಳ ಲೇಖನ 'ಶ್ರೀಕೃಷ್ಣದೇವರಾಯನ ಸಾಹಿತ್ಯ ವೈಭವ'. "ಅಲೆಗ್ಸ್ಯಾಂಡರ್ ತನ್ನ ಕತ್ತಿಯೊಂದಿಗೆ ಕವಿ ಹೋಮರನ 'ಇಲಿಯಡ್' ಮಹಾಕಾವ್ಯವನ್ನು ಹೊತ್ತು ತಿರುಗಿದಂತೆ ನಮ್ಮ ಕನ್ನಡ ರಾಯನು ತನ್ನ ಪ್ರತಿ ಜೈತ್ರಯಾತ್ರೆಯಲ್ಲೂ ಕಡತ, ತಾಳಯೋಲೆ, ಕಂಠಪತ್ರಗಳನ್ನು ಹತ್ತಿರ ಇಟ್ಟುಕೊಂಡು ಅಲೆದನು. ನೀರವ ನಿಷ್ಪಂದ ಸನ್ನಿವೇಶಗಳಲ್ಲಿ ಕಾವ್ಯ ಸರಸ್ವತಿ ಅವನ ಹೃದಯ ಮಂದಿರದಲ್ಲಿ ಕುಳಿತು ತನ್ನ ಅನುಪಮ ವೀಣಾ ಝುಂಕೃತಿ ವಿಪಂಚಿಕೆಗಳಿಂದ ಅವನನ್ನು ರಸದ ಕಡಲಲ್ಲಿ ಮೀಯಿಸುತ್ತಿದ್ದಳು..."[೧] ಇಂತಹ ಎಡೆಗಳಲ್ಲಿ ಅವರ ಅಭಿಮಾನ, ಉತ್ಸಾಹಗಳು ಅತಿಶಯೋಕ್ತಿಯ ಬಣ್ಣ ಬಳಿದುಕೊಂಡು ರಂಜಿಸುತ್ತವೆ. ರಾಯನ ಕವಿ-ಸಾಹಿತ್ಯ ಪ್ರೇಮವನ್ನು ವಿವರಿಸುವಲ್ಲಿ ಟಿ. ಎನ್. ಮಹದೇವಯ್ಯನವರು. ಸಾಕಷ್ಟು ವಿಷಯ ಸಂಗ್ರಹಿಸಿರುವರು. ರಾಯನ ಸ್ಫೂರ್ತಿ, ಆಶ್ರಯಪಡೆದ ಕವಿಗಳ ಪಟ್ಟಿ ಗಮನಿಸಿದಾಗ ಕೆಲವೆಡೆ ವಿಜಯನಗರದ

ಅರಸರ ಆದರಲ್ಲೂ ಕೃಷ್ಣದೇವರಾಯನು ತನ್ನ ಕಾಲದ ಕನ್ನಡ ಕವಿಗಳೆಲ್ಲರಿಗೂ ಆಶ್ರಯಕೊಟ್ಟಿದ್ದನೆಂಬ ಭಾವನೆ ಬರುವಂತಾಗುತ್ತದೆ.

ಟಿ. ಎನ್. ಮಹದೇವಯ್ಯನವರು ಬಸವಣ್ಣನವರ ಪ್ರತಿಜ್ಞಾರೂಪವಾಗಿರುವ ಕೆಲವು ವಚನಗಳನ್ನು ಆಯ್ದು 'ಬಸವ ಪ್ರತಿಜ್ಞಾ' ಎಂಬ ಕಿರುಹೊತ್ತಿಗೆ ಪ್ರಕಟಿಸಿರುವರು. "ಅವುಗಳಲ್ಲಿರುವ ಅಮೃತದ ತೊಟ್ಟುಗಳನ್ನು ಆರಿಸಿ, ಟೀಕಾಸಹಿತವಾಗಿ ಈ ಸಣ್ಣ ಪುಸ್ತಕದಲ್ಲಿ ವಿಚಾರಿಸಲಾಗಿದೆ. ಪ್ರತಿಯೊಂದು ವಚನದಲ್ಲೂ ಇಡೀ ವೀರಶೈವ ಧರ್ಮ ತತ್ತ್ವಗಳೇ ಪರಿಪಕ್ವವಾಗಿ ತುಂಬಿವೆ. ಅವುಗಳ ಆಳಕ್ಕೆ ಇಳಿಯುವಷ್ಟು ಶಕ್ತಿಯು ಈ ಅಲ್ಪಬುದ್ಧಿಗೆ ಇಲ್ಲವೆಂದು ಭಾವಿಸಿ ಸಾಧ್ಯವಾದಷ್ಟು ಮಟ್ಟಿಗೆ ವಿಚಾರಿಸಲಾಗಿದೆ"[೨] ಎಂದು ತಮ್ಮ ಚಿಕ್ಕ ಪ್ರಸ್ತಾವನೆಯಲ್ಲಿ ಹೇಳಿಕೊಂಡಿದ್ದಾರೆ.

ಬಸವಾದಿ ಪ್ರಮಥರ ಬಗ್ಗೆ ಶ್ರೀ ಟಿ. ಎನ್. ಮಹದೇವಯ್ಯ ಅವರಿಗಿದ್ದ ಶ್ರದ್ಧೆಗೆ ಈ ಮಾತುಗಳು ನಿದರ್ಶನ-"ಕನ್ನಡನಾಡಿನ ಸ್ವರ್ಣಯುಗವೆಂದರೆ ಶಿವಶರಣರ ಕಾಲ. ಸ್ತ್ರೀ ಪುರುಷರಾದಿಯಾಗಿ ಎಲ್ಲರೂ ಧಾರ್ಮಿಕ ಜೀವನರಂಗದಲ್ಲಿ, ಸಾಹಿತ್ಯ ಕ್ಷೇತ್ರದಲ್ಲಿ ಬಹಳ ಮುಂದುವರೆದಿದ್ದ ಸ್ಥಿತಿಯು ವಚನಗಳಿಂದ ನಮಗೆ ತಿಳಿದುಬರುತ್ತದೆ.

"ಬಸವ ಪ್ರತಿಜ್ಞಾ" ವಚನಗಳಲ್ಲಿ ಮೊದಲನೆಯದು- "ಅಯ್ಯಾ ಏಳೇಳು ಜನ್ಮದಲ್ಲಿ ಶಿವಭಕ್ತನಾಗಿ ಬರದಿದ್ದರೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ; ನಿಮ್ಮ ಪ್ರಸಾದಕ್ಕಲ್ಲದೆ ಬಾಯ್ದೆರೆಯೆನಯ್ಯಾ; ಪ್ರಥಮ ಭವಂತಾರದಲ್ಲಿ ಶಿಲಾದನೆಂಬ ಗಣೇಶ್ವರನ ಮಾಡಿ..."[೩] ಎಂದು ಆರಂಭವಾಗುವ ವಚನಕ್ಕೆ ಶ್ರೀ ಮಹದೇವಯ್ಯನವರು ದೀರ್ಘವಾದ ವಿವರಣೆ ಕೊಟ್ಟಿರುತ್ತಾರೆ. ಇಲ್ಲಿ ಅವರು ಯೋಗಶಾಸ್ತ್ರದ ಸೂತ್ರವನ್ನು ನಿದರ್ಶಿಸಿ, ಬಸವಣ್ಣನವರಿಗೆ ತಮ್ಮ ಹಿಂದಿನ ಏಳುಭವಾಂತರಗಳ ಸೂಕ್ಷ್ಮ ಪರಿಚಯವಿದ್ದುದನ್ನು ಸಮರ್ಥಿಸಿರುವರು. ಅವರಿಗೆ ಈ ಬಗೆಯ ಜನ್ಮಾಂತರ ಪರಿಜ್ಞಾನ ಬಂದಿದ್ದುದು ಯೋಗಶಕ್ತಿಯಿಂದ. ಪಾತಂಜಲ ಯೋಗಶಾಸ್ತ್ರದಲ್ಲಿ "ಅಪರಿಗ್ರಹ ಸ್ಥೈರ್ಯೇ ಜನ್ಮ ಕಥಂತಾ ಸಂಧ" ಎಂಬ ಸೂತ್ರವನ್ನು ನಿದರ್ಶಿಸಿ, "ಸ್ವಾರ್ಥಕ್ಕಾಗಿ ಯಾರಿಂದಲೂ ಏನನ್ನೂ ಸಮರ್ಥಿಸಲಾಗದ ಅಮಲತರವಾದ ಗುಣಗಳಿಗೆ ತನ್ನಲ್ಲಿ ಎಡೆಗೊಟ್ಟು ಪವಿತ್ರತೆಯನ್ನು ತನ್ನ ಊಟ ನಿದ್ದೆಗಳಲ್ಲೂ ಕೂಡ ಕಾಯ್ದುಕೊಂಡಿರುವ ಬಸವ ಮಹಾತ್ಮನಿಗೆ ಜನ್ಮಾಂತರಗಳ ಅರಿವಾದುದೊಂದು ಅಚ್ಚರಿಯಲ್ಲ"[೪] ಎಂದು ಸಮರ್ಥಿಸಿದ್ದಾರೆ.

ಎರಡನೆಯದಾಗಿ ಬಸವಣ್ಣನವರು ತಮಗಿದ್ದ ಭಕ್ತಿಯ ಪರಾಕಾಷ್ಠತೆಯನ್ನು ಈ ವಚನದಲ್ಲಿ ನಿರೂಪಿಸಿದ್ದಾರೆ. ಏಳೇಳು ಜನ್ಮಗಳಲ್ಲೂ ಪರಮಾತ್ಮನ ಸಂಗಡ ತಾನು ನಿಕಟಸಂಬಂಧವನ್ನು ಕಲ್ಪಿಸಿಕೊಂಡು ಸೇವೆಮಾಡುವುದಕ್ಕೆ ಕೇವಲ ಒಂದು ಜನ್ಮವೇ ಏಕೆ? ಏಳೇಳು ಜನ್ಮದಲ್ಲಿಯೂ ಪರಮಾತ್ಮನ ಸೇವೆ ಮಾಡಬೇಕು ಎಂಬ ಭಕ್ತಿಯ ಉತ್ಕಟತೆಯನ್ನು ಇಲ್ಲಿ ತೋರಿಸಲಾಗಿದೆ. ಮೇಲಾಗಿ ಏಳೇಳು ಜನ್ಮಕ್ಕೂ ನಾನು ನಿನ್ನ ಭಕ್ತನಾಗಿ ಹುಟ್ಟದಿದ್ದರೆ ನಿನ್ನಾಣೆ ನಿನ್ನ ಪ್ರಮಥರಾಣೆಯಿರಲಿ; ನಿನ್ನ ಪ್ರಸಾದದಲ್ಲಿಯೇ ನನ್ನ ಕಾಯವಿದೆ.

ಅಂಥ ಪ್ರಸಾದಕ್ಕೆ ಮಾತ್ರ ನಾನು ಬಾಯ್ದೆರೆವೆನಲ್ಲದೆ ಅನ್ಯಕ್ಕಲ್ಲ" ಎಂಬಲ್ಲಿ ಆತನ ಭಕ್ತಿಯು ನಿಷ್ಠೆಯ ರೂಪವಾಗಿ ಪರಿವರ್ತಿತವಾಗಿರುವುದು ಕಂಡುಬರುತ್ತದೆ.

ಮೂರನೆಯದಾಗಿ ಬಸವಣ್ಣನವರು ಸೂಚಿಸಿರುವ ಶಿಲಾದ ಸ್ಕಂದ, ನೀಲಲೋಹಿತ, ಮನೋಹರ, ಕಾಲಲೋಚನ, ವೃಷಭ ಮತ್ತು ಬಸವ ಎಂಬ ಬಸವನ ಏಳು ಭವಾಂತರಗಳ ಹೆಸರುಗಳು ಜೀವನು ಶಿಲಾಯುಗದಿಂದ ಕ್ರಮಕ್ರಮವಾಗಿ ವಿಕಾಸಹೊಂದಿ 'ವೃಷಭ'ವೆಂಬ ಗೋವಿನ ಜನ್ಮತಳೆದು ಮುಂದೆ ಪರಿಪೂರ್ಣ ಮಾನವಜನ್ಮಧರಿಸಿ ಸುಸಂಸ್ಕೃತವಾಗಿ 'ಬಸವ' ನೆನಿಸಿದ್ದ ದೃಷ್ಟಿಯೂ ಈ ವಚನದಲ್ಲಿ ಅಡಗಿರುವುದನ್ನು ಶ್ರೀಯುತರು ಈ ವಚನ ವಿವರಣೆಗೆ ಸೇರಿಸಬಹುದಿತ್ತು ಎಂಬುದಾಗಿ ಎಂ. ಜಿ. ನಂಜುಂಡಾರಾಧ್ಯ ಅವರ ಅಭಿಪ್ರಾಯ. "ಎನ್ನ ತಪ್ಪು ಅನಂತಕೋಟಿ; ನಿಮ್ಮ ಸೈರಣೆಗೆ ಲೆಕ್ಕವಿಲ್ಲ" ಎಂಬ ವಚನಕ್ಕೆ ಬರೆದಿರುವ ವಿವರಣದಲ್ಲಿ ಶ್ರೀಯುತರು "ತಪ್ಪು ಮಾಡುವುದು ಮಾನವ ಸ್ವಭಾವ. ಆದರೆ ಮಾಡಿದ ತಪ್ಪನ್ನು ಒಪ್ಪಿಕೊಂಡು ಅದಕ್ಕೆ ಪಶ್ಚಾತ್ತಾಪಪಟ್ಟು, ಮತ್ತೆ ಅಂಥ ತಪ್ಪನ್ನು ಎಸಗದಿರುವುದು ಉದಾತ್ತತೆಯ ಲಕ್ಷಣ" ಎಂದು ಸಮರ್ಥಿಸಿದ್ದಾರೆ. ಇದಕ್ಕೆ "ತನ್ನ ಅಯೋಗ್ಯತೆಯನ್ನು ಅಶಕ್ತತೆಯನ್ನು ಒಪ್ಪಿಕೊಳ್ಳುವುದು ಪ್ರಾರ್ಥನೆ" ಎಂಬ ಮಹಾತ್ಮ ಗಾಂಧೀಜಿಯವರ ಉಕ್ತಿಯನ್ನು ನಿದರ್ಶಿಸಲಾಗಿದೆ. ಸ್ವಾಮಿ ವಿವೇಕಾನಂದರು "ತನ್ನ ತಪ್ಪುಗಳನ್ನು ಒಪ್ಪಿಕೊಳ್ಳುವುದೇ ಆತ್ಮಪರಿಶೋಧನ ಕ್ರಮ. ಆತ್ಮಪರಿಶುದ್ಧಿಯಿಲ್ಲದೆ ಆತ್ಮನ ಸಾಕ್ಷಾತ್ಕಾರವಿಲ್ಲ" ಎಂಬುದನ್ನು ಸಮರ್ಥಿಸಲು ಹೇಳಿರುವ "purity is absolutely the basic work, the bedrock upon which the whole Bhakti building rests" "ಪರಿಶುದ್ಧತೆಯು ಅತ್ಯವಶ್ಯಕವಾದ ಮೂಲಕೃತಿ, ಭಕ್ತಿಮಂದಿರದ ತಳಹದಿಯ ಕಲ್ಲು."

"ಎನಗಿಂತ ಕಿರಿಯರಿಲ್ಲ" "ಎಂಭತ್ತುನಾಲ್ಕುಲಕ್ಷ ಮುಖದೊಳಗೊಂದೇ ಮುಖವಾಗಿ ಕಾಡಿನೋಡೆನ್ನನು" ಮುಂತಾದ ವಚನಗಳಲ್ಲಿ ಅವರು ನೀಡಿರುವ ವಿವರಣವು ಹೊಸ ನೋಟವನ್ನು ಸೂಚಿಸಿದೆ. ಮೇಲಿನ ಎರಡನೆಯ ವಚನದಲ್ಲಿ ಭಗವಂತನು ಸರ್ವತೋಮುಖನಾಗಿ, ಸರ್ವತಶ್ಚಕ್ಷುವಾಗಿ ಎಲ್ಲವನ್ನೂ ಕಾಣುವನು. ಅವನಿಗೆ ತಿಳಿಯದಂತೆ ಮಾಡುವ ರಹಸ್ಯವಿರಲಾರದು ಎಂಬುದನ್ನು ಶ್ರೀರಾಮಕೃಷ್ಣ ಪರಮಹಂಸ, ವಿವೇಕಾನಂದ, ಏಸುಕ್ರಿಸ್ತ ಮುಂತಾದ ಸಾಧುಸಂತರ ಉಕ್ತಿಗಳಿಂದ ಸಮರ್ಥಿಸಲಾಗಿದೆ.

"ಹೊನ್ನಿನೊಳಗೊಂದೊರೆಯ, ಸೀರೆಯೊಳಗೊಂದೆಳೆಯ" ಎಂಬ ವಚನದಲ್ಲಿ ಸಂಸಾರದಲ್ಲಿದ್ದುಕೊಂಡು ಎಲ್ಲವನ್ನೂ ಪರಹಿತಕ್ಕಾಗಿ ತ್ಯಜಿಸುವುದೇ ಮಹಾಪುರುಷರ ಲಕ್ಷಣ" ಎಂಬ ತತ್ತ್ವವನ್ನು ರವೀಂದ್ರರ "Leave all the burdens on his hands who can bear all and never look behind in regret" ನಿನ್ನ ಹೊರೆಯನ್ನೆಲ್ಲ ಹೊರಬಲ್ಲವನಾದ ದೇವನ ಕೈಯಲ್ಲಿಡು; ಮತ್ತೆ ನೆನೆದು ಹಿಂದಿರುಗಿ ನೋಡಬೇಡ" ಮುಂತಾದ ಉಕ್ತಿಗಳಿಂದ ಸಮರ್ಥಿಸಲಾಗಿದೆ.

"ಎಲ್ಲಿ ನೋಡಿದಡಲ್ಲಿ ಮನವೆಳಸಿದಡೆ ಆಣೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ; ಪರವಧುವನು ಮಹಾದೇವಿಯೆಂಬೆ" ಎಂಬ ವಚನದಲ್ಲಿ "ಇಂದ್ರಿಯಗಳ ಉಪಟಳವನ್ನು ನಿಗ್ರಹಿಸುವ ತತ್ತ್ವಪ್ರತಿಪಾದನೆಯ

ವಿಸ್ತಾರವಾದ ವಿವರಣೆಯಿದೆ.[೯] ಚಿತ್ತ ಸಂಯಮಕ್ಕೆ ದೃಷ್ಟಿಯೇ ಮೂಲ, ದೃಷ್ಟಿಸಿದ್ಧಿಯೇ ಜೀವನ ಸಾರ್ಥಕ್ಯದ ಕೀಲಿಕೈ ಎಂಬುದನ್ನು ಅವರ ಬರವಣಿಗೆಯಿಂದಲೇ ತಿಳಿಯಬಹುದಾಗಿದೆ.

ಕನ್ನಡ ಸಾಹಿತ್ಯದ ಐಶ್ವರ್ಯವನ್ನು ಹೆಚ್ಚಿಸಿದ ಕೆಲವು ಮಹಾಕವಿಗಳಲ್ಲಿ ರತ್ನಾಕರವರ್ಣಿಯೂ ಒಬ್ಬ, ಇವನು ಪಶ್ಚಿಮ ಕರಾವಳಿಯ ಮೂಡಬಿದಿರೆಯ ಒಂದು ಕ್ಷತ್ರಿಯ ವಂಶದಲ್ಲಿ ಹುಟ್ಟಿ, ಜೈನಧರ್ಮದ ಜೀವಂತ ಕೇಂದ್ರಗಳಲ್ಲಿ ಒಂದಾದ ಕಾರ್ಕಳದ ವಿದ್ಯಾಮಯ ವಾತಾವರಣದಲ್ಲಿ ಬೆಳೆದು, ಕಾವ್ಯಶಾಸ್ತ್ರದೊಳಗೆ ನಿಪುಣನಾಗಿ ತನ್ನ ಗುರು ಚಾರುಕೀರ್ತಿಯಿಂದ 'ಶ್ರೀ ಶುಚಿದೀಕ್ಷೆ'ಯನ್ನು ಪಡೆದ. ಇವನ ಸಿದ್ಧಹಸ್ತದಿಂದ ನಿರ್ಮಾಣವಾದ ಶ್ರೇಷ್ಠ ಕೃತಿಯೆಂದರೆ 'ಭರತೇಶ ವೈಭವ.'[೧೦]

ಭರತೇಶನ ಕತೆ ಬಹಳ ಹಳೆಯದು. ಆತನು ತ್ರಿಷಷ್ಠಿಶಲಾಕಾಪುರುಷರಲ್ಲಿ ಒಬ್ಬನು ಪ್ರಥಮ ಚಕ್ರಿ; ಆದಿತೀರ್ಥಂಕರ ವೃಷಭನಾಥನ ಹಿರಿಯಮಗ. ವೃಷಭನಾಥನಿಗೆ ನೂರುಜನ ಮಕ್ಕಳು. ವೃಷಭನಾಥನು ತನ್ನ ರಾಜ್ಯಾಡಳಿತದ ನಂತರ ತನ್ನ ರಾಜ್ಯವನ್ನು ತನ್ನ ನೂರುಮಕ್ಕಳಿಗೂ ಹಂಚಿಕೊಟ್ಟು ತಪಸ್ಸಾಧನೆಗೆ ಹೊರಟುಹೋಗುತ್ತಾನೆ. ಹಿರಿಯವನಾದ ಭರತನು ಅಯೋಧ್ಯೆಯಲ್ಲೂ , ಎರಡನೆಯವನಾದ (ಕೊನೆಯವನಾದ) ಬಾಹುಬಲಿಯು ಪೌದನಪುರದಲ್ಲೂ ರಾಜ್ಯವಾಳುತ್ತಿರುತ್ತಾರೆ. ಭರತನ ಆಯುಧಶಾಲೆಯಲ್ಲಿ ಚಕ್ರರತ್ನವು ಉದಯಿಸಲು, ಭರತನು ಅದರ ಸಹಾಯದಿಂದ ಜಗತ್ತನ್ನೆಲ್ಲ ಗೆದ್ದು ಪ್ರಥಮಚಕ್ರಿಯಾಗುತ್ತಾನೆ. ಹಿಂತಿರುಗುವಾಗ ರಾಜಧಾನಿಯ ಬಳಿಯಲ್ಲಿ ಚಕ್ರರತ್ನವು ನಿಂತುಬಿಡಲು, ಭರತನು ಅದರ ಕಾರಣವನ್ನು ತಿಳಿದು ಬಾಹುಬಲಿಯ ಮೇಲೆ ಯುದ್ಧವನ್ನು ಹೂಡುತ್ತಾನೆ. ದೇವತೆಗಳ ಸಂಧಾನದಿಂದ ಘೋರಯುದ್ಧವು ತಪ್ಪಿ, ಭರತ ಮತ್ತು ಬಾಹುಬಲಿಯರಲ್ಲಿ ದೃಷ್ಟಿಯುದ್ಧ, ಜಲಯುದ್ಧ, ಮಲ್ಲಯುದ್ಧಗಳು ನಡೆದು ಅವುಗಳಲ್ಲಿ ಭರತನು ಸೋತು ಅಪಮಾನಿತನಾಗಿ ಅವಿವೇಕದಿಂದ ನಿರಾಯುಧನಾದ ಬಾಹುಬಲಿಯ ಮೇಲೆ ಚಕ್ರರತ್ನವನ್ನೇ ಪ್ರಯೋಗಿಸುವ ಅಧರ್ಮಕ್ಕೆ ಕೈಹಾಕುತ್ತಾನೆ. ಅಣ್ಣನು ಮಾಡಿದ ಅಕಾರ್ಯದಿಂದ ಬಾಹುಬಲಿಯು ವೈರಾಗ್ಯ ಹೊಂದಿ ಸನ್ಯಾಸವನ್ನು ಸ್ವೀಕರಿಸಿ ಮೋಕ್ಷಮಾರ್ಗಾವಲಂಬಿಯಾಗುತ್ತಾನೆ. ಬಾಹುಬಲಿ ಎಷ್ಟು ದಿನಗಳು ತಪಸ್ಸಿನಲ್ಲಿ ನಿಂತರೂ ಕೇವಲ ಜ್ಞಾನ ಲಭಿಸುವುದಿಲ್ಲ. ಈ ವಿಚಾರ ಭರತನಿಗೆ ತಿಳಿದು ತಂದೆಯ ಹತ್ತಿರ ಹೋಗಿ ಕೇಳುತ್ತಾನೆ. ಅಗ ತಂದೆ "ಬಾಹುಬಲಿಗೆ 'ತಾನಿನ್ನೂ ಭರತನ ಭೂಮಿಯ ಮೇಲೆ ನಿಂತಿದ್ದೇನಲ್ಲ' ಎಂಬ ಒಂದು ಕೊರಗು ಮನಸ್ಸಿನಲ್ಲಿ ನಿಂತು ಕೇವಲಜ್ಞಾನ ಲಭಿಸಿಲ್ಲ, ನೀನು ಹೋಗಿ ಆ ಕೊರಗನ್ನು ಹೋಗಲಾಡಿಸು" ಎಂದು ಭರತನಿಗೆ ಹೇಳುತ್ತಾನೆ. ಅದರಂತೆ ಭರತನು ಬಾಹುಬಲಿಯ ಹತ್ತಿರಕ್ಕೆ ಬಂದು "ಯುದ್ಧದಲ್ಲಿ ಗೆದ್ದವನು ನೀನು, ಆದ್ದರಿಂದ ಈ ಭೂಮಿ ನಿನ್ನದು, ನಿನ್ನ ಎಂಜಲು ಭೂಮಿಯನ್ನು ನಾನು ಆಳುತ್ತಿದ್ದೇನೆ, ಅಷ್ಟೆ. ಇದು ನನ್ನ ಭೂಮಿಯಲ್ಲ, ಆದ್ದರಿಂದ ಆ ಯೋಚನೆಯನ್ನು ಬಿಟ್ಟು ಮೋಕ್ಷಸಾಧನೆಯ ಯೋಚನೆಯನ್ನು ಮಾಡು"[೧೧] ಎಂದು ಹೇಳುತ್ತಾನೆ. ಆನಂತರ ಬಾಹುಬಲಿಗೆ ಮೋಕ್ಷ ಪ್ರಾಪ್ತಿಯಾಗುತ್ತದೆ. ಇತ್ತ ಕಡೆ ಭರತನು ಕೆಲವು ಕಾಲ ರಾಜ್ಯವಾಳುತ್ತಿದ್ದು ಒಂದು ಸಲ ಕನ್ನಡಿಯಲ್ಲಿ ಪ್ರತಿಬಿಂಬಿಸಿದ ನೆರೆಗೂದಲನ್ನು ಕಂಡು ವೈರಾಗ್ಯಹೊಂದಿ ತಪಸ್ಸಿನಿಂದ ಮೋಕ್ಷಮಾರ್ಗಾವಲಂಬಿಯಾಗುತ್ತಾನೆ.

ಈ ಭರತನನ್ನು ಕಾವ್ಯನಾಯಕನನ್ನಾಗಿ ಹೊಂದಿರುವ 'ಭರತೇಶ ವೈಭವ' ಕಾವ್ಯ ಮಹೋನ್ನತ ಕೃತಿ. ಇದಕ್ಕೆ ತಕ್ಕ ಆದರ್ಶ ಕಥಾನಾಯಕ ಭರತೇಶ, ಆದಿತೀರ್ಥಂಕರನಾದ ಪುರುದೇವನ ಹಿರಿಯ ಮಗ. ಈ ಭರತನ ಚಿತ್ರವು ಸಂಸ್ಕೃತ ಪೂರ್ವಪುರಾಣದಲ್ಲೂ, ಪಂಪನ ಆದಿಪುರಾಣದಲ್ಲೂ ಈ ಮೊದಲೇ ರೂಪುಗೊಂಡು ಜನರ ಮನಸ್ಸನನ್ನು ಆಕರ್ಷಿಸಿತ್ತು. ಒಂದು ಭಕ್ತಿ ಗೌರವದ ಸ್ಥಾನವನ್ನು ಪಡೆದಿತ್ತು. ಇಂಥ ಚರಿತ್ರೆಯನ್ನು 'ಭರತೇಶ ವೈಭವ'ವನ್ನಾಗಿ ಮಾರ್ಪಡಿಸಿದ ಒಸಗೆಯು ರತ್ನಾಕರನದು.[೧೨] ತನಗೆ ದೊರೆತ ಪೂರ್ವದ ಸಂಪತ್ತೆಲ್ಲವನ್ನೂ ಚೆನ್ನಾಗಿ ವಿನಿಯೋಗಿಸಿ ರತ್ನಾಕರನು ಅಪೂರ್ವವಾದ ಕಾವ್ಯಸೌಧವನ್ನು ನಿರ್ಮಿಸಿದನು. ಅದರಲ್ಲಿ ಗಣನೆಯಿಲ್ಲದ ರಾಜ್ಯಸುಖದೊಳೋಲಾಡಿ ಧಾರಿಣಿ ಮೆಚ್ಚೆ ಯೋಗಿಯಾಗಿ ಕ್ಷಣಕೆ ಕರ್ಮವ ಸುಟ್ಟು ಜಿನನಾದ ಭೂಭುಜಾಗ್ರಜನ ವೈಭವಮೂರ್ತಿಯನ್ನು ಇಟ್ಟು ಅಲಂಕರಿಸಿದನು. ಭರತೇಶನ ವ್ಯಕ್ತಿತ್ವ ಈ ಕಾವ್ಯದಲ್ಲಿ ಉಜ್ವಲವಾಗಿ ಬೆಳಗಿದೆ. ಇತರ ಕವಿಗಳಿಂದ ಚಿತ್ರಿಸಲ್ಪಟ್ಟ ಭರತನು ರತ್ನಾಕರನ ಕೃತಿಯಲ್ಲಿ ತನ್ನ ಕಾಳಿಕೆಯನ್ನು ಕಳೆದುಕೊಂಡು ಆದರ್ಶ ಚಕ್ರವರ್ತಿ, ಆದರ್ಶ ಸುತ, ಆದರ್ಶ ಸಹೋದರ, ಆದರ್ಶ ಜಿನಭಕ್ತ, ಆದರ್ಶಪತಿ, ಆದರ್ಶಪಿತನಂತೆ ಉಜ್ವಲವಾಗಿ ಚಿತ್ರಿಸಲ್ಪಟ್ಟಿದ್ದಾನೆ. ಭರತ ತಾನೇ ಜ್ಞಾನಹೊಂದಿದ ಭೋಗಿಯೂ ಯೋಗಿಯೂ ಆಗಿದ್ದಾನೆ. ಅವನ ಜೀವನದಲ್ಲೆಲ್ಲ ಭೋಗಯೋಗಗಳ ಸಮತೂಕ ಸ್ಪಷ್ಟವಾಗಿ ಕಂಡುಬರುತ್ತದೆ.

ಭರತನಲ್ಲಿ ಕಥಾನಾಯಕನ ಉದಾತ್ತತೆಯನ್ನು ಅಳವಡಿಸಿ ಅವನನ್ನೇ ಕಥಾನಾಯಕನನ್ನಾಗಿ ಮಾಡಿ ವಿಸ್ತಾರವಾಗಿ ಪ್ರತಿಪಾದಿಸಿರುವುದು ರತ್ನಾಕರನ ಒಂದು ಹಿರಿಮೆ. ಮೂಲಕತೆಯ ಮೂಲ ರೇಖೆಗಳನ್ನು ರತ್ನಾಕರನು ಬಳಸಿಕೊಂಡಿದ್ದರೂ ಕೆಲವು ವ್ಯತ್ಯಾಸಗಳನ್ನು ಮಾಡಿಕೊಂಡಿದ್ದಾನೆ. ಮೂಲಗಳಲ್ಲಿ ಕಥೆಯ ನಾಯಕಪಟ್ಟವು ಆದಿತೀರ್ಥಂಕರನಿಗೆ ಸಲ್ಲುವುದು.

ಭರತೇಶನು ಪ್ರಥಮ ಚಕ್ರಿಯೆಂದು ಭರತನ ಕಥೆಯನ್ನು ಆದಿತೀರ್ಥಂಕರನ ಕಥೆಯ ಅಂಗವಾಗಿ ತರುತ್ತಾರೆ. ಆದರೆ ರತ್ನಾಕರನ ಕಾವ್ಯವಾದ 'ಭರತೇಶ ವೈಭವವು ಹಾಗಲ್ಲ. ಭರತನ ಕಥೆಯನ್ನೇ ಪ್ರತ್ಯೇಕವಾಗಿ ತೆಗೆದುಕೊಂಡು ಯಾವ ಕವಿಯೂ ಪ್ರತಿಪಾದಿಸಿರಲಿಲ್ಲ. ಆ ಕೀರ್ತಿಯು ರತ್ನಾಕರನಿಗೆ ಸೇರಿದೆ. ಭರತನ ಪರಿಪೂರ್ಣ ವ್ಯಕ್ತಿಚಿತ್ರವನ್ನು 'ಭರತೇಶ ವೈಭವ'ದಲ್ಲಿ[೧೪] ಕಾಣುತ್ತೇವೆ.

ಮೂಲಕತೆಯ ಭರತನು ಪರಾಕ್ರಮಿಯಾದರೂ ಉದ್ಧಟತನದಿಂದ ವರ್ತಿಸುತ್ತಾನೆ. ಜಗತ್ತನ್ನೆಲ್ಲ ಗೆದ್ದು ಹಿಂತಿರುಗಿ ಬರುವಾಗ ತನ್ನ ರಾಜಧಾನಿ ಬಳಿ ಚಕ್ರರತ್ನವು ನಿಂತುಬಿಡಲು ಅದರ ಕಾರಣವನ್ನು ತಿಳಿದು, ತನ್ನ ತಮ್ಮಂದಿರೇ ತನ್ನ ವೈರಿಗಳೆಂದು ಬಗೆದು ಅವರ ಮೇಲೆ ಯುದ್ಧವನ್ನು ಸಾರುತ್ತಾನೆ. ಬಾಹುಬಲಿಯ ಹೊರತು ಉಳಿದವರೆಲ್ಲರೂ ರಾಜ್ಯದ ಆಸೆಯನ್ನು ತೊರೆದು ತಂದೆಯ ಬಳಿಹೋಗಿ ದೀಕ್ಷೆಯನ್ನು ಕೈಗೊಳ್ಳಲು, ಬಾಹುಬಲಿಯು ಕ್ಷಾತ್ರಧರ್ಮವನ್ನು ಕೈಗೊಂಡು ಭರತನನ್ನು ಎದುರಿಸುತ್ತಾನೆ. ಕೊನೆಗೆ ಧರ್ಮಯುದ್ಧದ ಒಪ್ಪಂದವಾಗಿ ಇಬ್ಬರಿಗೂ ದ್ವಂದ್ವಯುದ್ಧ ನಡೆದಾಗ ಭರತನು ಸೋತುಹೋಗುತ್ತಾನೆ. ಬಾಹುಬಲಿಯ ಸತ್ವ-ಪ್ರಭೆಯಲ್ಲಿ ಭರತನು ತೇಜೋಹೀನನಾಗುತ್ತಾನೆ. ಭರತನು ಅವಿವೇಕದಿಂದ ಬಾಹುಬಲಿಯ ಮೇಲೆ ಚಕ್ರವನ್ನು ಪ್ರಯೋಗಿಸಿ ತನ್ನ ಉದ್ಧಟತನದಿಂದ ಪ್ರೇಕ್ಷಕರ ಸಹಾನುಭೂತಿಯನ್ನು ಕಳೆದುಕೊಳ್ಳುತ್ತಾನೆ.

ಆದರೆ ರತ್ನಾಕರನ ಕೈಯಲ್ಲಿ ಭರತನ ಪಾತ್ರ ಮುಗಿಲನ್ನು ಮುಟ್ಟಿದೆ. ತ್ರಿಷಷ್ಟಿಶಲಾಕಾಪುರುಷರಲ್ಲಿ ಒಬ್ಬನಾಗಿ ಚರಮದೇಹಿಯಾದ ಭರತ ಹೀಗೆ ವರ್ತಿಸುವುದು ಕವಿಗೆ ಸರಿಹೋಗಲಿಲ್ಲ.[೧೪] ಭರತನೇ ಸಾಮೋಪಾಯದಿಂದ ತಮ್ಮಂದಿರನ್ನು ದಾರಿಗೆ ತರಲೆತ್ನಿಸಿದಾಗ ಅವರು ಉದ್ಧಟತನದಿಂದ ರಾಜ್ಯವನ್ನು ತೊರೆದು ದೀಕ್ಷೆಯನ್ನು ಕೈಗೊಳ್ಳುತ್ತಾನೆ. ಇದರಿಂದ ಭರತನು ವ್ಯಥೆಗೊಂಡು ಉಳಿದೊಬ್ಬ ಬಾಹುಬಲಿಯ ಕಡೆಗೆ ತನ್ನ ಮಿತ್ರನೊಬ್ಬನನ್ನು ಕಳುಹಿಸುತ್ತಾನೆ. ಆದರೆ ಬಾಹುಬಲಿಯು ತನ್ನ ಹಿರಿಯರ ಮತ್ತು ಮಿತ್ರರ ಮಾತುಗಳನ್ನು ಮೀರಿ ಯುದ್ಧಕ್ಕೆ ನಿಲ್ಲುತ್ತಾನೆ. ಯುದ್ಧ ಅನಿವಾರ್ಯವಾದಾಗಲೂ ಭರತನು ಬಾಹುಬಲಿಯನ್ನು ಸಾಮೋಪಾಯದಿಂದಲೇ ಗೆಲ್ಲಬೇಕೆಂದೆಣಿಸಿ ತನ್ನ ನುಡಿಜಾಣ್ಮೆಯಿಂದ ಭೂಮಿತೂಕದ ಮಾತುಗಳನ್ನಾಡಿ ಬಾಹುಬಲಿಯ ಮನಸ್ಸನ್ನು ತಿರುಗಿಸುತ್ತಾನೆ. ಯುದ್ಧವು ನಿಂತು ಬಾಹುಬಲಿಯು ಭರತನಲ್ಲಿ ದಯಾಭಿಕ್ಷೆಯನ್ನು ಬೇಡಿ ತಪಸ್ಸಿಗೆ ಹೋಗುತ್ತಾನೆ. ಬಾಹುಬಲಿಗೆ ಘೋರತಪಸ್ಸಿನಿಂದಲೂ ಕೇವಲಜ್ಞಾನೋತ್ಪತ್ತಿಯಾಗದ್ದನ್ನು ಕಂಡು ಭರತನು ಅವನಿಗೆ ದಿವ್ಯಜ್ಞಾನೋಪದೇಶದಿಂದ ಆತ್ಮಶುದ್ಧಿಯನ್ನು ದೊರಕಿಸಿಕೊಡುತ್ತಾನೆ. ಅನಂತರ ಭರತನು ಇನ್ನೂ ಅನೇಕ ಕಾಲ ವೈಭವದಿಂದ ರಾಜ್ಯವಾಳಿ ಒಂದುದಿನ ತನ್ನ ಕನ್ನಡಿಯಲ್ಲಿ ತನ್ನ ನೆರೆಗೂದಲಿನ ಪ್ರತಿಬಿಂಬವನ್ನು ಕಂಡು ವೈರಾಗ್ಯದಿಂದ ಮೋಕ್ಷಮಾರ್ಗಾವಲಂಬಿಯಾಗುತ್ತಾನೆ.

ರತ್ನಾಕರನಿಗೆ ಭರತ-ಬಾಹುಬಲಿಯರ ಯುದ್ಧಪ್ರಸಂಗವೇ ಅಸಹಜವೆಂದು ತೋರಿತು. ಅಹಿಂಸೆಯನ್ನೇ ಪ್ರತಿಪಾದಿಸುವ ಜೈನಮತದ ಭರತನು ಕೈನೀಡಿ ಉದ್ಧಟತನದಿಂದ ವರ್ತಿಸುವುದು ಅವನಿಗೆ ಸರಿತೋರಲಿಲ್ಲ. ಆದ್ದರಿಂದ ಯುದ್ಧವನ್ನು ನಿವಾರಿಸಿಯೇಬಿಟ್ಟಿದ್ದಾನೆ.

ಭೋಗಮೂಲವಾದ ಶೃಂಗಾರವನ್ನೂ ಯೋಗಮೂಲವಾದ ತ್ಯಾಗವನ್ನೂ ಪರಸ್ಪರ ವಿರುದ್ಧವಾಗದಂತೆ ಪ್ರದರ್ಶಿಸಿ, ಭೋಗ-ಯೋಗಗಳ ಸಮನ್ವಯ ತತ್ವವನ್ನು ಪ್ರತಿಪಾದಿಸುವುದೇ ರತ್ನಾಕರನ ಕಾವ್ಯಸಿದ್ಧಿ.[೧೫]

ಇಂತಹ ಸಿದ್ಧಿ ಕಾವ್ಯವನ್ನೂ, ಬೃಹತ್ಕಾವ್ಯವನ್ನೂ ತಹಶೀಲ್ದಾರರಾಗಿದ್ದ ಶ್ರೀ ಟಿ. ಎನ್. ಮಹದೇವಯ್ಯನವರು ಬಿಡುವು ಮಾಡಿಕೊಂಡು ಅಪಾರ ಪರಿಶ್ರಮವಹಿಸಿ ಸಂಗ್ರಹರೂಪದಲ್ಲಿ ಸಂಪಾದಿಸಿ ಎರಡು ಮಹಾಪ್ರಬಂಧಗಳನ್ನು ರಚಿಸಿರುವುದು ನಿಜಕ್ಕೂ ಶ್ಲಾಘನೀಯವಾದದ್ದು. ಹೀಗೆ ಸರ್ಕಾರಿ ವೃತ್ತಿಯಲ್ಲಿದ್ದು, ಸಾಹಿತ್ಯ ಸೃಷ್ಟಿಯನ್ನೇ ಪ್ರಧಾನವೃತ್ತಿಯನ್ನಾಗಿ ಮಾಡಿಕೊಂಡವರನ್ನೂ ನಾಚಿಸುವಂತೆ ಸಾಹಿತ್ಯಸೇವೆಯನ್ನು ಸಲ್ಲಿಸಿದವರು ಕನ್ನಡದಲ್ಲಿ ಬೆರಳೆಣಿಕೆಯಷ್ಟು ಮಂದಿ ಮಾತ್ರ. ಯಾವುದೇ ಒಂದು ಬೃಹತ್‌ಕೃತಿಯ ಮೇಲೆ ವಿಮರ್ಶಾಲೇಖನಗಳನ್ನು ಬರೆಯುವುದು ಸುಲಭ. ಅದನ್ನು ಆದ್ಯಂತ್ಯದಾಗಿ ಓದದೆ ಅಲ್ಲಿ ಇಲ್ಲಿ ಕಣ್ಣಾಡಿಸಿ ಏನೋ ಬರೆದುಬಿಡಬಹುದು. ಆದರೆ ಒಂದು ಕೃತಿಯನ್ನು ಸಂಪಾದಿಸುವುದೆಂದರೆ ಕಷ್ಟಕರವಾದದ್ದು. ಆಗ ಆದ್ಯಂತವಾಗಿ ಓದಲೇಬೇಕು. ಅದನ್ನು ಸಂಗ್ರಹರೂಪದಲ್ಲಿ ಸಂಪಾದಿಸುವುದೆಂದರೆ ಮತ್ತೂ ಕಷ್ಟಕರವಾದದ್ದು. ಆಗ ಆದ್ಯಂತವಾಗಿ ಬರಿ ಓದುವುದಷ್ಟೇ ಅಲ್ಲದೆ ಒಂದೊಂದು ಪದ್ಯವನ್ನೂ ವಿಮರ್ಶಿಸಿ, ತೂಗಿಸಿ ಆರಿಸಿಕೊಳ್ಳಬೇಕು. ಯಾವುದನ್ನು ತೆಗೆದುಕೊಳ್ಳಲಿ, ಯಾವುದನ್ನು ಬಿಡಲಿ ಎಂದು ಒದ್ದಾಡುವ ಪರಿಸ್ಥಿತಿಗೆ ಒಳಗಾಗಬೇಕು.

ಕೃತಿಯ ಪೂರ್ವಕಾಲದ ಸಂಕ್ಷಿಪ್ತ ಪರಿಚಯ ಮತ್ತು ಇದೇ ಕೃತಿಯ ಒಂದು ವಿಹಂಗಮ ನೋಟ 'ಮೊದಲ ನುಡಿ'ಯಲ್ಲಿ[೧೬] ಅಡಕವಾಗಿದೆ. ಅದರಲ್ಲೂ ಅದು ಕಾವ್ಯಮಯವಾಗಿ ಸೃಷ್ಟಿತವಾಗಿದೆ. ಇದಕ್ಕೆ "ರಗಳೆ ಹರಿಹರನಿಗ ಒಲಿದು ಬಂದಂತೆ, ತ್ರಿಪದಿ ಸರ್ವಜ್ಞನ ನಾಲಗೆಯಲ್ಲಿ ನಲಿದು ಕುಣಿದಂತೆ, ಗದ್ಯ ಮುದ್ದಣ್ಣನ ಮುದ್ದು ಶೈಲಿಯಲ್ಲಿ ಮನೋರಮೆಯಾದಂತೆ, ಸಾಂಗತ್ಯ ರಸಭಾವಗಳಿಂದ ಸಂಗೀತವಾಗಿ ರತ್ನಾಕರನ ಕಾವ್ಯವೀಣೆಯಲ್ಲಿ ಮಿಡಿಯಿತು" ಎಂಬ ಸಾಲುಗಳೇ ಸಾಕ್ಷಿಯಾಗಿವೆ.

ಕವಿಯ ಹೆಸರನ್ನು ಕುರಿತು ಜಿಜ್ಞಾಸೆ ನಡೆಸಿರುವುದು ಹೊಸದಾಗಿದೆ. 'ಯೋಗ ರತ್ನಾಕರ ಶಾಸ್ತ್ರಾಭ್ಯಾಸದಿಂ ದಶವಾಯುಗಳಂ ಸಾಧಿಸಿರ್ದು ರತ್ನಾಕರನೆಂಬಭಿಧಾನದಿಂದ' ಎಂಬ ಸಾಲಿನ ಆಧಾರದಿಂದ 'ರತ್ನಾಕರ' ಎಂಬ ಹೆಸರು ಅವನಿಗೆ ಅವನ ಜೀವನದ ಮಧ್ಯಭಾಗದಲ್ಲಿ ಬಂದಿರಬಹುದೆಂದು ಭಾಸವಾಗುತ್ತದೆ" ಎಂದು ಊಹಿಸಿರುವುದು ಬರಿ ಊಹೆಯಾಗಿರದೆ ಆಧಾರಸಹಿತ ಊಹೆಯಾಗಿದೆ. "ರತ್ನಾಕರ ಕ್ಷತ್ರಿಯ ವಂಶಜನಾದ ಜೈನಕವಿ"[೧೭] ಎಂಬ ಮಾತು ನಿರ್ವಿವಾದವಾಗಿದೆ.

"ರತ್ನಾಕರ ತಾರುಣ್ಯದಲ್ಲಿಯೇ ಕಾವ್ಯಾಲಂಕಾರ, ಲಕ್ಷಣಶಾಸ್ತ್ರ, ಯೋಗಾಭ್ಯಾಸಗಳಲ್ಲಿ ಪೂರ್ಣಪರಿಣಿತನಾಗಿದ್ದ"[೧೮] ಎಂಬ ಮಾತು ಅವನಿಗೆ ಹೊಂದುವಂತಿದೆ.

ತಮ್ಮ ನಿಜಜೀವನದಲ್ಲಿ ತಾವು ಅನುಭವಿಸಿದ ಅಥವಾ ತಾವು ನೋಡಿದ ಘಟನೆಗಳನ್ನು ಕವಿಗಳು ತಮ್ಮ ಕೃತಿಗಳಲ್ಲಿ ತಮಗೆ ಸರಿಹೊಂದುವ ರೀತಿಯಲ್ಲಿ ಅಳವಡಿಸಿಕೊಳ್ಳುವುದು ಸರ್ವೇಸಾಮಾನ್ಯವಾಗಿದೆ. ರನ್ನನ ಭಾರತದಲ್ಲಿ ದುರ್ಯೋಧನ ತನ್ನ ಮಗನ ಶವದ ಮುಂದೆ ಕುಳಿತು ಹೇಳುವ ಮಾತುಗಳು ರನ್ನ ತನ್ನ ನಿಜಜೀವನದಲ್ಲಿ ಅಂತಹ ಒಂದು ಸಂದರ್ಭದಲ್ಲಿ ಯಾರ ಬಾಯಿಂದಲೋ ಕೇಳಿದ ಮಾತುಗಳಾಗಿರಬಹುದು. ಹಾಗೆ ಇಲ್ಲಿಯೂ ಈ ಮಾತಿಗೆ ಹೊರತಾಗಿಲ್ಲ. ಅದನ್ನು ಶ್ರೀ ಟಿ. ಎನ್. ಮಹದೇವಯ್ಯನವರು ಗುರುತಿಸಿರುವುದನ್ನು ಕಾಣಬಹುದು. "ಭೋಗವಿಜಯದಲ್ಲಿನ ಕವಿ ದಿವಿಜಕಲಾಧರನ ಪಾತ್ರ ಭೂರುಹಕ್ಕೆ ಕವಿ ಸಲ್ಲಿಸುತ್ತಿರುವ ಕೃತಜ್ಞತೆಯ ಕಾಣಿಕೆಯಂತೆ ಕಾಣುವ ಈ ಶಬ್ದಚಿತ್ರದ ಹಿಂದೆ ಕವಿಗೆ ತನ್ನ ಜೀವಿತದ ಕಾಲದಲ್ಲಿ ನಿಜವಾಗಿ ದೊರೆತಿರಬಹುದಾದ ರಾಜಾಶ್ರಯ, ಗೌರವ, ಪ್ರಶಸ್ತಿಗಳ ವಿಸ್ತೃತ ಅನುಭವ ಅಡಕವಾಗಿದೆ. 'ಬಾರೈ ದಿವಿಜಕಲಾಧರ ಸುಕವಿ' ಎಂದು ಕರೆಯಿಸಿಕೊಳ್ಳುವ ಪ್ರೋತ್ಸಾಹಪೂರ್ಣ ಪ್ರೇಮ ಮತ್ತು ಆತ್ಮೀಯತೆಗೆ ಕವಿ ಭಾಗಿಯಾಗಿದ್ದಿರಬೇಕು."[೧೯]

ಒಟ್ಟಿನಲ್ಲಿ ಇಲ್ಲಿ ಉದ್ದಕ್ಕೂ ಕೃತಿಯನ್ನು ಆಧಾರವಾಗಿಟ್ಟುಕೊಂಡು ಅವನ ವೈಯಕ್ತಿಕ ಜೀವನದ ಎಳೆಯನ್ನು ಗುರುತಿಸುವ ಕ್ರಿಯೆಯ ಜೊತೆಗೆ ಕೃತಿಯ ಮೇಲೆ ಆಗಿರುವ ಕವಿಯ ವೈಯಕ್ತಿಕ ಜೀವನದ ಪ್ರಭಾವವನ್ನು ಗುರುತಿಸುವ ಕ್ರಿಯೆಯೂ ತಾನಾಗಿ ಸಾಗಿದೆ.

ಶ್ರೀ ಟಿ. ಎನ್. ಮಹದೇವಯ್ಯನವರು ಅನಾವಶ್ಯಕವಾಗಿ ಚರ್ಚೆಯನ್ನು ಬೆಳೆಸುವುದಿಲ್ಲ ಎಂಬುದಕ್ಕೆ ಕವಿಯ ಕಾಲ ವಿಚಾರದಲ್ಲಿ ಶ್ರೀ ಗೋವಿಂದ ಪೈರವರ ಅಭಿಪ್ರಾಯವನ್ನು ಒಪ್ಪಿಕೊಂಡು 'ಕವಿಯ

ಕಾಲನಿರ್ಣಯದ ವಿಚಾರವಾಗಿ ಹೆಚ್ಚು ತೊಡಕಿಲ್ಲವಾಗಿ ವ್ಯರ್ಥಚರ್ಚೆ ಅನಾವಶ್ಯಕ ಎಂದಿರುವುದೇ ಸಾಕ್ಷಿ.[೧೦] ಕವಿಯ ಸ್ಥಳವನ್ನು ವಿವೇಚಿಸುವಾಗಲೂ ಇದೇ ಕ್ರಮವನ್ನು ಅನುಸರಿಸಿದ್ದಾರೆ.

"ಭರತ-ಬಾಹುಬಲಿಗಳ ವೃತ್ತಾಂತವನ್ನು ಕುರಿತ ಹಿಂದಿನ ಕವಿ ಕೃತಿಗಳಲ್ಲೆಲ್ಲಾ ಬಾಹುಬಲಿಯದೇ ಉದಾತ್ತವಾದ ಪಾತ್ರ. ಭರತನನ್ನು ಧೀರೋದಾತ್ತ ಪಾತ್ರವನ್ನಾಗಿ ಚಿತ್ರಿಸಲು ಮಾಡಿದ ಮೊದಲ ಮತ್ತು ಕಡೆಯ ಪ್ರಯತ್ನವೇ ರತ್ನಾಕರನದು- ಭರತೇಶ ವೈಭವದಲ್ಲಿ" ಎಂಬ ಅಭಿಪ್ರಾಯ ಸತ್ಯವಾಗಿದೆ. "ಅವನ ಕಾಲದ ಅರಸರುಗಳಿಗೆ ನೀತಿ ಹೇಳುವ ಬಯಕೆಯಿಂದ ಕವಿ ಭರತನ ಆದರ್ಶವನ್ನು ಇಲ್ಲಿ ಚಿತ್ರಿಸಿದ್ದಾನೆ" ಎಂಬುದು ಕವಿಯ ಮುಖ್ಯ ಉದ್ದೇಶಗಳಲ್ಲಿ ಒಂದು ಎಂಬುದನ್ನು ನಾವು ಒಪ್ಪಬಹುದು. "ಎಲ್ಲಕ್ಕಿಂತ ಹೆಚ್ಚಾಗಿ ಕವಿಯೇ ಭರತನನ್ನು ಕುರಿತು 'ವ್ಯಕ್ತ ಭೋಗದೊಳಿರ್ದು ಕ್ಷಣಕೆ ಮುಕ್ತಿಗೆ ಸಂದ ಯುಕ್ತಿಗೆ ಎನ್ನೆದೆ ಸೂರೆ ಹೋಯ್ತು ಎಂದು ಅಭಿನಂದಿಸಿದ್ದಾನೆ."[೧೧] ಎಂಬುದು ಮೆಚ್ಚಲು ಯೋಗ್ಯವಾಗಿದ್ದು ಇಲ್ಲಿ ಉದ್ಧರಿಸಿರುವುದೂ ಯೋಗ್ಯವಾಗಿದ್ದು ಸಂದರ್ಭೋಚಿತವಾಗಿದೆ.

'ಭರತೇಶನಂ ತಾಳ್ದು ಧರೆಯ ಭರತೇಶ ಸಂದಂತೆ ಸಲ್ವರೆಂಬೆಡೆಗೆ ಸರ್ವರ ಮೋಕ್ಷಸಂಧಿ'[೧೨] ಈ ರೀತಿ ಭರತನ ಆದರ್ಶ ರತ್ನಾಕರನ ಲೇಖನಿಯಿಂದ ಮಾತ್ರ ಚಿತ್ರಿತವಾಗಿದೆ. ಕನ್ನಡ ಸಾಹಿತ್ಯದಲ್ಲಿ ಈ ದೃಷ್ಟಿಯಿಂದ ಭರತೇಶ ವೈಭವ ಏಕಮಾತ್ರಗ್ರಂಥ. ಉಳಿದೆಡೆಯಲ್ಲೆಲ್ಲಾ ಭರತ ರಾಜಸಿಕಪುರುಷ' ಪ್ರಲೋಭನೆಗಳ ಮೂರ್ತಿ. ಲೋಕಕ್ಕೆ ಸಾರಿಹೇಳುವ ನೀತಿಮಾರ್ಗ ಅವನ ನಡೆಯಲ್ಲಿ ಹೆಚ್ಚಿಲ್ಲ- ಎಂಬಲ್ಲಿ ರತ್ನಾಕರವರ್ಣಿಯ ಭರತನ ವ್ಯಕ್ತಿತ್ವದ ವೈಶಿಷ್ಟ್ಯವಿದೆ.

"ಭರತೇಶ ವೈಭವ"ದ ಭರತನ ಆದರ್ಶವನ್ನೇ ರತ್ನಾಕರಾಧೀಶ್ವರ ಶತಕದಲ್ಲೂ ವರ್ಣಿಸಿರುವುದರಿಂದ "ರತ್ನಾಕರಾಧೀಶ್ವರ ಶತಕವು ನಿರ್ವಿವಾದವಾಗಿ ರತ್ನಾಕರನ ಕೃತಿಯೆಂದು ಸಿದ್ಧವಾಗುತ್ತದೆ."[೧೩] ಶೋಭನ ಸಂಧಿಗಳಲ್ಲಿನ ಛಂದಸ್ಸು ತ್ರಿಪದಿಯದು; ಭರತೇಶ ವೈಭವದ್ದು ಸಾಂಗತ್ಯ." ಮುಂತಾದ ಕಾರಣಗಳನ್ನು ಸೂಚಿಸಿ 'ಭರತೇಶ ವೈಭವದ ಶೋಭನ ಸಂಧಿಗಳು' ರತ್ನಾಕರಕೃತ ಸ್ವತಂತ್ರ ಕೃತಿಯೆಂದು ಪರಿಗಣಿಸುವುದು ಯೋಗ್ಯವೆಂದು ತೋರುತ್ತದೆ." "ಶೋಭನ ಸಂಧಿಗಳಲ್ಲಿ ಶಬ್ದಶೈಥಿಲ್ಯವಿದೆ. ದೋಷಗಳೂ ಹೆಚ್ಚು. ಅದು ಕವಿಯ ಪ್ರತ್ಯೇಕ ಪ್ರಥಮ ಕೃತಿಯೆಂದು ಭಾವಿಸಲು ಯೋಗ್ಯವಾಗಿದೆ." "ಭರತೇಶ ವೈಭವದಲ್ಲಿನ ಕಥಾಪ್ರಾರಂಭ ಸನ್ನಿವೇಶಕ್ಕೆ ಶೋಭನಸಂಧಿಯ ಅಂತ್ಯಭಾಗ ಹೊಂದಿಕೊಳ್ಳುವುದಿಲ್ಲ" ಶೋಭನಸಂಧಿಗಳಲ್ಲಿ ಬರುವ ಪ್ರಥಮ ಮಂಗಲ ಕಲ್ಯಾಣವನ್ನು ಕವಿಸೂಚನೆಯಂತೆ ಒಂದು ಕಲ್ಯಾಣವೆಂದೇ ಸ್ವೀಕರಿಸಿದರೆ ಭರತ ಚಕ್ರಿಣೆ ಪಂಚಕಲ್ಯಾಣಕ್ಕೆ ಬದಲಾಗಿ ಷಟ್ಕಲ್ಯಾಣಗಳನ್ನು ಮಾಡಿಸಬೇಕಾಗುತ್ತದೆ. ಇದು ಅಶಾಸ್ತ್ರೀಯವಲ್ಲದೆ ಕವಿಯ ಧ್ಯೇಯಕ್ಕೂ ಭಂಗತರುವ ವಿಷಯವಾದುದರಿಂದ ಶೋಭನಸಂಧಿಗಳ ವಿಭಾಗವನ್ನು ಸ್ವತಂತ್ರ ಕೃತಿಯೆಂದು ಭಾವಿಸುವುದು ಅತ್ಯವಶ್ಯಕ." "ಆದುದರಿಂದ ಕವಿಯ ಕೃತಿಗಳ ಪರಿವಿಡಿಯನ್ನು ಭರತೇಶ ವೈಭವದ ಶೋಭನಸಂಧಿಗಳು, ಭರತೇಶ ವೈಭವ, ರತ್ನಾಕರಾಧೀಶ್ವರ ಶತಕ, ಅಪರಾಜಿತೇಶ್ವರಶತಕ, ತ್ರಿಲೋಕಶತಕ

ಮತ್ತು ೨೦೦೦ ಗ್ರಂಥ ಪರಿಮಿತಿಯ ಆಧ್ಯಾತ್ಮ ಗೀತೆಗಳು ಎಂದು ಭಾವಿಸುವುದು ನ್ಯಾಯಸಮ್ಮತವಾಗಿದೆ."[೨೪] ಈ ಅಭಿಪ್ರಾಯಗಳೆಲ್ಲ ಯಾವ ಪೂರ್ವಾಗ್ರಹಪೀಡಿತವಾಗಿಲ್ಲದೆ ನ್ಯಾಯಸಮ್ಮತವಾಗಿವೆ.

'ಪುರಾಣೋಕ್ತ ಭರತ ಪ್ರಸಂಗ' 'ಭರತೇಶ ವೈಭವದ ಕಥಾಸಾರ' 'ಕವಿರತ್ನಾಕರನ ಮಾರ್ಪಾಟುಗಳು' 'ಭರತೇಶ ವೈಭವದ ವಿಮರ್ಶೆ' 'ರತ್ನಾಕರನ ಪಾತ್ರರಚನಾ ಕೌಶಲ್ಯ' 'ಕವಿ ರತ್ನಾಕರನ ವರ್ಣನಾ ಸಾಮರ್ಥ್ಯ' 'ರತ್ನಾಕರನ ಶೈಲಿ'[೨೫] ಇವು ಒಂದೊಂದೂ ಸಾಕಷ್ಟು ದೀರ್ಘವಾಗಿಯೇ ಬಂದಿರುವುದರಿಂದ ಕವಿ ಹಾಗೂ 'ಭರತೇಶ ವೈಭವ'ವನ್ನು ಪರಿಚಯ ಮಾಡಿಕೊಳ್ಳಬಯಸುವವರಿಗೆ, ಈ ಕವಿ ಹಾಗೂ ಈ ಕೃತಿಗಳ ಮೇಲೆ ಹೆಚ್ಚು ವಿಚಾರ ಮಾಡಬಯಸುವ ವಿದ್ವಾಂಸರಿಗೆ ಮತ್ತು ಇವರಿಗಿಂತ ಹೆಚ್ಚಾಗಿ ವಿದ್ಯಾರ್ಥಿಗಳಿಗೆ ಇದು ಬಹು ಉಪಯುಕ್ತವಾದ ಗ್ರಂಥವಾಗಿದೆ.

"ಕಬ್ಬಿಗರು ಓದುಗಬ್ಬವ ಹಾಡುಗಬ್ಬವ ಕಬ್ಬದೊಳು ಬರೆವರಿವ ಎರಡು ಕಬ್ಬಿನಂತಿರಬೇಕು ಬಿದಿರಂತೆ ರಚಿಸಲೇಕೆ ಅಬ್ಬೆ ಹೇಳು ಎಲೆ ಸರಸ್ವತಿಯೇ"[೨೬] ಎಂಬ ರಸಪಕ್ಷಪಾತವೇ ಕಾವ್ಯರಚನೆಯಲ್ಲಿ ಕವಿಗಿರುವ ಧೋರಣೆ. 'ವಾಕ್ಯಂ ರಸಾತ್ಮಕಂ ಕಾವ್ಯಂ" ಎಂಬ ಸೂತ್ರವನ್ನು ಕವಿ ಈ ದೃಷ್ಟಿಯಿಂದಲಾದರೂ ನಂಬಿ ನಿಷ್ಠಾಪೂರ್ಣವಾಗಿ ಕಾವ್ಯ ನಡೆಯಿಸಿದ್ದಾನೆ"[೨೭] ಎಂಬ ಅಭಿಪ್ರಾಯವನ್ನೇ 'ಭರತೇಶ ವೈಭವದ ವಿಮರ್ಶೆ'ಯ ಮೊದಲಲ್ಲೇ ಮಂಡಿಸಿದ್ದಾರೆ.

"ಭೋಗಯೋಗಗಳನ್ನು ಸಮನ್ವಯಗೊಳಿಸಿ ಸಮರಸಭಾವದಿಂದ ಜೀವನದ ಔನ್ನತ್ಯ ಚಿತ್ರಿಸುವುದೇ ಕವಿಯ ಧ್ಯೇಯ . ನಿರ್ಲಿಪ್ತವಾಗಿ ಎಲ್ಲ ಸುಖಗಳನ್ನೂ ಸಂಪೂರ್ಣವಾಗಿ ಅನುಭವಿಸುತ್ತಾನೆ. ಸಂಸಾರದಲ್ಲಿ ಜಿಹಾಸೆ ಸೂಚಿಸುವುದಿಲ್ಲ. ವ್ಯಾಮೋಹ ಕ್ಷಣಭಂಗುರವೆಂದು ಸನ್ಯಾಸ ಸ್ವೀಕರಿಸುವುದಿಲ್ಲ. ವಿರಕ್ತಿಗೆ ಆತುರವಿಲ್ಲ. ಭೋಗದಲ್ಲಿ ಕಾತರವಿಲ್ಲ. ಹದವರಿತ ಈ ಸಮ್ಮಿಶ್ರಣವೇ ಭರತನ ಜೀವನದ ರಹಸ್ಯ". ಹೀಗೆ "ಭರತೇಶ ವೈಭವ"[೨೮] ಮಹಾಕಾವ್ಯದ ಕಥಾನಾಯಕನ ಜೀವನಸಾರವನ್ನು ಸಂಕ್ಷಿಪ್ತವಾಗಿ ಹೇಳಿದ್ದರೂ ಸಮಗ್ರವಾಗಿದ್ದಂತಿದೆ.

ಕವಿಯು ಸೃಷ್ಟಿಸಿರುವ ಅನಂತ ಸ್ತ್ರೀಪಾತ್ರಗಳಲ್ಲಿ ಕೆಲವನ್ನು ಮಾತ್ರ ಮುಂದಿಡುತ್ತಾನೆ. ಈ ಕೆಲವು ಪಾತ್ರಗಳನ್ನು ವಿಮರ್ಶಕರು ಒಂದೊಂದು ಮಾತಿನಲ್ಲಿ ಓದುಗರಿಗೆ ಇಲ್ಲಿ ಪರಿಚಯ ಮಾಡಿಕೊಟ್ಟಿದ್ದಾರೆ. ಆ ಒಂದೊಂದು ಮಾತಿನಲ್ಲೇ ಸಮಗ್ರ ಪಾತ್ರದ ಸಾರ ಅಡಕವಾಗಿದೆ: "ಅಮರಾಜಿ, ಸುಮನಾಜಿಯರು ಉದಾತ್ತ ಸಂಸ್ಕೃತಿಯ ಉನ್ನತ ಪಾತ್ರಗಳು ಕುಸುಮಾಜಿ ಭರತನ ಹೃದಯೇಶ್ವರಿಯಾಗಿ ಅವನ ಪ್ರಣಯ ಸರಸ ಸಂಗೀತ ಗೋಷ್ಠಿಗಳಲ್ಲಿ ತಾನೇ ತಾನಾಗಿ ಮೈದುಂಬಿ ನಿಲ್ಲುತ್ತಾಳೆ."[೨೯]

"ಮಕರಂದೆಯ ಪಾತ್ರ ಕವಿಯ ದೈವದತ್ತ ಪ್ರತಿಭೆಗೆ ಸಾಕ್ಷೀಭೂತವಾಗಿದೆ. ಅದೆಂತಹ ರಸ ವೈವಿಧ್ಯದಿಂದ, ಅತಿಸಹಜ ಸನ್ನಿವೇಶಗಳಿಂದ ಆ ಪಾತ್ರ ಸೃಷ್ಟಿಯಾಗಿದೆಯೆಂಬುದನ್ನು ಸೂಚಿಸಿದರೆ ಉತ್ಪ್ರೇಕ್ಷೆಯ ದೋಷಕ್ಕೆ ಯಾರೂ ಭಾಗಿಯಾಗಲಾರರು. ಕನ್ನಡ ಸಾಹಿತ್ಯದಲ್ಲಿ ಅಂತಹ ಅತಿ ನವೀನವಾದ ಸ್ತ್ರೀಪಾತ್ರ ಅತಿ ವಿರಳ, ಸನ್ನಿವೇಶವಂತೂ ನಾಟಕೀಯವಾಗಿದೆ. ಈ ಸ್ತ್ರೀ ಪಾತ್ರದ ಸಂಭಾಷಣೆ, ಸರಸ ಸಲ್ಲಾಪಗಳಲ್ಲಿ ಕವಿ ಅತಿ

ಸುಸುವಾದ ಕುಸುರಿನ ಕೈವಾಡ ನಡೆಯಿಸಿ, ಸುಂದರ ಶಬ್ದಗಳಿಂದೇರ್ಪಡಿಸಿದ ಸಂಭಾಷಣೆಯಲ್ಲಿ ಒಂದು ಏಕಾಂತ ಪ್ರಹಸನವನ್ನೇ ರಚಿಸಿದ್ದಾನೆ"[೨೦] ಎಂಬಲ್ಲಿ ಕವಿಯ ದೈವದತ್ತವಾದ ಪ್ರತಿಭೆಯನ್ನು ಗುರುತಿಸಿದಂತಾಗಿದೆ. ಮುಂದೆ ಬರುವ ಭರತ-ಮಕರಂದೆಯರ ಸಂಭಾಷಣೆಯ ಭಾಗ ಸಾಕಷ್ಟು ದೀರ್ಘವಾಗಿಯೇ ಇದ್ದು, ಸ್ವಂತ ಸೃಷ್ಟಿಕಾರ್ಯವೇನೋ ಎಂದು ಅನಿಸಿ ಒಂದು ಏಕಾಂಕ ಪ್ರಹಸನವೇ ಆಗಿಬಿಟ್ಟಿದೆ.

"ಮಕರಂದೆ, ಸುಮನಾಜಿ, ಅಮರಾಜಿ, ಕುಸುಮಾಜಿ, ಪಂಡಿತೆಯರ ಪಾತ್ರಗಳು ಕಥೆಯ ಮುನ್ನಡೆಯಲ್ಲಿ ಅದೇಕೋ ಕವಿಯ ಅನಾದರಕೆ ಪಾತ್ರವಾಗಿ ಮಾಯವಾಗಿಬಿಡುತ್ತವೆ." ಇಲ್ಲಿ ಕವಿಯ ಒಂದು ಲೋಪದ ಮೇಲೆ ಬೆಳಕನ್ನು ಚೆಲ್ಲಲಾಗಿದೆ. "ಆದರೂ ಸುಭದ್ರೆ, ಕಾಳಿಂದಿ, ಭಂಡಾರವತಿಯರಾಗಿ ಹೊಸವೇಷ, ಹೊಸಕಾಂತಿ ಕಳೆಗಳಿಂದ ದಿಗ್ವಿಜಯದ ಬಾಗಿಲಿನಿಂದ ಕಾವ್ಯರಂಗ ಪ್ರವೇಶಿಸುತ್ತವೆ. ಅಲ್ಲೂ ಇದೇ ಚರ್ವಿತ ಚರ್ವಣ ಎಂದು ಹೇಳಿರುವಂತಿದೆ. ಭರತನ ದಿಗ್ವಿಜಯ ವೃತ್ತಾಂತದಲ್ಲಿ ಕಥೆ ಎಂದಿನಂತೆ ಸಂಪ್ರದಾಯ ಮಾರ್ಗಕ್ಕೆ ಹೊರಳುತ್ತದೆ"[೨೧] ಎಂಬ ಮಾತು ಇದು ನಿಷ್ಪಕ್ಷಪಾತ ವಿಮರ್ಶೆಯೆನ್ನುವುದಕ್ಕೆ ಸಾಕ್ಷಿಯಾಗಿದೆ.

"ರತ್ನಾಕರನು ನಾಟ್ಯಗೀತೆಗಳ ಪ್ರದರ್ಶನವೇರ್ಪಡಿಸಿದಾಗಲೆಲ್ಲಾ ಪಾತ್ರಗಳಿಗೂ ಶ್ರಾವಕರಿಗೂ ನಿಕಟವಾದ ಆಂತರಿಕ ಸಂಬಂಧವೊಂದನ್ನು ಏರ್ಪಡಿಸಿ ಕಲೆಯ ಅವಿರಳ ಆನಂದದಲ್ಲಿ ಇರ್ವರೂ ಸಮಾನ ಭಾವಗಳಿಂದ ತನ್ಮಯರಾಗುವಂತೆ ಮಾಡುತ್ತಾನೆ... ರಾಯ ಅದರ (ವೀಣೆಯ) ತಾನತಾನಕ್ಕೂ ಹಿಗ್ಗಿ ಮೈಮರೆಯುತ್ತಾನೆ. ಪತಿಯ ತನ್ಮಯತೆಯನ್ನು ಕಂಡು ಕುಸುಮಾಜಿಯೂ ಹಿಗ್ಗಿ ಅರಳಿ ಹೂವಾಗುತ್ತಾಳೆ. ಇನ್ನೂ ಉತ್ಸಾಹದಿಂದ ಹಾಡುತ್ತಾಳೆ....." ಇಲ್ಲಿ ಕವಿಯ ಒಂದು ಉತ್ತಮ ಪ್ರತಿಭೆಯನ್ನು ಗುರುತಿಸಿರುವುದು ಗಮನಾರ್ಹ. "ರತ್ನಾಕರನ ನುಸುವಾದ ಕುಸುರಿನ ಕೆಲಸ ಈ ಗಂಗೆಯರ ಪಾತ್ರ ಸೃಷ್ಟಿಯಲ್ಲೂ ನಡೆದಿದೆ ಅಜ್ಞಾತ ಹಿಮಶಿಖರವೊಂದರಲ್ಲಿ ಹುಟ್ಟಿ, ಕಠಿಣ ಶಿಲಾತಲದಲ್ಲಿ ಯಾಂತ್ರಿಕವಾಗಿ ಹರಿದು ಕಡಲತ್ತ ಸಾರುವ ಜಲರಾಶಿಗಳೆರಡೂ ಪ್ರಾಣಶಕ್ತಿ ತಾಳ್ದು ಜೀವಪುತ್ಥಳಿಗಳಾಗಿ ಅಣ್ಣ ಅತ್ತಿಗೆಯರ ಬೆನ್ನು ಹಿಂದೆ ತಾಯೊಲವನ್ನರಸುತ್ತಾ ಸುಳಿದಾಡುವ ಈ ಜೀವನದ ಚಿತ್ರ ಕವಿಯ ದೈವದತ್ತ ಪ್ರತಿಭೆಗೆ ಒಂದು ಅದ್ಭುತ ಸಾಕ್ಷಿ. ಕಾಳಿದಾಸಕವಿಯ ಶಾಕುಂತಲದಲ್ಲಿ ಬರುವ ಮಾಲಿನೀ, ವನಜ್ಯೋತ್ಸ್ನಾ, ದೀರ್ಘಾಪಾಂಗಗಳಿಗಿಂತ ಹೆಚ್ಚು ಸಜೀವವಾಗಿ ಶಕುಂತಳೆಯ ವಿರಹಕ್ಕಾಗಿ ಕಂಬನಿಗರೆವ ಗಿಡಮರಗಳಂತೆ ಸಿಂಧು ಗಂಗಾದೇವಿಯರು ರತ್ನಾಕರನ ರಾಜ್ಯೋದ್ಯಾನದಲ್ಲಿ ಸುಳಿದು ಸಂಚರಿಸುತ್ತಾರೆ"[೨೨] ಎನ್ನುವಲ್ಲಿ ಕವಿ ರತ್ನಾಕರವರ್ಣಿಗೆ ತೃಪ್ತಿದಾಯಕ ನ್ಯಾಯ ದೊರೆತಂತಾಗಿದೆ.

ಶಾಸನವೊಂದನ್ನು ಅಳಿಸಿದಾಗ ಅಡ್ಡಿ ಬಂದ ಶಾಸನದೇವತೆಗಳನ್ನು ಶಿಕ್ಷಿಸುವುದು ಭರತನ ಪಾತ್ರೋನ್ನತಿಗೆ ಹೊಂದಿಕೊಳ್ಳದ ಘಟನೆ ಎಂದಿರುವ ಟಿ. ಎನ್. ಮಹದೇವಯ್ಯನವರ ಅಭಿಪ್ರಾಯ ವಿವೇಚನೆಯಿಂದ ಕೂಡಿದುದಾಗಿದೆ. "ದಿಗ್ವಿಜಯ ಕಾಲದಲ್ಲಿ ರಣದುಂದುಭಿಯ ನಿನದಕ್ಕಿಂತ ಪಾಳಯದಲ್ಲಿ ಮಂಗಳವಾದ್ಯಗಳ ಮಹೋತ್ಸವವೇ ಹೆಚ್ಚಾಗಿ ಭೋರ್ಗರೆಯುತ್ತದೆ"[೨೩] ಎಂಬ ಮಾತು ರತ್ನಾಕರನು ರಣದುಂದುಭಿಯ ವರ್ಣನೆಯಲ್ಲಿ ಸ್ವಲ್ಪ ಪ್ರಮಾಣದಲ್ಲಿ ಅಬಲನೆಂಬುದನ್ನು ಸೂಚಿಸುವುದಲ್ಲದೆ ಎಷ್ಟು ಕಲಾತ್ಮಕವಾಗಿ ಬಂದಿದೆಯೆಂಬುದು ಗಮನಾರ್ಹ.

ರತ್ನಾಕರನ ಈ ನೂತನವಾದ ಮಾರ್ಪಾಟು ಪೂರ್ಣವಾಗಿ ಯಶಸ್ವಿಯಾಗಿ ಕವಿಯ ಧರ್ಮಪ್ರಿಯ ಸೌಕುಮಾರ್ಯ ಸ್ವಭಾವಕ್ಕೆ ಸ್ಮಾರಕವಾಗಿ ನಿಂತಿದೆ"[೩೪] ಎಂಬ ಮಾತು ಮತ್ತು ಬಾಹುಬಲಿ ವೈರಾಗ್ಯ ಸ್ವೀಕರಿಸಿ ಗಮಿಸಿದ ನಂತರ ಕಥೆಯ ಜೀವನಾಡಿಯೇ ನಿಂತುಹೋಗುತ್ತದೆ. ಎಂಬ ಮಾತು ಲೋಪದೋಷಗಳಿರುವಲ್ಲಿ ನಿರ್ದಾಕ್ಷಿಣ್ಯವಾಗಿ ಲೋಪದೋಷಗಳಿವೆಯೆಂದೂ ಗುಣಗಳಿರುವಲ್ಲಿ ನಿರ್ಮತ್ಸರವಾಗಿ ಈ ಗುಣಗಳಿವೆಯೆಂದೂ ಹೇಳುವುದು ಟಿ. ಎನ್. ಮಹದೇವಯ್ಯನವರ ಒಂದು ಪ್ರಧಾನ ಗುಣವೆಂಬುದನ್ನು ಎತ್ತಿ ತೋರಿಸುತ್ತವೆ. 'ಭರತೇಶ ವೈಭವ' ಜೈನರಿಗೆ ಒಂದು ಪೂಜಾಯೋಗ್ಯವಾದ ಗ್ರಂಥವಾಗಿರಲು ಮುಖ್ಯ ಕಾರಣ ಯಾವುದೆಂಬುದನ್ನು ಟಿ.ಎನ್. ಮಹದೇವಯ್ಯನವರು ಇಲ್ಲಿ ಕಂಡುಕೊಂಡಿದ್ದಾರೆ.

ಕಥಾನಾಯಕ ಭರತನಿಂದ ಹಿಡಿದು ಕುಸುಮಾಜಿ, ಪಂಡಿತೆ, ಯಶಸ್ವತೀದೇವಿಯವರೆಗೂ ಪಾತ್ರ ವಿವೇಚನೆ, ಕವಿ ರತ್ನಾಕರನ ವರ್ಣನಾಸಾಮರ್ಥ್ಯ ಸಾಕಷ್ಟು ದೀರ್ಘವಾಗಿಯೇ ಬಂದಿವೆ. "ವರ್ಣನಾ ಸಾಮರ್ಥ್ಯ"[೩೫] ಭಾಗದಲ್ಲಿ ಅವಶ್ಯಕತೆಗೆ ತಕ್ಕಂತೆ, ಉದ್ಧರಿಸಲು ಯೋಗ್ಯವಾದ, ಪದ್ಯಭಾಗಗಳು ಉದ್ಧರಿತವಾಗಿವೆ. ಈ ಭಾಗಗಳು ವಿದ್ಯಾರ್ಥಿಗಳಿಗೆ ತುಂಬ ಉಪಯೋಗಕರ ಭಾಗಗಳಾಗಿವೆ.

ರತ್ನಾಕರನ ಪಾತ್ರರಚನಾಕೌಶಲ್ಯ ಹೇಳುತ್ತ ರತ್ನಾಕರನ ಪಾತ್ರಗಳ ಸ್ವರೂಪವನ್ನು ಕವಿಯ ಮಾತುಗಳಿಂದಲೇ ಹೇಳಿದ್ದಾರೆ. "ಗಿಳಿಯನೋದಿಸುವಂತೆ, ವೀಣೆಯ ನುಡಿಸುವಂತೆ, ಒಲಿದು ಪಾತ್ರವನಾಡುವಂತೆ" ಅವನು ಕಡೆದಿಟ್ಟಿರುವ ಪ್ರತಿಮಾಮೂರ್ತಿಯೂ ಅದೆಷ್ಟು ಸಜೀವವಾಗಿ ಮೂಡಿ ಬಂದಿದೆಯೆಂಬುದನ್ನು ನೋಡಿ ಅಚ್ಚರಿಪಡದೆ ಗತ್ಯಂತರವಿಲ್ಲ".[೩೬]

ಯಾವುದೇ ಕವಿ ಲಲಿತಶೈಲಿಯಲ್ಲಿ ಗ್ರಂಥ ರಚಿಸಿದ್ದರೆ ಇವನು ಗಂಭೀರ ಶೈಲಿಯಲ್ಲಿ ರಚಿಸಲು ಅಶಕ್ತನಿರಬಹುದು ಆದ್ದರಿಂದ ಲಲಿತಶೈಲಿಯಲ್ಲಿ ರಚಿಸಿದ್ದಾನೆ. ಎಂದೂ ಗಂಭೀರ ಶೈಲಿಯಲ್ಲಿ ರಚಿಸಿದ್ದರೆ ಲಲಿತ ಶೈಲಿಯಲ್ಲಿ ಅಶಕ್ತನಿರಬಹುದು ಎಂದೂ ಊಹಿಸುವುದು ಸರ್ವೇಸಾಮಾನ್ಯವಾಗಿದೆ. ಆದರೆ ಟಿ. ಎನ್. ಮಹದೇವಯ್ಯನವರು ಇಲ್ಲಿ ಹಾಗೆ ಮಾಡಿಲ್ಲ; "ಕವಿ ರತ್ನಾಕರನ ಶೈಲಿ ಲಲಿತವಾದುದು, 'ಬಲ ರಸಾಲ ನವಪಲ್ಲವ' ದಂತೆ ಕೋಮಲ ಮತ್ತು ಸೌಕುಮಾರ್ಯಭಾವಗಳಿಗೆ ಸಜ್ಜಿತವಾದುದು. ಕವಿ ಮನಸ್ಸು ಮಾಡಿದರೆ ಧೀರ ಗಂಭೀರ ಶೈಲಿಯಲ್ಲೂ ಬರೆಯಬಲ್ಲ" ಎಂದು ಹೇಳಿ ಗಂಭೀರ ಶೈಲಿಯಲ್ಲಿ ಏಕೆ ಬರೆಯಲಿಲ್ಲವೆಂಬುದಕ್ಕೆ ಆದರೆ "ಮನದೊಲವು ಮಾತ್ರ ಲಲಿತ ಭವಗಳತ್ತ"[೩೭] ಎಂದು ಸಮಾಧಾನವನ್ನು ಕಂಡುಕೊಂಡಿದ್ದಾರೆ. ಉಳಿದ ಕಡೆಯಂತೆ ಈ ಶೈಲಿಯ ಭಾಗದಲ್ಲೂ ಬರಿಯ ಕವಿಯ ಸ್ತುತ್ಯವೇ ಇಲ್ಲ, ಅವನ ದುರ್ಬಲತ್ವದ ಬಗ್ಗೆಯೂ ಒಂದು ಗಮನಾರ್ಹವಾದ ಮಾತಿದೆ;

"ಸಾಂಗತ್ಯದ ಮೂರು ಪಾದಗಳನ್ನೂ ನಿರಾಯಾಸವಾಗಿ ನೈಸರ್ಗಿಕವಾದ ಕಾವ್ಯಧಾರೆಯಿಂದ ತುಂಬಿಬಿಡುತ್ತಾನೆ. ನಾಲ್ಕನೆಯ ಪದ ಅನೇಕ ವೇಳೆ ಅವನ ಮನದೊಲವಿನಂತೆ ಹರಿದರೂ ಕೆಲವು ವೇಳೆ ಬಗ್ಗದೆ ಮೊಂಡುತನ ಮಾಡುತ್ತದೆ. ಒಟ್ಟಿನಲ್ಲಿ ರತ್ನಾಕರನಿಗೆ ಸಾಂಗತ್ಯದ ಶೈಲಿ ಚೆನ್ನಾಗಿ ಒಲಿದು ಬಂದಿದೆ."

ದೈವದತ್ತವಾದ ಪ್ರತಿಭೆಯೊಂದಿಗೆ ನೈಸರ್ಗಿಕವಾದ ಸರಳ ಶೈಲಿಯಲ್ಲಿ ಕಾವ್ಯ ರತ್ನವೊಂದನ್ನು ಕಡೆದಿದ್ದಾನೆ." ಎಂಬ ಮಾತು ಅವನ ಕಾವ್ಯಕ್ಕೆ ಹಿಡಿದ ಸೊಡರಿನಂತಿದೆ. "ಅನಂತ ಆಧ್ಯಾತ್ಮ ಕ ತತ್ವಗಳನ್ನು ಬಹು ತಿಳಿಯಾದ ನುಡಿಗಳಲ್ಲಿ ಬಿಡಿಸಿ ಬರೆದಿದ್ದಾನೆ." ಎಂಬ ಮಾತು ಬಹುಸತ್ಯವೆಂದು ಸಾಧಿಸುವುದಕ್ಕಾಗಿಯೇ "ತನುವೆ ಜಿನಾಲಯ, ಮನವೆ ಸಿಂಹಾಸನ, ಅನುಪಮಾತ್ಮನೆ ಜಿನ"[೩೮] ಎಂಬ ಪದ್ಯವನ್ನು ಕವಿ ರಚಿಸಿದಂತಿದೆ.

ಶ್ರೀ ಟಿ. ಎನ್. ಮಹದೇವಯ್ಯನವರು 'ಭರತೇಶ ವೈಭವ'ವನ್ನು ಎಷ್ಟು ಆಳವಾಗಿ ಅಭ್ಯಾಸ ಮಾಡಿದ್ದರೆಂಬುದಕ್ಕೆ 'ಗಳಗಳ ಗುಳಗುಳ ನಲಿವುತ ಹರಿವ ತಣ್ಣೊಳೆಯಂತೆ' ಹರಿದರು, ಇಲ್ಲಿ ಬಳಸಿರುವ ಪ್ರತಿಯೊಂದು ಪದದಲ್ಲೂ ತಿಳಿನೀರ ಝರಿಯೊಂದು ಕಲನಾದ ಮಾಡುತ್ತಾ ಚಲಿಸುವುದನ್ನು ಧ್ವನಿಪೂರ್ಣವಾಗಿ ಕಿವಿಗೆ ಕೇಳಿಸಿದಂತೆ ಚಿತ್ರಿಸಿದೆ. ಕಿವಿಯಮೇಲೆ ಬೀಳುವ ಪ್ರತಿ ಶಬ್ದವೂ ನೀರು ಹರಿಯುತ್ತಿದೆಯೆಂಬಂತೆ "ಗಳಗಳ ಗುಳಗುಳ" ಎಂದು ಕೇಳಿಬರುತ್ತದೆ"[೩೯] ಇಂತಹ ಒಂದೊಂದು ಚಿಕ್ಕ ಚಿಕ್ಕ ವಿಷಯಗಳೂ ಸಾಕ್ಷಿಯಾಗಿವೆ.

ರತ್ನಾಕರನು ನಾಟ್ಯಗೀತೆಗಳ ಪ್ರದರ್ಶನವೇರ್ಪಡಿಸಿದಾಗಲೆಲ್ಲಾ ಪಾತ್ರಗಳಿಗೂ ಶ್ರಾವಕರಿಗೂ ನಿಕಟವಾದ ಅಂತರಿಕ ಸಂಬಂಧವೊಂದನ್ನು ಏರ್ಪಡಿಸಿ ಕಲೆಯ ಅವಿರಳ ಆನಂದದಲ್ಲಿ ಇರ್ವರೂ ಸಮಾನ ಭಾವಗಳಿಂದ ತನ್ಮಯರಾಗುವಂತೆ ಮಾಡುತ್ತಾನೆ. ನಾಟ್ಯದರ್ಶನದಲ್ಲಿ ಕವಿ ಸಾಲಂಕೃತ ರಂಗಮಂಟಪವನ್ನೇ ಸಂಸಿದ್ಧಗೊಳಿಸಿ ಕಣ್ಮುಂದೆ ನಿಲ್ಲಿಸುತ್ತಾನೆ. ಧರೆಗೆ ವಿಸ್ಮಯವಾದ 'ಅಕಳಂಕಚಂದ್ರಲೋಕವೋ ಎನೆ' ಮೆರದ ನಾಟಕಶಾಲೆಯಲ್ಲಿ 'ಸಂಜೆಗೆಂಪೊಲೆವಂತೆ ತೆರೆ' ತೊಲಗುತ್ತಲೇ 'ಕಂಜಾಕ್ಷಿಯರು ಕಾಣಿಸಿ' ಸುವರ್ಣ ಪುಷ್ಪಾಂಜಲಿ ಮಾಡುತ್ತಾರೆ. ಅರಮನೆಯ ಪಾತ್ರದವರ ಶಾಸ್ತ್ರೀಯವಾದ ದಿಕ್ಕನ್ನಿಕಾ ನಾಟ್ಯ ಜಲಕನ್ನಿಕಾ ನಾಟ್ಯಗಳು ನಡೆಯುತ್ತವೆ. ಕವಿ ಕಾವ್ಯಕ್ಕೆ ಬರಿ ವ್ಯಂಜಕ ವಸ್ತುಗಳಾಗಿರಲೆಂದು ಸಂಗೀತ ನಾಟ್ಯಗಳನ್ನು ಇಲ್ಲಿ ಅನುಗೊಳಿಸಿಲ್ಲ. ಕಥಾಭಾಗದ ಒಂದು ವಿಭಾಗವಾಗಿ ಬಂದಿವೆ ಇವು. 'ನೂರೆಂಟು ಕರಣ, ನೂರೆಂಟು ನಿಲುವು ಹದಿಮೂರು 'ಶಿರೋಭೇದ'[೪೦]ಗಳನ್ನು ಶಾಸ್ತ್ರೀಯವೆನ್ನುವಂತೆ ಅಧಿಕಾರವಾಣಿಯಿಂದ ವರ್ಣಿಸುತ್ತಾನೆ. ನಾಟ್ಯಪ್ರದರ್ಶನದಲ್ಲಿ ಕವಿಕ್ರತುಶಕ್ತಿಯನ್ನು ಇಲ್ಲಿ ಕಾಣಬಹುದು.

'ಎತ್ತ ನೀಡಿತು ಹಸ್ತವೆತ್ತ ಎತ್ತ ದೃಷ್ಟಿಗಳೆಲ್ಲ
ಚಿತ್ತವೆಲ್ಲವು ಭಾವರಸವು
ತತ್ತತ ತಿತ್ತಿತಿ ಯಾರೆಯಾರೆಯೆನೆ
ಲತ್ತಿತ್ತಲಲೆದು ಹರಿವಳು' [೪೧]

ಮತ್ತೊಂದು ದೃಶ್ಯದಲ್ಲಿ

'ಸುಳಿದು ಸುತ್ತುವಳು ನಾಟ್ಯದೊಳು ಸಮ್ಮೋಹನ |
ಜಲಧಿಯ ಸುಳಿಯೊಯೆಂಬಂತೆ ||
ಬಲಕೆಡುಕೊಲೆದು ಹರಿವಿಳಲೆ ವಿಸಿಲಲ್ಲಿ |
ಯೆಳೆನಾಗ ಹರಿವಂತೆ ಮುರಿದು" || [೪೨]

ನಾಟ್ಯದ ಹೆಜ್ಜೆಗಳ ಗತಿಗೆ ತಕ್ಕ ತಾಳ ಸೂಚಿಸುವಂತೆ ಒತ್ತಕ್ಷರದ ಪ್ರಾಸ ಬಳಸಿ ಯತಿಯ ಮೂಲಕ ಶಬ್ದಗಳನ್ನು ಕುಣಿಸಿ ನಾಟ್ಯದ ಸಹಜತೆಯನ್ನು ಓದುಗರ ಮನಸ್ಸಿನ ಮೇಲೆ ಬಿಂಬಿಸಲು ಈ ಶೈಲಿ ಅದೆಷ್ಟು ಸಹಕಾರಿಯಾಗಿದೆ. ನಾಟ್ಯದ ಸ್ತ್ರೀಯ ಹಸ್ತಮುದ್ರೆ, ಶಿರೋಭಾವ, ಕಾಲ್ನಡೆಗಳನ್ನು ಈಕ್ಷಿಸುವವರು ಹೇಗೆ ಪ್ರತಿಯೊಂದು ಭಂಗಿಗೂ ಭಂಗಿಗಳ ನಂತರ ತಲೆದೂಗಿ ಭಂಗಿಗಳು ಮೂಡುವುದನ್ನು ಕಾಣುತ್ತಾರೋ ಆ ಕ್ರಮದ ವಿವರಣೆಯನ್ನು ಕವಿ ಇಲ್ಲಿ ಅನುಸರಿಸುತ್ತಿರುವುದು ಸ್ಪಷ್ಟವಾಗಿದೆ".[೪೩]

"ಹೇಳುವ ವಿಚಾರಗಳು ಎಸೆದ ಶಲಾಕೆಯಂತೆ ನೇರವಾಗಿ ಓದುಗರ ಮನಮುಟ್ಟುಬೇಕೆಂಬ ನಿರ್ಧಾರಪೂರ್ಣ ಶೈಲಿಯನ್ನು ಕೆಳಗಿನ ಪ್ರಯೋಗಗಳಲ್ಲಿ ಕಾಣಬಹುದು".[೪೪] ಉದಾಹರಣೆಗೆ-

"ನೋಟ ರಾಯನ ಮೇಲೆ ನೆನಹು ರಾಗದ ಮೇಲೆ |
ನೀಟ ತಂತಿಯ ಮೇಲೆ ಬೆರಳು ||
ಚಾಟುಕಾತಿಯರು ಚಾಂದಸಿಕೆಯ ನೂಂಕಿ ಸ
ಘಾಟಿಕೆಯಿಂದ ಪಾಡಿದರು ||[೪೫]

ವೀರವತ್ತಾದ ಶೈಲಿ ಅಪರೂಪವಾಗಿಯಾದರೂ ಸಾಧ್ಯವಾಗಿದೆ ಎಂಬುದನ್ನು ಈ ಪದ್ಯದಲ್ಲಿ ಕಾಣಬಹುದು:

ಜಡಿದ ಭರಕೆ ರಾಯ ಪೊಡೆದ ಭರಕೆ ಕದ |
ಪೊಡೆದ ಭರಕೆ ವಿಜಯಾರ್ಧ
ನಡುಗಿತು ನೆಲವದುರಿತು ಕಡಲುಗಳುಕ್ಕಿ
ಬಡ ದೋಣಿಯಂತೆ ತುಳ್ಕಿದುವು ||[೪೬]

ನಾಗಚಂದ್ರನಂತೆ ಪೂರ್ಣ ಲಲಿತಭಾವಗಳಿಂದಲೇ ಕವಿಯ ಶೈಲಿ ಆಂದೋಳಿತವಾಗಿದೆ. ಕೆಲವು ವೇಳೆ ವೀರರಸ ಪ್ರಧಾನ ಶೈಲಿಯತ್ತ ಮೆಟ್ಟುಗಾಲಿಟ್ಟು ಮುಟ್ಟಿಸಾಟವಾಡಬಲ್ಲನು. ಕೆಲವು ಕಡೆ ನಾಗಚಂದ್ರನ ಶೈಲಿಯ ಅನುಕರಣೆಯೂ ಕಂಡುಬರುತ್ತದೆ. ಈ ಕರುಣಾರಸ ವ್ಯಂಜಕ ಪದ್ಯಗಳಲ್ಲಿ ಅದನ್ನು ಕಾಣಬಹುದು:

'ಸೋಗೆನವಿಲೆ ನವಿಲುಯ್ಯಾಲೆಯಾಡದೆ |
ತೂಗುಮಂಚವೆ ಸೆಜ್ಜೆವನೆಯೆ ||
ಲತೆಯೆ ನಂದನವೆ ತಂಗೊಳವೆ ತಾವಕಿಯೆ
ಮಾರುತನೆ ಮತ್ತಾಳಿ ಕೇಳೆಮ್ಮ' ||
ಪತಿಪೋದದೆಸೆಗೆ ಪೋಪೆವು ಸುಖವಿಹದೆಂದು |
ಸತಿಯರೈದಿದರು ಗೃಹದಿಂದ ||[೪೭]

ಯಾವುದೇ ಅಭಿಪ್ರಾಯವಿರಲಿ ಇಲ್ಲೆಲ್ಲ ಟಿ. ಎನ್. ಮಹದೇವಯ್ಯನವರು ನಿರಾಧಾರವಾಗಿ ಮಾಡಿಲ್ಲ, ಒಂದೊಂದು ಅಭಿಪ್ರಾಯಕ್ಕೂ ಒಂದೊಂದು ಉದಾಹರಣೆ ಕೊಟ್ಟಿದ್ದಾರೆ. ಅಭಿಪ್ರಾಯಗಳನ್ನು ಮೊದಲು

ಬರೆದು ಅನಂತರ ಉದಾಹರಣೆಗೆ ಹುಡುಕಾಡಿಲ್ಲ. ಉದಾಹರಣೆಗಳಿಂದಾಗಿ ಅಭಿಪ್ರಾಯಗಳು ಮೂಡಿವೆ; ಅಭಿಪ್ರಾಯಗಳಿಗಾಗಿ ಉದಾಹರಣೆಗಳು ಬಂದಿಲ್ಲ. ಕವಿ ರತ್ನಾಕರನ ವರ್ಣನೆಯಲ್ಲಿ ವೀರವತ್ತಾದ ಶೈಲಿ ಇಲ್ಲದಿಲ್ಲ"[೪೮] ಆದರೆ ಅಪರೂಪ. ಅದರಿಂದ ಟಿ. ಎನ್. ಮಹದೇವಯ್ಯನವರು. ಅಭಿಪ್ರಾಯವನ್ನು ಇದ್ದದ್ದು ಇದ್ದಂತೆಯೇ ಮಂಡಿಸಿದ್ದಾರೆ. ಅವನ ವೀರವತ್ತಾದ ಶೈಲಿಯ ಬಗೆಗೆ ಒಂದು ಪದ್ಯಭಾಗವನ್ನು ಉದಾಹರಣೆಯಾಗಿಯೂ ಕೊಟ್ಟಿದ್ದಾರೆ.

ಭರತೇಶ ವೈಭವದಲ್ಲಿ ಪ್ರಕೃತಿಯನ್ನು ವರ್ಣಿಸುವ ದೃಶ್ಯಗಳು ತೀರ ಕಡಿಮೆ; ಇಲ್ಲವೆಂದರೂ ಸಲ್ಲುವುದು. ಒಂದೆರಡು ಕಡೆ ಮಾತ್ರ ಬರುವ ಉದಯಕಾಲದ ರೇಖಾಚಿತ್ರಗಳನ್ನು ಬಿಟ್ಟರೆ ಕೆಳಗೆ ಕಾಣುವ ಮಳೆಯ ಚಿತ್ರವೊಂದೇ ಅಂತಹುದು. ಜನಸಾಮಾನ್ಯರಿಗೆ ಸುಲಭಗ್ರಾಹ್ಯದಿಂದ ಉದಾಹರಣೆಗಳಿಂದ ಈ ಚಿತ್ರವನ್ನು ನೆಯ್ದಿದ್ದಾನೆ. ಹೆಚ್ಚು ಮಳೆ ಕಾಣುವ ಮಲೆನಾಡ ಕಡೆಯಂತೂ ಈ ಚಿತ್ರ ತೀರ ಸಹಜವಾಗಿದೆ.

ರತ್ನಾಕರಕವಿಯದು ನೃತ್ಯಗೀತಾದಿ ಕಲಾಪ್ರದರ್ಶನಗಳ ವರ್ಣನೆಗಳಲ್ಲಿ ಎತ್ತಿದ ಕೈ. ಪದಬಂಧದ ಜೋಡಣೆ ಅನ್ಯಾದೃಶವಾಗಿರುತ್ತದೆ. ಆ ಚಿತ್ರಗಳ ರಸದೌತಣವನ್ನು ಏರ್ಪಡಿಸಿದಾಗ ಓದುಗರು ಮೈಮರೆತು ಆ ಚಿತ್ರಗಳಲ್ಲಿ ತನ್ಮಯರಾಗುವಂತಹ ಮೋಹಿನೀಶಕ್ತಿಯನ್ನು ಪ್ರದರ್ಶಿಸುತ್ತಾನೆ. ಇಂತಹ ಅಪರೂಪ ಚಿತ್ರಗಳು ಕನ್ನಡ ಸಾಹಿತ್ಯದಲ್ಲಿಯೇ ಅತಿ ವಿರಳ ಎಂದಿದ್ದಾರೆ

ಟಿ.ಎನ್. ಮಹದೇವಯ್ಯನವರು. ಅವನ ನಾಟ್ಯ ವರ್ಣನೆಗಳಲ್ಲಂತೂ ಪಾತ್ರಿಸುವ ನಾಟ್ಯಾಂಗನೆಯರ ಜೀವಂತ ಪಾತ್ರಗಳು ಎದ್ದು ನಿಂತು ಕಣ್ಣೆದುರಿನಲ್ಲೇ ನರ್ತಿಸಲಾರಂಭಿಸಿದಂತೆ ಭಾಸವಾಗುತ್ತವೆ.

"ನೇತ್ರ ಮೋಹಿನಿ ಮೆಲ್ಲನೋಲೆದು ರಾಯನ ನೋಡಿ
ನೇತ್ರ ಸುಖವ ಸೂಚಿಸಿದಳು ||
ಸೂತ್ರಿಸಿ ಚಿತ್ತಮೋಹಿನಿ ನೋಡಿ ಚಿತ್ತವ |
ಸೂತ್ರದಂತಲುಗಾಡಿಸಿದಳು ||
ಹೊಂಗಿ ಹೊಳೆದು ನೇತ್ರಮೋಹಿನಿ ತಾಳಲ
ಯಂಗಳನರಿದು ನರ್ತಿಸುತ
ರಂಗದೊಳಿದ್ದಳು ನೋಡುವ ಜನದಂತೆ |
.........................................
.........................................
.........................................
ಸುಳಿದು ಸುತ್ತುವಳು ನಾಟ್ಯದೊಳು ಸಮ್ಮೋಹನ ||[೪೯]

"ಸಂಗೀತದ ವರ್ಣನೆಗಳಲ್ಲಿ ರತ್ನಾಕರನಿಗೆ ಅತಿ ಮೆಚ್ಚಾದುದು ತಂತಿ ವಾದ್ಯಗಳಲ್ಲಿ ಶ್ರೇಷ್ಠವಾದ ವೀಣೆ.[೫೦] ವೀಣೆಗೆ ಸಖಿಯೋ ಎಂಬಂತೆ ಹೊಂಗೊರಲು ಹೊಂದಿಕೊಂಡು ವಿಪಂಚಿಯ ತೆರೆಗಳನ್ನೇಳಿಸುವಾಗ ಭಾವುಕ

ಶ್ರಾವಕರು ಅನುಭವಿಸುವ ನಾದಾನಂದದ ತಾದ್ಯಾತ್ಮ್ಯವನ್ನು ಕವಿ ರಸವತ್ತಾಗಿ ವರ್ಣಿಸಿರುವನು. ಸಂಗೀತದ ವರ್ಣನೆಗಳಲ್ಲಿ ರತ್ನಾಕರನಿಗೆ ವೀಣೆ ಮೆಚ್ಚಾದರೆ ವೈಣಿಕ ಟಿ. ಎನ್. ಮಹದೇವಯ್ಯನವರಿಗೆ ನಿಜಜೀವನದಲ್ಲಿ ವೀಣೆ ಅಚ್ಚುಮೆಚ್ಚು. ರತ್ನಾಕರನು ಟಿ. ಎನ್. ಮಹದೇವಯ್ಯನವರಿಗೆ ಮೆಚ್ಚಿನ ಕವಿಯಾಗಲೂ ಇದೂ ಒಂದು ಕಾರಣವಿದ್ದಿರಬಹುದು.

ಸ್ವತಂತ್ರವಾಗಿ ಅಭಿಪ್ರಾಯಗಳನ್ನು ನೀಡುವಾಗ ಟಿ.ಎನ್. ಮಹದೇವಯ್ಯನವರ ಶೈಲಿ ಚಿಕ್ಕ ವಾಕ್ಯಗಳಿಂದ ಅರ್ಥಗರ್ಭಿತ ವಾಕ್ಯಗಳಿಂದ, ನೇರವಾದ ಮಾತುಗಳಿಂದ ಕೂಡಿರುತ್ತದೆ. ಇದಕ್ಕೆ "ರತ್ನಾಕರನ ವರ್ಣನೆಗಳಲ್ಲಿ ಶಬ್ದಾಡಂಬರವಿಲ್ಲ, ಮುಚ್ಚುಮರೆಯಿಲ್ಲ. ಹೇಳುವುದನ್ನು ನೇರವಾಗಿ ಹೇಳುತ್ತಾನೆ. ಮಾಡಿದ ಚಿತ್ರಗಳು ಅಚ್ಚುಕಟ್ಟು, ಒಳಗೊಂಡ ವಿಚಾರ ಸುಸ್ಪಷ್ಟ, ಎಲ್ಲ ಚಿತ್ರಗಳೂ ಸರಳವಾಗಿವೆ. ಸಹಜವಾಗಿವೆ. ಸಮಯಕ್ಕೆ ತಕ್ಕಂತೆ ಸನ್ನಿವೇಶಕ್ಕೆ ಹೊಂದಿಕೊಳ್ಳುವಂತೆ ವರ್ಣನೆಗಳು ಬಂದಿವೆ. ಓದುಗರ ಮನಸ್ಸಿಗೆ ಅವು ನೇರವಾಗಿ ಮುಟ್ಟಿ ಹೃದಯದಲ್ಲಿ ರಸೋದ್ದೀಪನವನ್ನುಂಟುಮಾಡಿದರೆ ಕವಿಯ ಶ್ರಮ ಸಾರ್ಥಕ."[೩೧]

ಒಟ್ಟಿನಲ್ಲಿ "ಭರತೇಶ ವೈಭವ-ಒಂದು ವಿಮರ್ಶೆ" ಮೂಲ ಕೃತಿಯಷ್ಟೇ ರಸಿಕರ, ಸಹೃದಯಿಗಳ ಯಾತ್ರೆಯಾಗಿ ಸೃಷ್ಟಿಯಾಗಿದೆ. ಶ್ರೀ ಟಿ. ಎನ್. ಮಹದೇವಯ್ಯನವರ ಪಾಂಡಿತ್ಯ, ಪ್ರತಿಭೆಗಳಿಗೆ ಈ ವಿಮರ್ಶಾಲೇಖನ ಉಜ್ವಲ ಸಾಕ್ಷಿಯಾಗಿದೆ. "ಕವಿ ರತ್ನಾಕರವರ್ಣಿಯ ಬೃಹತ್ಕೃತಿಯಾದ ಭರತೇಶ ವೈಭವವನ್ನು ಕುರಿತ ಈ ವಿಮರ್ಶಾಗ್ರಂಥ ಸಂಗ್ರಹವಾಗಿಯಾದರೂ ಸಮಗ್ರವಾಗಿದೆ. ಸಾಹಿತ್ಯದ ವಿದ್ಯಾರ್ಥಿಗಳಿಗೆ ರತ್ನಾಕರನ ಮಹತ್ವಪೂರ್ಣವಾದ ಕೃತಿಯೊಂದರ ಪರಿಚಯಕ್ಕೆ ನೆರವಾಗುವ ಈ ಹೊತ್ತಿಗೆ ಅತಿ ಉಪಯುಕ್ತವಾದುದೇ ಸರಿ."[೩೨] ಎಂಬ ಪ್ರೊ. ಸಿ. ಮಹದೇವಪ್ಪನವರ ಮಾತುಗಳಲ್ಲಿ ಅತಿಶಯೋಕ್ತಿ ಬಂದಿಲ್ಲ, ಒಪ್ಪುವ ನುಡಿಗಳಾಗಿ ಬಂದಿವೆ.

■■

೬

# ಟಿ. ಎನ್. ಮಹದೇವಯ್ಯನವರ ಕಾದಂಬರಿಗಳು

ಶ್ರೀ ಟಿ. ಎನ್. ಮಹದೇವಯ್ಯನವರ ಯಾವುದೇ ಬರಹದ ಮೇಲೆ ಕಣ್ಣುಹಾಯಿಸಿದರೂ ಅವರ ಮೇಲೆ ಕನ್ನಡದ ನವೋದಯಕಾಲದ ಬರಹಗಾರರ ಪ್ರಭಾವ ದಟ್ಟವಾಗಿರುವುದು ಕಂಡುಬರುತ್ತದೆ. ಕನ್ನಡ ನವೋದಯಸಾಹಿತ್ಯದ ಪ್ರಭಾವ ಎಂದಾಗ, ಅದಕ್ಕೆ ಸಮಾನಾಂತರವಾಗಿ ಪಾಶ್ಚಾತ್ಯ ಸಾಹಿತ್ಯದ Romantic ಯುಗದ ಪ್ರಭಾವವೂ ಇರುವುದನ್ನು ಮರೆಯುವಂತಿಲ್ಲ. ನವೋದಯ ಕಾಲದ ಸಾಹಿತ್ಯ ಶ್ರೀ ಮಹದೇವಯ್ಯನವರಿಗೆ ಕೇವಲ ಪ್ರಭಾವವಾಗಿ ಉಳಿಯದೆ ಆ ಚಳುವಳಿಯ ಅವಿಭಾಜ್ಯ ಭಾಗವಾಗಿ ಅವರ ಚಿಂತನ-ಬರಹಗಳಿರುವುದನ್ನು ನಾವು ಗಮನಿಸಬಹುದು.

ಟಿ. ಎನ್. ಮಹದೇವಯ್ಯನವರು ಕಾದಂಬರಿ ಕ್ಷೇತ್ರದಲ್ಲಿಯೂ ತಮ್ಮ ಹಸ್ತ ಚಾಚಿರುವರು. ಅವರು ಹಲವಾರು ಕಾದಂಬರಿಗಳನ್ನು ಬರೆದಿದ್ದರೂ, ಪ್ರಕಟಗೊಂಡ ಕಾದಂಬರಿಗಳು ಎರಡು ಮಾತ್ರ. ಕಾದಂಬರಿಯಲ್ಲಿ ತಂತ್ರಕೌಶಲ್ಯ, ಸಂವಿಧಾನ ಪ್ರಜ್ಞೆ, ಶೈಲಿ, ವಿನ್ಯಾಸಗಳೇನೇ ಇರಲಿ ಅದು ಕತೆಯೊಂದನ್ನು ಹೇಳಬೇಕಾಗುತ್ತದೆಂಬ ಅರ್ಥದಲ್ಲಿ ವಿಮರ್ಶಕ, ಕಾದಂಬರಿಕಾರ ಇ. ಎಮ್. ಫಾರ್‌ಸ್ಟರ್ ಹೇಳಿದ್ದಾರೆ. ಈ ಅಡಿಗಲ್ಲಿನ ಪೂರ್ಣಪ್ರಜ್ಞೆ ಶ್ರೀ ಮಹದೇವಯ್ಯನವರ ಕಾದಂಬರಿ ಕಡಲಿನ ಸೇಡಿನಲ್ಲಿ ಸ್ಪಷ್ಟವಾಗಿ ವ್ಯಕ್ತವಾಗಿದೆ. ಎಂದರೆ ಸಾಂಪ್ರದಾಯಿಕ ಕತೆಯ ಆದಿ, ಮಧ್ಯ, ಅಂತ್ಯ ಕ್ರಿಯಾನುಸಾರದ ಬೆಳವಣಿಗೆಯ ಕ್ರಮ ಈ ಕಾದಂಬರಿಯದು.[೧]

'ಕಡಲಸೇಡು' ಶ್ರೀ ಮಹದೇವಯ್ಯನವರ ಮೊದಲ ಕಾದಂಬರಿ. ಪ್ರಾಯೋಗಿಕತೆಯ ದೃಷ್ಟಿಯಿಂದ ಬರೆದ ಕಾದಂಬರಿ ಇದಲ್ಲ; ಮಾರ್ಗೀಯ ಎಂದು ಕರೆಯಬಹುದಾದ ಇದು ಕ್ರಿಸ್ತೀಯ ಬೆಸ್ತ ಜೋಸೆಫ್‌ನ ದಾರುಣಕತೆ. ಅದರ ಕಥೆಯ ವಿನ್ಯಾಸ ಸರಳವಾದದ್ದು: ಕರಾವಳಿ ಪ್ರದೇಶದ ಒಂದು ಊರು. ಕೇರಿಯ ಮಕ್ಕಳಿಗೆ ಪಾಠ ಹೇಳಿಕೊಂಡು ಜೀವನ ಸಾಗಿಸುತ್ತಿದ್ದ ಚಿನ್ನಮ್ಮನೆಂಬ ಒಬ್ಬಳು ಮುದುಕಿ. ಅವಳಿಗೆ ಒಬ್ಬಳೇ ಮಗಳು ಮೇರಿ ಜೋಸೆಫ್ ಎಂಬ ತರುಣನೊಬ್ಬ ತನ್ನ ಸರ್ಪಿನಾ ಎಂಬ ದೋಣಿ ಮತ್ತು ಒಂದು ಬಲೆಯ

ಸಹಾಯದಿಂದ ಮೀನು ಹಿಡಿದು ಊರಿನಲ್ಲಿ ಅವುಗಳನ್ನು ಮಾರಿ ಬದುಕುವವನು. ತಾನು ಹಿಡಿದ ಮೀನಿನ ರುಚಿಯ ಮೂಲಕ ಮುದುಕಿಯ ವಿಶ್ವಾಸವನ್ನು ಗಳಿಸಿ ಆ ಮೂಲಕ ಅವಳ ಹರೆಯದ ಮಗಳ ಹೃದಯವನ್ನೂ ಕದ್ದ, ಹೆಚ್ಚಿನ ತೊಡಕಿಲ್ಲದೆ ಮುದುಕಿ ಕ್ರೈಸ್ತ ಪದ್ಧತಿಯ ಪ್ರಕಾರ ಮೇರಿ ಮತ್ತು ಜೋಸೆಫರ ಮದುವೆಯನ್ನು ನೆರವೇರಿಸಿದಳು. ಮೇರಿ ಮತ್ತು ಜೋಸೆಫರಿಗೆ ಆದ ಒಬ್ಬಳೇ ಮಗಳು ರೋಸಿನಾ. ಕುಡಿತದ ಚಟಕ್ಕೆ ಬಿದ್ದ ಗಂಡನನ್ನು ಮಗಳು ರೋಸಿನಾಳನ್ನೂ ಕಾಯಿಲೆ ಬಡತನ ಮೊದಲಾದ ಅಗ್ನಿಪರೀಕ್ಷೆಗಳಲ್ಲಿ ಗೆದ್ದು ಸಂರಕ್ಷಿಸಿಕೊಂಡು ಬಂದ ನಿಸ್ವಾರ್ಥಿ ಹೆಣ್ಣು ಮೇರಿ. ಆದರೇನು, ಒಂದು ದುರ್ದಿನದ ರಾತ್ರಿ ಕಡಲ ಮೇಲೆ ಮೀನುಬೇಟೆಗೆಂದು ಹೋದ ಜೋಸೆಫ್‌ನ ದೋಣಿ ಬಿರುಗಾಳಿಗೆ ಸಿಕ್ಕಿ ಒಡೆದುಹೋಯಿತು. ಕಡಲ ವಿರುದ್ಧದ ಹೋರಾಟದಲ್ಲಿ ಸೋತ ಜೋಸೆಫ್‌ನ ಹೆಣವನ್ನು ಬೆಸ್ತರು ಹೊತ್ತುತಂದು ಮೇರಿಯ ಗುಡಿಸಿಲಿನ ಮುಂದೆ ಹಾಕಿದರು. ಮೇರಿ ಮತ್ತು ರೋಸಿನಾ ನಿರ್ಗತಿಕರಾದರು. ಚರ್ಚಿನ ಮುಖ್ಯಸ್ಥರಾದ ಫಾದರ್ ಥಾಮಸ್‌ರ ಕೃಪೆಯನ್ನು ಬಯಸಿ ಮಗಳೊಂದಿಗೆ ಬಂದ ಮೇರಿ ಆಶ್ರಯದ ಭರವಸೆಯನ್ನು ಪಡೆದಳಾದರೂ ಚರ್ಚಿನ ಪರಿಸರದಲ್ಲಿ ನಡೆಯುತ್ತಿದ್ದ ದುರ್ವ್ಯವಹಾರವನ್ನು ಕಂಡು, ವಿಶೇಷತಃ ಥಾಮಸ್ಸರ ಕೈಕೆಳಗಿನ ಒಬ್ಬ ಉಪದೇಶಕ ರಾಜ ಎಂಬುವವನು ತೋರಿಸಿದ ಅನಾಧಾರ ಅಸಹಕಾರಗಳಿಂದ ದಿಕ್ಕುಗಾಣದವರಾಗಿ ತನ್ನ ಮಗುವನ್ನು ಕರೆದುಕೊಂಡು ಘಟ್ಟದ ಕೆಳಗಣ ಹಳ್ಳಿಯೊಂದನ್ನು ಸೇರುತ್ತಾಳೆ. ಹಳ್ಳಿಯ ಜಮೀನ್ದಾರರಾದ ರಾಮಐತಾಳರು ಮನೆಯ ಬಾಗಿಲಲ್ಲಿ ಕಂಡ ಈ ನಿರ್ಗತಿಕ ಹೆಂಗಸನ್ನು ಅವಳ ಮಗುವನ್ನು ಕರೆದು ಆಶ್ರಯಕೊಟ್ಟರು. ಐತಾಳರ, ಅವರಷ್ಟೇ ದಾಕ್ಷಿಣ್ಯಪರಳಾದ ಅವರ ಪತ್ನಿ ಜಲಜಾಕ್ಷಮ್ಮನವರ ಕೃಪೆಯ ಬಲದಿಂದ ಮೇರಿಗೆ ಹೊಸದೊಂದು ತವರುಮನೆ ಸಿಕ್ಕಿದಂತಾಯಿತು. ಅವರ ಮನೆಗೆಲಸದವಳಾಗಿ ಹತ್ತಾರುವರ್ಷ ಕಾಲಯಾಪನೆ ಮಾಡಿ ತನ್ನ ಮುದ್ದು ಮಗಳು ರೋಸಿನಾಳನ್ನು ಸಾಕಷ್ಟು ಸುಖನೆಮ್ಮದಿಗಳ ನಡುವೆ ಸಾಕಿ ದೊಡ್ಡವಳನ್ನಾಗಿ ಮಾಡಿದಳು.

ಇತ್ತ, ದಾರಿತಪ್ಪಿದವರನ್ನು ತಿದ್ದಿ ಸನ್ಮಾರ್ಗಕ್ಕೆ ಹಚ್ಚುವ, ದೀನದಲಿತರಿಗೆ ಕೈಲಾದದ್ದನ್ನೆಲ್ಲ ಮಾಡುವ ಬಿಷಪ್ ಥಾಮಸರ ಕೈಗಳಿಗೆ ಉಪದೇಶಕನಾಗಿದ್ದ ರಾಜು ವಿಧುರ, ಹೆಂಡತಿ ತನ್ನ ಪಾಲಿಗೆ ಬಿಟ್ಟು ಹೋದ ಗಂಡು ಮಗುವೊಂದನ್ನು ಚರ್ಚಿನ ಆಶ್ರಯದಲ್ಲಿ ಬೆಳೆಯಲು ಬಿಟ್ಟು ತಾನು ಚರ್ಚಿಗೆ ಲಗತ್ತಾದ ಆಸ್ಪತ್ರೆಯ ದಾದಿ ಡಾಕ್ಟರುಗಳಿಂದ ಹಿಡಿದು ವಾರ್ಡಿನ ಹುಡುಗರವರೆಗೆ ಎಲ್ಲರ ರಸನೆಯ ಜೇನುತುಪ್ಪವೆಂದು ಹೆಸರಾದ ಬೆಡಗಿ ಕಾರ್ಮಿನಾಳ ಜೊತೆ ಇರುಳು ವಿಲಾಸ ಜೀವನ, ಹಗಲು ಉಪದೇಶ ಎಂಬಂಥ ಇಬ್ಬಂದಿ ಬದುಕು ನಡೆಸುತ್ತಿರುತ್ತಾನೆ. ಆಕಸ್ಮಿಕವಾಗಿ ಥಾಮಸರ ಕೈಗೆ ಸಿಕ್ಕಿಬಿದ್ದಾಗ ರಾಜು ಆಶ್ಚರ್ಯಕರವಾದ ರೀತಿಯಲ್ಲಿ ಅಪಮಾನ ಪಶ್ಚಾತ್ತಾಪಗಳಿಂದ ತುಂಬಿದವನಾಗಿ ಬಿಷಪ್‌ರಿಗೆ ತಪ್ಪೊಪ್ಪಿಗೆಯ ಪತ್ರ ಬರೆದು ತನ್ನ ಮಗನ ಯೋಗಕ್ಷೇಮವನ್ನು ಅವರಿಗೆ ಒಪ್ಪಿಸಿ ತಾನು ಮರುದಿನ ಅಲ್ಲಿ ಯಾರಿಗೂ ಮುಖತೋರಿಸದೆ ಹೊರಟು ಹೋಗುತ್ತಾನೆ. ಕಾರ್ಮಿನಾ ರಜಹಾಕಿ ಹೊರಟು ಹೋದವಳು ಬೇರೆ ಒಂದು ಆಸ್ಪತ್ರೆಗೆ ವರ್ಗಮಾಡಿಸಿಕೊಳ್ಳುತ್ತಾಳೆ.

ರಾಜು ತನ್ನ ಪ್ರತಿತಿಂಗಳ ಸಂಬಳದ ಒಂದು ಭಾಗವನ್ನು ಥಾಮಸರಲ್ಲಿಯೇ ಬಿಟ್ಟಿದ್ದ. ಅದರ ಮೊತ್ತವನ್ನು ಹುಡುಗನ ಭವಿಷ್ಯನಿಧಿಯೆಂದು ಅವರಲ್ಲಿಯೇ ಬಿಟ್ಟು ಕೈಗೆ ಸಿಕ್ಕಿದ ತನ್ನ ಬಟ್ಟೆಬರೆಗಳನ್ನು ಒಂದು ಚೀಲದಲ್ಲಿ ತುರುಕಿಕೊಂಡು ಕಾಲುನಡುಗೆಯಲ್ಲೇ ಊರುಬಿಟ್ಟು ಎಷ್ಟೋ ಹಳ್ಳಿಗಳನ್ನು ದಾಟಿ ನಡೆದು ಕಡೆಗೆ ಸಿಕ್ಕಿದ ರೈಲುಹಳಿಗಳನ್ನು ಅನುಸರಿಸಿ ಒಂದು ರೈಲು ನಿಲ್ದಾಣ ತಲುಪಿದ. ಅಲ್ಲಿ ರೈಲು ಹತ್ತಿದವನು ದೂರದ ಕಣ್ಣಾನೂರನ್ನು ಸೇರಿದ. ತನ್ನಲ್ಲಿದ್ದ ಅಲ್ಪಸ್ವಲ್ಪ ಹಣವೆಚ್ಚವಾದ ಮೇಲೆ ದಿಕ್ಕುಗಾಣದೆ ಕೂಲಿಮಾಡಿ ಜೀವಿಸುವ ನಿಷ್ಠುರ ತೀರ್ಮಾನಕ್ಕೆ ಬಂದ. ಅವನ ಮಾಸಿದ ಬಟ್ಟೆ ಬೆಳೆದ ಗಡ್ಡಗಳ ನಡುವೆ ಯಾರೂ ಅವನನ್ನು ಹಿಂದಿನ ಉಪದೇಶಕ ರಾಜು ಎಂದು ಗುರುತು ಹಿಡಿಯುವಂತಿರಲಿಲ್ಲ. ಕಾರ್ಮಿನಾ ಮುಂದೆ ಏನಾದಳೆಂದು ಕಾದಂಬರಿಕಾರರು ಹೇಳುವ ಗೋಜಿಗೆ ಹೋಗಿಲ್ಲ.

ಪ್ರೈಮರಿ ವಿದ್ಯಾಭ್ಯಾಸವನ್ನು ಐತಾಳರ ದಯೆಯಿಂದ ಮುಗಿಸಿದ ರೋಸಿನಾ ಹಳ್ಳಿಯಲ್ಲಿ ಓದುವ ಸೌಲಭ್ಯವಿಲ್ಲದ ಕಾರಣ ತನ್ನ ತಾಯಿಯ ಮನೆಗೆಲಸಗಳಲ್ಲಿ ಸಹಾಯಕಳಾಗಿ ಉಳಿಯಬೇಕಾಗಿ ಬಂದಿತಾದರೂ ಈಗ ಹದಿನೇಳು ವರ್ಷದವಳಾಗಿದ್ದು ಅವಳು ಐತಾಳರ ಮಗ ನಾರಾಯಣ ತನ್ನ ಬಿ. ಎ. ಪರೀಕ್ಷೆ ಮುಗಿಸಿಕೊಂಡು ಊರಿಗೆ ಬಂದ. ಅದುವರೆಗೆ ಅವನು ಹಳ್ಳಿಗೆ ಬರುತ್ತಿದ್ದುದೇ ಅಪರೂಪ. ರಜಾಕಾಲದಲ್ಲಿ ಬಹುಮಟ್ಟಿಗೆ ಅವನು ತನ್ನ ಅಕ್ಕಂದಿರ ಮನೆಗಳಲ್ಲೇ ಕಾಲಹಾಕಿಬಿಡುತ್ತಿದ್ದ. ಈ ಸಲ ಬಂದ ಮರುದಿನವೇ ತಮ್ಮ ಮನೆಯಲ್ಲಿ ಸುಳಿದಾಡಿದ ಹುಡುಗಿ ರೋಸಿನಾಳ ಚೆಲುವಿನ ಪ್ರಭೆಯನ್ನು ಕಂಡು ಹುಚ್ಚನಾದ. ಸಮಯಕಾದು ರೋಸಿನಾ ಒಬ್ಬಳೆ ಗುಡಿಸಿಲಿನಲ್ಲಿದ್ದಾಗ ಅವಳ ಮೇಲೆ ಆಕ್ರಮಣ ನಡೆಸಿದ. ಅವಳ ಸೌಂದರ್ಯದ ಅರಿವು. ಅದೇ ತಾನೆ ಅವಳಲ್ಲಿ ಜಾಗ್ರತವಾಯಿತು. ಆದರೆ ಮುಂದೇನೆಂಬುದರ ಬಗೆಗೆ ಅವಳಿಗೂ ಅವಳ ತಾಯಿಗೂ ವಿವಂಚನೆಯುಂಟಾಯಿತು. ಮತ್ತೆ ಥಾಮಸರು ನೆನಪಿಗೆ ಬಂದರು. ಐತಾಳರಿಗೂ ಜಲಜಾಕ್ಷಮ್ಮನವರಿಗೂ ವಿಷಯವನ್ನು ತಿಳಿಸಿ ಅವರ ಅಪ್ಪಣೆ ಪಡೆದು ಮೇರಿ ಮಗಳನ್ನು ಕರೆದುಕೊಂಡು ಥಾಮಸರನ್ನು ಕಾಣಲು ಹೋದಳು. ಇತ್ತ ನಾರಾಯಣನಿಗೆ ಪ್ರಾಯ ಕೂಡಿ ಬಂದದ್ದರ ಅರಿವಾಗಿ ತಂದೆತಾಯಿಗಳು ಅವನನ್ನು ತಮ್ಮ ಹಿರಿಯ ಮಗಳು ಸೀತಕ್ಕನ ಮನೆಗೆ ಹೋಗಿಬರಲು ಹೇಳಿದರು. ಅಕ್ಕನ ಮಗಳು ಪದ್ಮಳಿಗೂ ಅದೇ ವಯಸ್ಸಿನ ರೋಸಿನಾಳಿಗೂ ನಾರಾಯಣನ ದೃಷ್ಟಿಯಲ್ಲಿ ಏನೂ ವ್ಯತ್ಯಾಸವೇ ಕಾಣಲಿಲ್ಲ! ಅಲ್ಲಿಗೆ ಅವನ ಸಮಸ್ಯೆ ಬಗೆಹರಿಯಿತು.

ಒಂದು ಗಿರಣಿಯಲ್ಲಿ ಜೀವನೋಪಾಯಕ್ಕಾಗಿ ಕೆಲಸಕ್ಕೆ ಸೇರಿದ್ದ ಆಂಥೋಣಿ ತನ್ನ ಬಾಲ್ಯದ ಪೋಷಕರಾದ ಥಾಮಸ್‌ರನ್ನು ಕಂಡು ಆಶೀರ್ವಾದ ಪಡೆಯಲು ಬಂದಿದ್ದ. ಅಂದೇ ಮೇರಿ ತನ್ನ ಮಗಳನ್ನು ಕರೆದುಕೊಂಡು ಬಂದು ತನ್ನ ಸಮಸ್ಯೆಯನ್ನು ಅವರಲ್ಲಿ ನಿವೇದಿಸಿಕೊಂಡಳು. ಆಂಥೋಣಿ ಮತ್ತು ರೋಸಿನಾರ ವಿವಾಹದ ಪ್ರಸ್ತಾಪವನ್ನು ಥಾಮಸರೇ ಮಾಡಿದರು. ಆಂಥೋಣಿಯ ಪಾಲಿಗೆ ಉಳಿದಿದ್ದ ಏಕಮಾತ್ರ ಬಂಧು ಅವನ ಚಿಕ್ಕಮ್ಮನಿಗೆ ಈ ಸಂಬಂಧ ಮೆಚ್ಚಿಗೆಯಾಯಿತು. ಆಂಥೋಣಿಗಂತೂ ರೋಸಿನಾ ಸ್ವರ್ಗದಿಂದಿಳಿದು ಬಂದ ಅಪ್ಸರೆಯಾಗಿ ಕಂಡಳು. ಮೇರಿಯ ಸಮಸ್ಯೆ ಸುಗಮವಾಯಿತು. ಐತಾಳ ದಂಪತಿಗಳ ಆಶೀರ್ವಾದ ಪಡೆದು ಬಂದು ಒಂದು ನಿಶ್ಚಿತದಿನ ರೋಸಿನಾಳನ್ನು ಆಂಥೋಣಿಗೆ ಮದುವೆ ಮಾಡಿಕೊಟ್ಟಳು. ತಾಯಿ ಮೇರಿ ಮತ್ತೆ

ಐತಾಳರ ಋಣ ತೀರಿಸುವುದಕ್ಕೆಂಬಂತೆ ಹಳ್ಳಿಯಲ್ಲಿ ನಿಂತಳು. ಆದರೆ ಮಗಳನ್ನು ಬಿಟ್ಟಿರಲಾರದೆ ಇಲ್ಲಿ ಕೆಲವು ದಿನ ಅಲ್ಲಿ ಕೆಲವು ದಿನ ಇದ್ದು ಕಾಲಯಾಪನೆ ಮಾಡಿದಳು. ಕೊನೆಗೆ ಕಾಯಿಲೆ ಬಿದ್ದು ಮಗಳ ಮನೆ ಸೇರಿದವಳು ಒಂದು ಸಂಜೆ ತನ್ನ ಕೊನೆಯುಸಿರು ಎಳೆದಳು. ಸಾಯುವಾಗ ಮೇರಿಯ ಮನಸ್ಸಿನಲ್ಲಿ ಉಳಿದ ಒಂದೇ ಒಂದು ಕೊರಗು ಎಂದರೆ ಮಗಳ ಹೊಟ್ಟೆಯಲ್ಲಿ ಒಂದು ಮಗುವನ್ನು ಕಾಣಲಿಲ್ಲ ಎಂಬುದು.

ರೋಸಿನಾ ಮತ್ತು ಆಂಥೋಣಿಯರ ದಾಂಪತ್ಯದ ಸಂಭ್ರಮವೂ ಬಹಳ ದಿನ ಉಳಿಯಲಿಲ್ಲ. ರೋಸಿನಾಳ ರೂಪ ಅಥವಾ ಗುಣಯಾವುದೂ ಆಂಥೋಣಿ ಕುಡಿತದ ಚಟಕ್ಕೆ ಬೀಳುವುದನ್ನು ತಡೆಯಲಾಗಲಿಲ್ಲ. ಹೆಂಡತಿಯ ಬಗೆಗೂ ಅನಾದರ ಬೆಳೆಯಿತು. ಸಂಸಾರದ ಮತ್ತು ಕುಡಿತದ ಖರ್ಚನ್ನು ಭರಿಸುವುದಕ್ಕಾಗಿ ಸೈಕಲ್ ರಿಪೇರಿ ಮುಂತಾದ ಉಪಕಾಯಕಗಳನ್ನು ಮಾಡಿದ. ಇದೇ ಸಂದರ್ಭಕ್ಕೆ ಕದ್ದು ತಂದ ಹೊಸ ಸೈಕಲ್ ಒಂದನ್ನು ಅರಿಯದೆ ಒಬ್ಬ ವಂಚಕನಿಂದ ತುಸು ಬೆಲೆಗೆ ಖರೀದಿಸಿ ಕದ್ದವನ ಜೊತೆಗೆ ತಾನೂ ಪೋಲೀಸರ ಕೈಗೆ ಸಿಕ್ಕುಹಾಕಿಕೊಂಡ. ರೋಸಿನಾಳನ್ನು ಸಂತೈಸಲು ಆಂಥೋಣಿಯ ಚಿಕ್ಕಮ್ಮ ಬರಬೇಕಾಯಿತು. ಆ ಮುದುಕಿಯೇ ವೃದ್ಧ ಥಾಮಸರ ಸಹಾಯವನ್ನು ಪಡೆದು ಆಂಥೋಣಿಯನ್ನು ಪೋಲಿಸರ ಕೈಯಿಂದ ಬಿಡಿಸಿದಳು. ಆದರೆ ನ್ಯಾಯಾಲಯದ ತೀರ್ಪು ಏನಾಗುವುದೋ ಎಂದು ಆಂಥೋಣಿ ಮತ್ತು ರೋಸಿನಾ ಭಯಗ್ರಸ್ಥರಾದರು. ಈ ಮಧ್ಯೆ ಆಂಥೋಣಿ ಗಿರಣಿಯ ಕೆಲಸವನ್ನೂ ಬಿಟ್ಟ! ಮನೆಯವೆಚ್ಚ, ಹೊಸದಾಗಿ ಬಂದ ಈ ಕುತ್ತು ಇವುಗಳಿಂದ ಪಾರಾಗುವುದಕ್ಕಾಗಿ ರೋಸಿನಾಳ ತಾಯಿ ತನ್ನ ಆ ಪದ್ಧತಿಯಿಂದ ಮಾಡಿಸಿಕೊಟ್ಟ ಎರಡು ಬಳೆಗಳನ್ನೂ ಮಾರಲು ತೀರ್ಮಾನಿಸಿದರು.

ಕಥೆಯಲ್ಲಿ ಎಷ್ಟು ಅಚ್ಚುಕಟ್ಟಾದ ಯೋಜನೆ ಇದೆಯೋ ಅಷ್ಟೇ ದೌರ್ಬಲ್ಯಗಳೂ ಇವೆ. ಕರಾವಳಿ ಪ್ರದೇಶದ ಬೆಸ್ತರ ಸಾಹಸದ ಬದುಕು, ಕಡಲ ಮೇಲಿನ ರಮಣೀಯವಾದರೂ ರುದ್ರವಾದ ದೃಶ್ಯಗಳು ಈ ಹಿನ್ನೆಲೆಯಲ್ಲಿ ಶ್ರೀ ಟಿ. ಎನ್. ಮಹದೇವಯ್ಯನವರು ತಾವು ಹೇಳುವ ಕಥೆಯ ಪಟಲವನ್ನು ಬಿಚ್ಚುತ್ತಾರೆ. ಜೋಸೆಫ್, ಮೇರಿ ಮತ್ತು ಆಂಥೋಣಿಯಂಥ ಶ್ರಮಜೀವಿಗಳನ್ನು ಕಥೆಯ ಪಾತ್ರಗಳನ್ನಾಗಿ ಆರಿಸಿದ್ದಾರೆ. ಕ್ರೈಸ್ತಧರ್ಮದ ಮಾನವೀಯತೆಯ ಪ್ರತಿನಿಧಿಯೆಂಬಂತಿರುವ ಬಿಷಪ್ ಥಾಮಸರ ನಡವಳಿಕೆಯ ಮೂಲಕ, ರಾಜುವಿನಂಥ ಉಪದೇಶಕನು ಪ್ರಾಮಾಣಿಕವಾದ ಬದುಕನ್ನು ನಡೆಸುವನು. ಆತ ಶ್ರಮಜೀವನವೆಂದರೇನೆಂಬುದನ್ನು ಅನುಭವಿಸಿ ಕಷ್ಟ ಮತ್ತು ದಾರಿದ್ರ್ಯಗಳಿಗೆ ಬೈಬಲ್ ಮಾಡಿದ ವ್ಯಾಖ್ಯೆಯನ್ನು ಅರ್ಥಮಾಡಿಕೊಳ್ಳುವಲ್ಲಿ ಪಡೆದ ಹೊಸ ಮೌಲಿಕ ಪರಿಜ್ಞಾನದ ಮೂಲಕ ಮಾನವಜೀವನದ ಗಹನತೆಯನ್ನು ವಿಶ್ಲೇಷಿಸುವ ಉದ್ದೇಶವನ್ನಿಟ್ಟುಕೊಂಡಿದ್ದಾರೆ ಇಷ್ಟೆಲ್ಲ ಆಗಿಯೂ ಇಲ್ಲಿನ ಪಾತ್ರಗಳು ಸಾಕಷ್ಟು ವಿಕಾಸಹೊಂದದೆ ತಾವೇ ವಿಧಿಸಿಕೊಂಡ ಮಿತಿಯಲ್ಲಿ ಸುತ್ತುಹಾಕುತ್ತವೆ.

ಕಾದಂಬರಿಯಲ್ಲಿ ಬರುವ ವಿಲಾಸದ ಹುಡುಗಿ ಕಾರ್ಮಿನಾ ಮತ್ತು ಸ್ವಭಾವತಃ ಉಪದೇಶಕನಾಗಲು ಯೋಗ್ಯನಲ್ಲದ ರಾಜು ಇವರಿಗೇ ಕಾದಂಬರಿಯ ಮುಖ್ಯ ಪಾತ್ರವಾಗುವ ಅವಕಾಶವಿತ್ತು. ಥಾಮಸ್‌ರಿಗೆ ಕಣ್ವರಂಥ ಸಿದ್ಧವ್ಯಕ್ತಿತ್ವವಿದ್ದರೂ ಅವರು ಕಾದಂಬರಿಯ ಪ್ರಧಾನ ಪಾತ್ರವಾಗಿಲ್ಲ. ಮೇರಿ ಒಬ್ಬಳು ಸಾಧ್ವಿಯಾಗಿ

ಆರಂಭಗೊಂಡು ಸಾಧ್ವಿಯಾಗಿ ಮುಗಿಯುತ್ತಾಳಾದರೂ ಅವಳ ಪಾತ್ರ ಬೆಳೆದು ಓದುವವರ ಕಥೆಗೆ ಯಾವ ತಿರುವು ಬಂದಿಲ್ಲ. ಜೋಸೆಫ್ ಶ್ರಮಜೀವಿ. ಹೆಂಡತಿ ಮಕ್ಕಳನ್ನು ಅನನ್ಯವಾಗಿ ಪ್ರೀತಿಸುತ್ತಾನಾದರೂ ಕುಡಿತದ ಚಟವೊಂದರಿಂದ ಹೆಂಡತಿಯ ಬಗೆಗೆ ಕ್ರೌರ್ಯದಿಂದಲೂ ನಡೆದುಕೊಳ್ಳುತ್ತಾನೆ. ಅವನಿಗೆ ವಿದ್ಯೆ ಸತ್ಸಂಪರ್ಕ ಇಲ್ಲ. ಆದರೆ ಅವನ ಮಗ ಆಂಥೋಣಿಯೂ ಏಕೆ ಹಾಗಾಗುತ್ತಾನೆ? ಥಾಮಸ್‌ರ ಸನ್ನಿಧಿಯಲ್ಲಿ ಬಾಲ್ಯವನ್ನು ಕಳೆದ ಅವನಲ್ಲಿ ಯಾವ ಸಂಸ್ಕಾರವೂ ಕಾಣುವುದಿಲ್ಲ. ರೋಸಿನಾಳನ್ನು ಮದುವೆಯಾಗುವ ಮೊದಲೇ ಅವನು ವಿವಿಧ ಪ್ರಲೋಭನೆಗಳಿಗೆ ಒಳಗಾದವನು; ತಂದೆಯ ಬಗೆಗೆ ಟೀಕೆ ಮಾಡುವ ಅಧಿಕಾರವನ್ನು ಕಳೆದುಕೊಂಡವನು ಎಂಬ ಸೂಚನೆ ಅವನ ಮಾತಿನಲ್ಲೇ ವ್ಯಕ್ತವಾಗುತ್ತದೆ. ಕಳವಿನ ಬೈಸಿಕಲ್ ಕೊಂಡದ್ದರಿಂದ ತಾನೇ ಕಳ್ಳನೆಂಬಂತೆ ಫಾಸಿಯಾಗುವುದು, ಥಾಮಸ್‌ರಂಥವರ ಸಹಾನುಭೂತಿ, ಚಿಕ್ಕಮ್ಮನ ಸಹಾಯ ಎಲ್ಲ ಇದ್ದೂ ಅವನು ನ್ಯಾಯಾಲಯದ ತೀರ್ಪಿಗೂ ಕಾಯದೆ ಹೆಂಡತಿಯೊಡನೆ ಊರುಬಿಟ್ಟು ಓಡಿಹೋಗುವುದು ವಿಚಿತ್ರ ಎನಿಸುತ್ತದೆ. ಅವನು ಗಿರಣಿಯಲ್ಲಿನ ಉದ್ಯೋಗ ಬಿಟ್ಟಿದ್ದಕ್ಕೆ ಸ್ಪಷ್ಟವಾದ ಕಾರಣ ಯಾವುದೂ ಇಲ್ಲ. ರಾಜು ಉಪದೇಶಕನ ವೃತ್ತಿಯಲ್ಲಿದ್ದೂ ಉನ್ಮಾದದ ಬದುಕಿನಲ್ಲಿ ನಿರತನಾದುದು ಎಷ್ಟು ಸೋಜಿಗವಾಗಿ ಕಾಣುವುದೋ ಅಷ್ಟೇ ಸೋಜಿಗದ ಸಂಗತಿ ಅವನು ಇದ್ದಕ್ಕಿದ್ದಂತೆ ಮನಃಪರಿವರ್ತಿತನಾಗಿ ಪಾಪಪ್ರಜ್ಞೆಯಿಂದ ಊರುಬಿಡುವುದು. ಅವನು ಹೊಟ್ಟೆಯ ಪಾಡಿಗಾಗಿ ಕೂಲಿಯ ಕೆಲಸಕ್ಕಿಳಿದ್ದಾಗ ಅವನ ಹಳೆಯ ಸುಖದ ನೆನಪುಗಳು, ದುಶ್ಚಟಗಳು ಅವನನ್ನು ಬಾಧಿಸಿದಂತೆ ಕಾಣುವುದಿಲ್ಲ. ಅವನು ಊರು ಬಿಟ್ಟನಂತರದ ಹದಿನೈದು ವರ್ಷಗಳನ್ನು 'ತಪಸ್ಸು' ಎಂದು ಕರೆಯಲಾಗಿದೆಯಾದರೂ ಅದರ ವರ್ಣನೆಯಲ್ಲಿ ವೈವಿಧ್ಯ ಅಥವಾ ತಪಸ್ಸಿನ ಗಹನತೆ ಕಂಡುಬರುವುದಿಲ್ಲ.

ಕಾದಂಬರಿಯಲ್ಲಿ ಇದ್ದಕ್ಕಿದ್ದಂತೆ ಪ್ರತ್ಯಕ್ಷವಾಗಿ ತನ್ನ ಹದಿಹರೆಯದ ಅಸಡ್ಡಾಳತನವನ್ನು ಪ್ರದರ್ಶಿಸುವ ನಾರಾಯಣನಿಗೆ ಹೆಣ್ಣು ಹಸಿದ ಹುಡುಗನ ಕೈಗೆ ಸಿಕ್ಕ ಸೀಬೇಕಾಯಿ ಮಾತ್ರ.

ಕಥೆಯ ಮುಗಿತಾಯದ ವಿಧಾನ ಮತ್ತು ವರ್ಣನೆಗಳಲ್ಲಿ ಬರುವ ಕೆಲವು ಸಂಸ್ಕೃತ ಭಾಷೆಯ ವಿಶೇಷಣಗಳನ್ನು ನೋಡಿದರೆ ಮಹದೇವಯ್ಯನವರ ಮೇಲೆ ಬಂಗಾಳಿ ಕಾದಂಬರಿಗಳ ಪ್ರಭಾವ ಇರುವಂತೆ ಗೋಚರಿಸುತ್ತದೆ. ದುರಂತವಸ್ತುವೇ ಹೆಚ್ಚು ಪರಿಣಾಮಕಾರಿಯಾದದ್ದು ಮತ್ತು ಉನ್ನತವಾದದ್ದು ಎಂಬ ಕಲ್ಪನೆಗೆ ಗ್ರೀಕ್ ಸಾಹಿತ್ಯದ ವಿಷಯದಲ್ಲಿ ಅವರಿಗಿದ್ದ ಅನುರಕ್ತಿಯೂ ಕಾರಣವಿರಬಹುದು.

ಕಾದಂಬರಿಯಲ್ಲಿ ಬರುವ ಕೆಲವು ಸನ್ನಿವೇಶದ ಮತ್ತು ವ್ಯಕ್ತಿಗಳ ವರ್ಣನೆ ಇನ್ನಷ್ಟು ಪಕ್ವವಾಗಿರಬೇಕಾಗಿತ್ತು. ಎನಿಸುತ್ತದೆ. ರಾಜು ಮತ್ತು ಕಾರ್ಮಿಕಾ ಇವರ ಪ್ರಣಯವಿಲಾಸ ಬಹಳ ಕ್ಷುದ್ರವಾಗಿ ಕಾಣುತ್ತದೆ. ರೋಸಿ ಮತ್ತು ಆಂಥೋಣಿಯರ ಪ್ರಥಮಸಮಾಗಮ ಕೇವಲ ಶಬ್ದಮಯವಾಗಿ ಹೋಗಿದೆ. ರೋಸಿನಾಳ ಶಿಶುದೋಹಳದ ವರ್ಣನೆ ಅಕಾಲಿಕವಾಗಿದೆ ಮತ್ತು ಸಂಪ್ರದಾಯಕ್ಕೆ ಶರಣಾಗುತ್ತದೆ. ರೋಸಿನಾಳಿಗೆ ನೋಡುವವರನ್ನು ನಿರಸ್ತ್ರಗೊಳಿಸುವಂಥ ಸೌಂದರ್ಯವಿರುವುದಾದರೂ ಅವಳು ಯಾವ ತರಹದ ಹುಡುಗಿ

ಎಂಬ ಬಗೆಗೆ ನಮ್ಮಲ್ಲಿ ಯಾವ ಚಿತ್ರವೂ ಮೂಡುವುದಿಲ್ಲ. ಆದರೆ ಸೀತಕ್ಕನ ಮಗಳು ಪದ್ಮಳನ್ನು ವರ್ಣಿಸುವಲ್ಲಿ ಅವಳ ಐದು ಅಲಂಕಾರಗಳ ಪಟ್ಟಿ ಮಾಡುವುದರಲ್ಲೇ ಅನಾಯಾಸವಾದ ಒಂದು ಚಿತ್ರ ಮೂಡುತ್ತದೆ. ಹೀಗೆ ಬಹಳಷ್ಟು ಕಡೆ ವರ್ಣನೆಗಳು ನಮ್ಮನ್ನು ಅತೃಪ್ತಿಯಲ್ಲಿ ಕೈಬಿಡುತ್ತವೆ. ಲೇಖಕರಲ್ಲಿ ಬರೆಯುವ ಶಕ್ತಿ ಇದೆ. ಹಾಗಾದರೆ ಈ ಅತೃಪ್ತಿ ಏಕೆ? ಶ್ರೀ ಮಹಾದೇವಯ್ಯನವರು ಬರೆದದ್ದನ್ನು ಓದಿ ತೃಪ್ತರಾದರೆ? ಇನ್ನೊಮ್ಮೆ ಪರಿಷ್ಕರಿಸಬೇಕೆಂದಿದ್ದರೆ? ಇದಕ್ಕೆಲ್ಲ ವ್ಯವಧಾನ ಇರಲಿಲ್ಲವೆ? ಅಥವಾ ಇನ್ನೊಮ್ಮೆ ತಮ್ಮ ಕೃತಿಯನ್ನು ಓದಿ ಮತ್ತೆ ಬರೆದು ಅಣಿಗೊಳಿಸುವುದರಲ್ಲಿ ಅವರಿಗೆ ಕಾಲನ ಕರೆಬಂಗಿತೆ? ಈ ಸಂಶಯಗಳು ಹುಟ್ಟುತ್ತವೆ. ಏಕೆಂದರೆ ನಿಸ್ಸಂಶಯವಾಗಿಯೂ ಅವರಲ್ಲಿ ಪ್ರತಿಭೆ ಇದೆ. ಅದಕ್ಕೆ ಈ ಕಾದಂಬರಿಯಲ್ಲಿ ನಿದರ್ಶನವನ್ನು ಕಾಣಬಹುದು. ಕಾದಂಬರಿ ಇತರೆಡೆ ಕಂಡುಬಂದ ಕೊರತೆಗೆ ಉತ್ತರವೆಂಬಂತೆ ಸುಮಾರು ನಾಲ್ಕು ಪುಟಗಳಷ್ಟು (೯೫ನೇ ಪುಟದ ಕೊನೆಯಿಂದ ೯೯ನೇ ಪುಟದ ಅರ್ಧದವರೆಗೆ) ಅಖಂಡವಾದ ಮನೋಹರ ಬರವಣಿಗೆ ನಮ್ಮಲ್ಲಿ ಆಸೆಯನ್ನು ಮೂಡಿಸುತ್ತದೆ. ಮತ್ತೆ ಮತ್ತೆ ಓದಬೇಕೆಂಬಷ್ಟು ಭಾವಗೀತಾತ್ಮಕವಾಗಿದೆ. ಆ ಸಾಲುಗಳಲ್ಲಿ ನಾಲ್ಕಾರನ್ನು ಮಾತ್ರ ಇಲ್ಲಿ ಉದಾಹರಿಸಿದ್ದೇನೆ. ಅದು ರೋಸಿನಾ ಐತಾಳರ ಮನೆಯ ಸಮೀಪದ ತನ್ನ ಗುಡಿಸಿಲಿನ ಬಾಗಿಲಲ್ಲಿ ತಿಂಗಳ ಬೆಳಕಿನಲ್ಲಿ ಕುಳಿತು ನಾರಾಯಣನ ತುಡುಗು ಮತ್ತು ಆಂಥೋಣಿಯೊಡನೆ ತನ್ನ ವಿವಾಹದ ನಿಶ್ಚಯ ಇವುಗಳ ಪರಿಭಾವನೆಯಲ್ಲಿ ತೊಡಗಿದ ಸಂದರ್ಭ; "ಆತ ಎಂಥ ಕೆಲಸ ಮಾಡಿಬಿಟ್ಟ! ತಾನು ಬಡವರ ಹೆಣ್ಣಾದ ಮಾತ್ರಕ್ಕೆ ಹಾಗೆ ಥೂ..... ಕೆನ್ನೆ ತುಟಿಗಳಿಗೆ........... ಅವನ ದಪ್ಪಪುಷ್ಟವಾದ ಕೈಗಳಿಂದ ತನ್ನನ್ನು ಅದೆಷ್ಟು ಬಿಗಿಯಾಗಿ.... ಆ ಜಾಗದಲ್ಲಿ ಒಂದು ಬಾರಿ ತನ್ನ ಕೈಗಳಿಂದ ತಾನೇ ಮೃದುವಾಗಿ ನೇವರಿಸಿಕೊಂಡಳು. ದುಂಡುದುಂಡಾಗಿ ಪುಟ್ಟ ಚೆಂಡಿನಂತೆ ಕೈಗೆ ಸಿಕ್ಕ ಆಕೃತಿಗೆ ತಾನೇ ವ್ಯಾಮೋಹಿತಳಾದಳು..... ಪುನಃ ಪುನಃ ತನ್ನ ಕೆನ್ನೆ ತುಟಿಗಳನ್ನು ಮುಟ್ಟಿ ನೋಡಿಕೊಂಡಳು..... ಅಲ್ಲಿ ಆವುದರದೋ ಚಿರಂತನ ಮುದ್ರೆಯೊಂದು ಒತ್ತಿ ನಿಂತಂತೆ ಕಂಡಿತು:[೬]

ಗಿಡ ನುಡಿಯಿತು ಹೂವುಧರಿಸಿ ರೋಸಿನಾ ನಿನಗೆ ಮದುವೆ! ತೆಂಗು ಕಂಗು ಹೊಂಬಾಳೆ ನುಡಿದವು ಹರಕೆಯ ಕೈಯೆತ್ತಿ ರೋಸಿನಾ ನಿನಗೆ ಮದುವೆ! ಭತ್ತದ ಗದ್ದೆ ತೆನೆತೆನೆ ತೂಗಿ ಅಕ್ಷತೆ ತೋರಿದವು ರೋಸಿನಾ ನಿನಗೆ ಮದುವೆ! ಆಗಸದಲ್ಲಿ ಬೆಳದಿಂಗಲ ಹಕ್ಕಿ ಹಾಡಿ ಹಾಡಿ ಹರಸಿ ನುಡಿಯಿತು ರೋಸಿನಾ ನಿನಗೆ ಮದುವೆ! ತನ್ನ ಮೈ ಕೈ ಎದೆಗಳಿಗೆ ಕಲ್ಪನೆಯ ಸವಿ ಮುತ್ತನ್ನು ಒತ್ತಿ ನುಡಿದಳು..... ರೋಸಿನಾ ನಿನಗೆ ಮದುವೆ. ತನ್ನ ಕೈಬೆರಳನ್ನು ತುಟಿ ಕೆನ್ನೆಗಳಿಗೆ ಮತ್ತೆ ಮತ್ತೆ ಮುತ್ತಿಟ್ಟುಕೊಂಡು ನುಡಿದಳು ನ.........ನ........ಗೆ! ..........ಮ............ದು............ವೆ......"[೭]

ಕಾದಂಬರಿಯ ಶೀರ್ಷಿಕೆ 'ಕಡಲಸೇಡು', ಈ 'ಸೇಡು'[೮] ಪದದ ಪ್ರಕಾಶಾರ್ಥದಲ್ಲಿ ಗೂಢಶಕ್ತಿಯಾದ ಕಡಲು ಬೆಸ್ತ ಜೋಸೆಫ್‌ನ ಸಾವು ತರುವ ಒಂದು ಘಟನೆ. ಆದರೆ ವ್ಯಂಗ್ಯ ಅಥವಾ ಸೂಚ್ಯಾರ್ಥದಲ್ಲಿ ಈ ಕಡಲ ಕ್ರಿಯೆ ಯುವ ರೀತಿಯಲ್ಲಿ ಸೇಡು ಎನ್ನುವ ವಿಚಾರಕ್ಕೆ ಪುಷ್ಟಿ ದೊರಕದೆ ಅದರ ಉಪಯೋಗದ

ಸಾರ್ಥಕ್ಯವನ್ನು ನಾವು ಪ್ರಶ್ನಿಸುವಂತಾಗಿದೆ. ಸಾಂಪ್ರದಾಯಿಕ ರೀತಿಯ ರೇಖಾಬೆಳವಣಿಗೆಯ ರೀತಿಯಷ್ಟೇ ಎಂದೆನ್ನಬಹುದಾದಂತೆ ಕಾದಂಬರಿಯ ಘಟನೆಗಳು ಒಂದಾದ ಮೇಲೊಂದು ನಡೆಯುತ್ತವೆ. ಇದಕ್ಕೆ ಮುಖ್ಯಕಾರಣ ವಿಸ್ತರಿಸಿದ ಕತೆಯೆಂದೆನ್ನಬಹುದಾದ ರೀತಿಯಲ್ಲಿರುವ ವಸ್ತುನಿರೂಪಣೆ. ಜೋಸೆಫ್ ಕಾಯಿಲೆಯಿಂದ ತನ್ನ ಬಂಧುಗಳೀಗೆ ಹತ್ತಿರವಾಗುವ, ಕೆಲಮಟ್ಟಿಗೆ ಫಾದರ್ ಥಾಮಸರು ದಾರಿಗೆಟ್ಟ ವಿದ್ಯಾರ್ಥಿಯನ್ನು ಉಪದೇಶಿಸುವ ಸನ್ನಿವೇಶಗಳಲ್ಲಿ ಈ ವಿಷಯ ನಮ್ಮನ್ನು ಸತಾಯಿಸದಿರುವುದು ಕಾದಂಬರಿಕಾರರ ಮಿತವಾದ ಯಶಸ್ಸನ್ನು ನಮ್ಮೆದುರು ಹಿಡಿದಂತೆ, ಸರಳತೆ ಸಂಕೀರ್ಣತೆಯಷ್ಟೇ ಪರಿಣಾಮಕಾರಿಯಾಗಬಹುದೆಂಬ ಅಂಶ ಬರಹಗಾರನ ಮಿತಸಾಫಲ್ಯತೆಯಲ್ಲಿ ಕಾಣಿಸಿಕೊಳ್ಳುತ್ತದೆ. ಇಲ್ಲಿಯ 'ಹಿನ್ನೋಟದ ಕಥನಕ್ರಮ ತಾಂತ್ರಿಕವಾಗಿ ಸಾಧಾರಣವೆನ್ನುವುದಕ್ಕಿಂತ ಯಶಸ್ಸಿನ ದೃಷ್ಟಿಯಿಂದ ಸಾಧಾರಣವೆನ್ನುವುದು ಮುಖ್ಯ.[೯]

ಕಾದಂಬರಿ ಜೀವನದ ಮೇಲೊಂದು ಭಾಷ್ಯವಾಗಿರಬೇಕೆಂದು ಬಯಸುವವರಿಗೆ ಈಸ್ಕಿಲಸ್‌ನ ಪಾತ್ರವೊಂದು ಹೇಳುವ ಮಾತುಗಳನ್ನು ಹೇಳಬಹುದು. 'ನರಿಗೆ ಬಹಳಷ್ಟು ವಿಚಾರಗಳು ಗೊತ್ತಿವೆ, ಆದರೆ ಹೆಚ್ಚಾಗಿ ಪ್ರಾಣಿಗೆ ಒಂದು ದೊಡ್ಡ ವಿಚಾರ ಗೊತ್ತಿದೆ.' 'ಕಡಲ ಸೇಡು' ಅಥವಾ 'ರೋಸಿನಾ, ಭಾಗ-೧', ಎಂದು ಕಾದಂಬರಿಯ ಶೀರ್ಷಿಕೆಯಿದ್ದು ಅದು ಅಪೂರ್ಣವೆಂದು ಸ್ಪಷ್ಟವಾಗುತ್ತದೆ. ರೋಸಿನಾ ಆಂಥೋಣಿಯರ ಕಥೆಯನ್ನು ಮುಂದುವರಿಸಿ ರಾಜು ಒಂದು ಹೊಸ ಜೀವನವನ್ನು ಆರಂಭಿಸುವ ಸೂಚನೆ ಈ ಕಾದಂಬರಿಯ ಕೊನೆಯ ವಾಕ್ಯದಲ್ಲಿದೆ. ಕಾದಂಬರಿಕಾರರು ಹಾಕಿಕೊಂಡಿದ್ದ ಯೋಜನೆಗನುಗುಣವಾಗಿ ಅದು ಪೂರ್ಣವಾಗಿದ್ದರೆ ಅದರ ಜೀವನದೃಷ್ಟಿ ಹೆಚ್ಚು ವಿಶಾಲವಾಗಬಹುದಾಗಿತ್ತು.[೧೦] ಅವರ ಅಕಾಲ ಮರಣದಿಂದ ಇದು ಸಾಧ್ಯವಾಗದೆ ಹೋಯಿತು.

'ತೋಟದ ಮನೆ' ಟಿ. ಎನ್. ಮಹದೇವಯ್ಯನವರ ಒಂದು ಅಪ್ರಕಟಿತ ಕಿರುಕಾದಂಬರಿ. ಹುಡುಗನೊಬ್ಬನ ಕಣ್ಣಿನಲ್ಲಿ ಒಂದು ಕುಟುಂಬದ ಅಥವಾ ಬದುಕಿನ ನಿರೀಕ್ಷಣೆ ನಡೆಸಿದ ಚಿತ್ರಣ ಕಾದಂಬರಿಯ ವಸ್ತು. ತಂತ್ರ 'ಪಥೇರ್ ಪಂಚಾಲಿ'ಯನ್ನು ನೆನಪಿಗೆ ತರುತ್ತದೆ.[೧೧]

ಕತೆಯಲ್ಲಿ ಮೈಚೆಲ್ಲಿರುವ ಘಟನೆಗಳು, ಅವಕ್ಕೆ ಪೂರಕವಾಗಿ ಬರುವ ವಿಸ್ತೃತ ವರ್ಣನೆಗಳು ಮನಸ್ಸನ್ನು ಮುತ್ತುತ್ತವೆ. ಓದುಗನನ್ನು ತೀರ ಆತ್ಮೀಯವಾಗಿಸಿಕೊಳ್ಳುವ ಈ ಬರವಣಿಗೆಯಲ್ಲಿ ಅನುಭವದ್ರವ್ಯವೇ ಜೀವಶಕ್ತಿ.

ಹುಡುಗನ ಹಸಿಕಣ್ಣಿಗೆ ಪರಿಸರದ ವಿಶೇಷಗಳೆಲ್ಲ ಕುತೂಹಲದ ಅನುಭವಗಳಾಗಿ ಬರುತ್ತವೆ. ತಮ್ಮ ಕುಟುಂಬದ ಅಳಿದ ಶ್ರೀಮಂತ ವೈಭವದ ಬಗ್ಗೆ ಅಜ್ಜಿ ಹೇಳುವ ನೆನಪುಗಳೆಲ್ಲ ಅವನ ಆಸಕ್ತಿ. ಕವಿಗೆ ಕತೆಯಷ್ಟೇ ರೋಮಾಂಚಕ. ಅವನು ಕಾಣುವ ಕೇಳುವ ಮತ್ತು ಅನುಭವಿಸುವ ಎಲ್ಲ ಸಂಗತಿಗಳೂ ಸವಿವರ ನಿರೂಪಣೆಗೆ ಈಡಾಗುತ್ತವೆ. ತಂತ್ರದೃಷ್ಟಿಯಿಂದ ಕೂಡ ಇದು ಔಚಿತ್ಯಪೂರ್ಣ ಅನಿವಾರ್ಯ ಎಂದು ಅನ್ನಿಸುತ್ತದೆ.

ಮುದುಕಿ ಬಸಮ್ಮಣ್ಣಿ ವಿಧವೆ. ಗಂಡನಿದ್ದಾಗ ಶ್ರೀಮಂತಿಕೆಯ ಸುಖ ಉಂಡವಳು. ಈಗ ಬಡತನದ ಕಷ್ಟದಲ್ಲಿ ಮಗ ಮೊಮ್ಮಕ್ಕಳು ಬದುಕುತ್ತಿರುವುದನ್ನು ಕಂಡು ನೋವುಣ್ಣುತ್ತಾ ಬೇಯುತ್ತಿರುವ ಜೀವ. ದೇವರು

ದೈವ ಪರಂಪರಾಗತ ನಂಬಿಕೆಗಳ ವಿಷಯದಲ್ಲಿ ಅಪಾರಶ್ರದ್ಧೆ ವಿಶ್ವಾಸ ಉಳ್ಳವಳು. ತಮ್ಮ ದುರ್ಗತಿಗೆ ದೇವರ ಕೋಪವೇ ಕಾರಣವೆಂಬುದನ್ನು ಅಚಲವಾಗಿ ನಂಬಿದವಳು. ಇಂಥ ಈ ಮುದುಕಿಯ ಮಗನೇ ನಾಗಣ್ಣ, ಇದ್ದ ಶ್ರೀಮಂತಿಕೆಯನ್ನು ಕಳೆದುಕೊಂಡು ಬಡತನದಲ್ಲಿ ಬದುಕು ಸಾಗಿಸುತ್ತಿರುವವನು, ಇವನ ಹೆಂಡತಿ ಗೌರಮ್ಮ ಹೆಸರಿಗೆ ತಕ್ಕ ಗರತಿ. ನೋವಿನಲ್ಲಿ ಬೇಯುತ್ತಿದ್ದರೂ ನಗುವನ್ನು ಚೆಲ್ಲುವ ಗುಣಧರ್ಮದಿಂದ ಕೂಡಿದ ಶೀಲವಂತೆ. ಇವರಿಗೆ ಇಬ್ಬರು ಗಂಡುಮಕ್ಕಳು.

ಹಲವು ತಲೆಮಾರುಗಳಿಂದ ಶ್ರೀಮಂತಿಕೆಯ ಸುಖವುಂಡ ಈ ಕುಟುಂಬಕ್ಕೆ ದಾನಮಾಡಿ ಗೊತ್ತೇ ಹೊರತು ದೇಹಿ ಅಂದು ಅಭ್ಯಾಸವಿಲ್ಲ. ಆದರೆ ಈ ದುರ್ಭರ ಬಡತನ, ಜಗತ್ತಿನಲ್ಲಿ ಕೆಟ್ಟು ಬದುಕಿದವರನ್ನು ನೋಡಬಹುದು, ಆದರೆ ಬದುಕಿ ಕೆಟ್ಟವರನ್ನು ನೋಡುವುದಕ್ಕಾಗುವುದಿಲ್ಲ. 'ಕೆಟ್ಟು ಪಟ್ಟಣ ಸೇರು'[೧೨] ಎಂಬ ಗಾದೆಯಂತೆ ಪಟ್ಟಣದ ಕಡೆಗೆ ಸ್ಥಿತಿ ಅರಸಿ ಹೊರಡಿದ ಈ ಕುಟುಂಬ. (ಈ ಸಂದರ್ಭದಲ್ಲಿ ಬದುಕು ದುರ್ಭರವಾದ ಹಿರಿಮುಖಗಳ ಮೌನ ಗಂಭೀರ ಇದಕ್ಕೆ ವಿರುದ್ಧವಾಗಿ ಹುಡುಗರ ಪ್ರಯಾಣದ ಉತ್ಸುಕತೆಯಿಂದ ಉಕ್ಕುತ್ತಿರುವ ಬಾಲ್ಯ ಸಹಜ ಭಾವಗಳು ನೈಜವಾಗಿ ಮೂಡಿವೆ.) ಪಟ್ಟಣದಲ್ಲಿಯೂ ಹೊಟ್ಟೆಹೊರೆಯುವುದು ಕಷ್ಟ ಅನ್ನುವ ಕ್ರೂರ ಅನುಭವ ವೇದ್ಯವಾಗುತ್ತದೆ. ಹಲವು ದಿನಗಳ ಪರಿಶ್ರಮದ ಫಲ, ದೂರದ ಹಳ್ಳಿಯೊಂದರ ಹೊರಗಿರುವ ತೋಟದ ಮನೆಗೆ ಬಂದು ವಸತಿ ಹೂಡುತ್ತಾರೆ. ಈ ತೋಟದ ಮನೆ ತುಂಬಾ ದೊಡ್ಡದೇ. ಆ ಕುಟುಂಬದ ಬಡಸ್ಥಿತಿಗೆ ತಕ್ಕಂತೆ ಬಾಡಿಗೆಯೂ ಕಡಿಮೆ. ಆದರೆ ದೆವ್ವದ ಮನೆ ಎಂಬ ಗುಮಾನಿಗೆ ಒಳಗಾಗಿ ಇರಲು ಆಯೋಗ್ಯವಾದದ್ದು. ಅನಿವಾರ್ಯಸ್ಥಿತಿ ಹೂಡಲೇಬೇಕು. ಕುಟುಂಬ ತೋಟದ ಮನೆಯಲ್ಲಿ ವಾಸಿಸತೊಡಗುತ್ತದೆ. ದೈವ ದೈವಗಳ ಬಗೆಗೆ ಆಳ ನಂಬಿಕೆವುಳ್ಳ ಅಜ್ಜಿ ಎದುರಾಗುವ ಕಷ್ಟಗಳೆಲ್ಲಕ್ಕೂ ದೆವ್ವ ದೆವ್ವಗಳ ನಂಟುತೊಡಿಸುವಳು. ಮನೆಯಲ್ಲಿ ಮಕ್ಕಳು ಕೆಮ್ಮಿದರೆ ಕ್ಯಾಕರಿಸಿದರೆ ಎಲ್ಲಕ್ಕೂ ಹಳ್ಳಿ ಪಂಡಿತನ ಕಷಾಯವೇ ಮದ್ದು. ದೆವ್ವ;[೧೩] ದೇವರುಗಳಿಗೆ ಹರಕೆ ಕಟ್ಟುವುದು. ಹೀಗೆ ಬದುಕುಸಾಗುತ್ತೆ.

ತೋಟದ ಮನೆಯ ಪರಿಸರದಲ್ಲಿ ಹುಡುಗರ ಆಟಪಾಟಕ್ಕೆ ಅವಕಾಶ ಅಪಾರ. ದೂರದ ನೆರೆಮನೆಯ ಚಿಕ್ಕಹುಡುಗಿ ಪಾರ್ವತಿಯ ಜತೆ ಬೇರೆ, ಕೂಡಿ ಆಡುವುದು, ಕಿತ್ತಾಡುವುದು, ಹಿರಿಯರಿಂದ ಬೈಸಿಕೊಳ್ಳುವುದು ನಿತ್ಯದ ಅನುಭವ. ಈ ಸಣ್ಣ ಸಂಗತಿಗಳೆಲ್ಲ ಕೃತಿಯಲ್ಲಿ ವಿವರವಿವರವಾಗಿ ಬಿಚ್ಚಿಕೊಳ್ಳುತ್ತವೆ. ವಾಸ್ತವಿಕವೂ ಸಹಜವೂ ಆದ ಬಣ್ಣನೆ ಜೀವಂತಿಕೆಯಿಂದ ಕೂಡಿದೆ. ಹೀಗಿರುವಾಗ ಹುಡುಗರಿಗೆ ಮತ್ತೊಬ್ಬ ತಮ್ಮ ಹುಟ್ಟಿದ. ಅಜ್ಜಿಯ ಅಪೇಕ್ಷೆಯ ಮೇರೆಗೆ 'ಮುದ್ದಣ್ಣ' ಹೆಸರಿಟ್ಟರು. ತನ್ನ ಮಗ ಮುದ್ದಣ್ಣನೇ. ಮತ್ತೆ ತನ್ನ ಮಗನ ಮಗನಾಗಿ ಹುಟ್ಟಿದ್ದಾನೆ, ಈ ಕುಟುಂಬಕ್ಕೆ ಬಂದಿರುವ ದಾರಿದ್ರ್ಯ ಈ ಮಗು ಮುದ್ದಣ್ಣನಿಂದಲೇ ದೂರವಾಗುತ್ತದೆ-ಎಂಬುದು ಅಜ್ಜಿಯ ತುಂಬು ನಂಬಿಕೆ. ಹೀಗಾಗಿ ಮುದ್ದಣ್ಣನನ್ನು ಯಾರು ಏನೂ ಅನ್ನುವ ಹಾಗಿಲ್ಲ. ಅಜ್ಜಿಯ ಶ್ರೀರಕ್ಷೆ ಅವನಿಗೆ.

ಈ ಮಧ್ಯೆ ಶ್ರೀಮಂತ ಕುಟುಂಬಕ್ಕೆ ಕೊಟ್ಟಿದ್ದ ಮನೆಯ ಮಗಳು ತನ್ನ ತವರನ್ನು ಮಗನ ಮದುವೆಗೆ ಕರೆಯುವುದಕ್ಕೆ ಬರುತ್ತಾಳೆ. ಮನೆಗೆ ಬಂದ ಮಗಳಿಗೆ ಮಾಡಿ, ನೀಡಲಾಗದ ತಮ್ಮ ದುಸ್ಥಿತಿಯ ಬಗೆಗೆ

ಅಸಹಾಯಕರಾಗಿ ಅಳಲುತ್ತಾರೆ, ಕುಟುಂಬದವರು. ಮಗಳು ತನ್ನ ತೌರಿನ ಸ್ಥಿತಿಗೆ ತುಂಬ ಮರುಗಿ ನಡೆಯುತ್ತಾಳೆ.

ಕುಟುಂಬದವರು ಮದುವೆಗೆ ಹೋಗಲೇಬೇಕು. ಮುಯ್ಯಿನ ಪ್ರಶ್ನೆ ಕಾಡುತ್ತದೆ. ಕೊನೆಗೆ ಗೌರಮ್ಮಳ ಕೊರಳಿನ ಲಕ್ಷ್ಮೀಕಾಸನ್ನೇ ಮಾರಿ ಮದುವೆಗೆ ಹೋಗುತ್ತಾರೆ. ಸಡಗರದ ಓಡಾಟದಲ್ಲಿ ಭಾಗಿಯಾಗುತ್ತಾರೆ. ಹಿರಿಯ ಹುಡುಗ ಶಿವಮೂರ್ತಿಯ ಜವಾಬ್ದಾರಿಯ ಆಶ್ರಯದಲ್ಲಿ ಮಲಗಿದ್ದ ಪುಟ್ಟಕೂಸು ಮುದ್ದಣ್ಣನ ಮೇಲೆ, ಮುಯ್ಯಿನ ಸಾಮಾನು ತೆಗೆದುಕೊಂಡು ಹೋಗುವುದಕ್ಕೆ ಬಂದ ಪುಟ್ಟಣ್ಣ ಎಂಬುವನು ಕಾಲಿಸುತ್ತಾನೆ. (ಈ ಘಾತ ಯಾರಿಗೂ ಗೊತ್ತಾಗುವುದಿಲ್ಲ) ಮುದ್ದಣ್ಣ ನೋವಿನಿಂದ ಚೀರುತ್ತಾನೆ. ಕುಟುಂಬದವರೆಲ್ಲ ಗಾಬರಿಯಿಂದ ಕೂಡುತ್ತಾರೆ. ಏಕೆ ಎಂಬುದು ಗೊತ್ತಿಲ್ಲದೆ ಅಳಲುತ್ತಾರೆ. ಮಗುವಿನ ನೋವು ನಿಮಿಷ ನಿಮಿಷಕ್ಕೆ ಹೆಚ್ಚಾಗುತ್ತಿದೆ. ಅಲ್ಲಿರುವುದು ಅಸಾಧ್ಯವೆನ್ನಿಸುತ್ತೆ. ಕುಟುಂಬದವರೆಲ್ಲ ಮದುವೆ ಮನೆ ಬಿಟ್ಟು ಅನಿವಾರ್ಯವಾಗಿ ಹಳ್ಳಿಗೆ ಹಿಂತಿರುಗುತ್ತಾರೆ. ಆದರೆ ಮಗು ಮುದ್ದಣ್ಣ ಮಾತ್ರ ಬದುಕುವುದಿಲ್ಲ.

ದೆವ್ವದ ಮನೆಯೆಂಬ ಭೀತಿಯನ್ನು ಆಳವಾಗಿ ಬೆಳೆಸಿಕೊಂಡಿದ್ದ ಅಜ್ಜಿಗೆ ಮಾತ್ರ ಮುದ್ದಣ್ಣನ ಸಾವಿಗೆ ಈ ಮನೆಯೇ ಕಾರಣ ಎಂಬ ನೋವು, ಕೋಪ. ಮೊಮ್ಮಗನಾಗಿ ಹುಟ್ಟಿದ್ದ ಮಗ ಮತ್ತೆ ಕೈಬಿಟ್ಟು ಹೋದದ್ದು ಅವಳಿಗೆ ಭರಿಸಲಾರದ ದುಃಖ. ತೋಟದ ಮನೆಯಲ್ಲೇ ಇದ್ದರೆ ಮತ್ತು ತೊಂದರೆ ತಪ್ಪಿದ್ದಲ್ಲ ಎಂಬ ವ್ಯಾಪಕ ಭೀತಿ. ಅಜ್ಜಿಯ ಈ ಸ್ಥಿತಿಗಾಗಿ ಮನೆಯನ್ನು ಬಿಡಲೇಬೇಕಾಗುತ್ತದೆ. ಬಿಡುತ್ತಾರೆ. ಆದರೆ ಮುದ್ದಣ್ಣನ ಸಾವಿನ ನಂತರ ಅವನ ತಾಯಿ ಗೌರಮ್ಮನ ಮುಖದಲ್ಲಿ ಸದಾ ಮಿನುಗುತ್ತಿದ್ದ ತಿಳಿನಗೆ ಮಾತ್ರ ಹಲವು ಕಾಲ ಕಾಣದಾಗುತ್ತದೆ.

ಹೀಗೆ ತೋಟದ ಮನೆಯಲ್ಲಿ ಒಂದು ಕುಟುಂಬ ಬದುಕುವುದಕ್ಕೆ ತೊಡಗಿದಾಗಿನ ಆಗುಹೋಗುಗಳ ಚಿತ್ರಣ ಕಾದಂಬರಿಯ ಹೂರಣ, ಕಾದಂಬರಿಯಲ್ಲಿ ಕತೆಗೆ ಓಟವಿಲ್ಲ. ಕುಟುಂಬ ಎದುರಿಸುವ ನಿತ್ಯದ ಅನುಭವಗಳೇ ಇದರ ಜೀವಾಳ.[೧೪] ಈ ಮಿತಿಯೇ ಕಾದಂಬರಿಯ ದೋಷಕೂಡ.

ಆದರೆ ಕಾದಂಬರಿಯ ಅಂತರಂಗದಲ್ಲಿ ಬದುಕಿನಲ್ಲಿ ಹಾಸು ಹೊಕ್ಕಾಗಿ ಬರುವ ನಂಬಿಕೆ, ಆಚಾರ, ವಿಚಾರ ಅವುಗಳ ಟೊಳ್ಳುಗಟ್ಟಿತನ ಮುಂತಾದವು ಕಾದಂಬರಿಗೆ ಬೇಕಾಗುವ ಸಾವಯವ ಸಂಬಂಧವನ್ನು ತೆಳುವಾಗಿಯಾದರೂ ಒದಗಿಕೊಡುತ್ತವೆ. ಓದುಗನ ಕುತೂಹಲವನ್ನು ಸೆರೆಹಿಡಿದು ಬೆಳೆಯುತ್ತವೆ.

■■

೭

# ಕಗಾವ ಮಂತ್ರವಾಣಿ

ಟೊಯೊಹಿಕೊ ಕಗಾವ ಜಪಾನಿನ ಪ್ರಸಿದ್ಧ ಸಾಹಿತಿ, ಸಮಾಜ ಸೇವಕರು, ಮಹಾತ್ಮ ಗಾಂಧೀಜಿಯ ಜೀವನ ಮತ್ತು ಕಾರ್ಯಚಟುವಟಿಕೆಗಳನ್ನು ಬಲ್ಲವರು. ಕಗಾವ ಅವರನ್ನು 'ಜಪಾನಿನ ಗಾಂಧಿ' ಎಂದು ಕರೆಯುತ್ತಾರೆ. ಅವರ ಸರಳ ಜೀವನ, ಬಡವರು ಮತ್ತು ದಲಿತರ ವಿಷಯದಲ್ಲಿ ಅವರ ಹೃದಯ ಕುದಿಯುತ್ತಿದ್ದ ರೀತಿ ಇವುಗಳನ್ನು ಮಾತ್ರ ಗಮನದಲ್ಲಿಟ್ಟುಕೊಂಡರೆ ಈ ಹೋಲಿಕೆ ಸಲ್ಲುತ್ತದೆ. ಆದರೆ ಅನೇಕ ವಿಷಯಗಳಲ್ಲಿ ಗಾಂಧೀಜಿ ಮತ್ತು ಕಗಾವ ಅವರ ನಡುವೆ ಬೇಕಾದಷ್ಟು ವ್ಯತ್ಯಾಸಗಳು ಉಂಟು. ಒಟ್ಟಿನಲ್ಲಿ ಮಾರ್ದವತೆ, ದೈವಭಕ್ತಿ, ನೋವಿನಲ್ಲಿರುವವರ ವಿಷಯದಲ್ಲಿ ಅನುಕಂಪ, ಮಾತು ಮತ್ತು ಬರಹಗಳಲ್ಲಿ ಶ್ರೇಷ್ಠ ಸಾಹಿತ್ಯಿಕ ಶೈಲಿ ಇವು ಕಗಾವ ಅವರ ವಿಶಿಷ್ಟ ಗುಣಗಳು. ಆದ್ದರಿಂದ ಮಾರ್ದವ ಹೃದಯಿಯೂ, ಆದರ್ಶಪ್ರಿಯರೂ, ಶ್ರೇಷ್ಠ ಸಾಹಿತಿಯೂ ಆದ ಶ್ರೀ. ಟಿ.ಎನ್. ಮಹದೇವಯ್ಯನವರನ್ನು ಕಗಾವ ಅವರ ವ್ಯಕ್ತಿತ್ವ ಮತ್ತು ಬರವಣಿಗೆಗಳು ಆಕರ್ಷಿಸಿದ್ದು ಸಹಜವಾಗಿಯೇ ಇದೆ. ಅಲ್ಲದೆ ಕಗಾವ ಅವರು ಭಾರತಕ್ಕೆ ಬಂದಾಗ ಅವರ ಉಪನ್ಯಾಸವನ್ನು ತಾವು ಕೇಳಿದುದಾಗಿ ಶ್ರೀ ಮಹದೇವಯ್ಯನವರು ಗುರುತು ಹಾಕಿಕೊಂಡಿದ್ದಾರೆ. ಕಗಾವ ಅವರ ವ್ಯಕ್ತಿತ್ವಕ್ಕೆ ಮಾರುಹೋದ ಮಹದೇವಯ್ಯನವರು ಕನ್ನಡಿಗರಿಗೆ ಕಗಾವ ಅವರ ಚಿಂತನೆಗಳಲ್ಲಿ ಕೆಲವನ್ನಾದರೂ ಪರಿಚಯ ಮಾಡಿಕೊಡುವ ಪ್ರಯತ್ನ ನಡೆಸಿರುವರು.

ಈ ಪ್ರಯತ್ನದಲ್ಲಿ ಕಗಾವ ಅವರನ್ನು ಕುರಿತು ವಿಲಿಯಂ ಆಕ್ಸ್‌ಲಿಂಗ್ (Willam Axing) ಎನ್ನುವವರು ರಚಿಸಿರುವ ಜೀವನ ಚರಿತ್ರೆಯನ್ನು ಮಹದೇವಯ್ಯನವರು ಸಂಗ್ರಹಿಸಿದರು. ಆ ಗ್ರಂಥ ಲಂಡನ್ನಿನಲ್ಲಿ ೧೯೩೩ರಲ್ಲಿ ಮೊದಲ ಬಾರಿಗೆ ಪ್ರಕಟವಾಗಿದೆ. ಕಗಾವ ಅವರ ನಿಕಟವಾದ ಪರಿಚಯ ಲಾಭದಿಂದ ಆಕ್ಸ್‌ಲಿಂಗ್‌ರವರು ಈ ಗ್ರಂಥವನ್ನೇ ರಚಿಸಿದ್ದಾರೆ. ಕಗಾವ ಅವರ ಜೀವನ ಚರಿತ್ರೆಯನ್ನು ತಕ್ಕಮಟ್ಟಿಗೆ ವಿಸ್ತಾರವಾಗಿಯೇ ಲೇಖಕರು ನಿರೂಪಿಸಿದ್ದಾರೆ. ಒಂದು ಮುಗಿದು ಇನ್ನೊಂದು ಆರಂಭವಾಗುವಾಗ ನಡುವೆ ಲೇಖಕರು ಕಗಾವ ಅವರದ್ದೇ

ಚಿಂತನೆಗಳನ್ನು ಉದ್ಧರಿಸಿದ್ದಾರೆ. ಅವೆಲ್ಲ ಕಗಾವ ಅವರ ಧ್ಯಾನಸ್ಥ ಚಿಂತನೆಗಳನ್ನು 'Meditations' ಎಂಬ ಹೆಸರಿನಲ್ಲಿ ಪ್ರಕಟವಾಗಿದೆ. ಮಹದೇವಯ್ಯನವರು ಈ ಚಿಂತನೆಗಳನ್ನು ಅಧ್ಯಯನ ಮಾಡಿ ಅವುಗಳಲ್ಲಿ ಹೆಚ್ಚಿನವನ್ನು ಅನುವಾದಿಸಿ 'ಕಗಾವ ಮಂತ್ರವಾಣಿ' ಎಂದು ಹೆಸರು ಕೊಟ್ಟಿದ್ದಾರೆ. ಇದನ್ನು 'ಮಂತ್ರವಾಣಿ' ಎಂದು ಕರೆದಿರುವುದರಿಂದ ಮಹದೇವಯ್ಯನವರಿಗೆ ಕಗಾವ ಹಾಗೂ ಅವರ ಚಿಂತನೆಗಳ ಬಗೆಗೆ ಎಷ್ಟು ಪೂಜ್ಯಭಾವನೆಯಿದ್ದಿತು[೨] ಎಂಬುದು ವ್ಯಕ್ತವಾಗುತ್ತದೆ.

ಕಗಾವ ಅವರ ಚಿಂತನೆಯ ಸರಣಿಯನ್ನು ಅನುಸರಿಸಿ ವಿಚಾರ ಮಾಡುವುದು ಸಾಧ್ಯವಾಗಬೇಕಾದರೆ ಅವರ ಜೀವನದ ಸಂಕ್ಷಿಪ್ತವಾದ ಪರಿಚಯ ಅಗತ್ಯ. ಆ ದೃಷ್ಟಿಯಿಂದ ಅವರ ಜೀವನದ ಮುಖ್ಯವಾದ ಕೆಲವು ಘಟನೆಗಳನ್ನು, ಅವರ ವ್ಯಕ್ತಿತ್ವ ಸ್ಪಷ್ಟವಾಗಿ ನಮಗೆ ತಿಳಿಯುವಂತಾಗಲಿ ಎನ್ನುವ ಕಾರಣಕ್ಕಾಗಿ ಇಲ್ಲಿ ಕೊಡಲಾಗಿದೆ.

ಕಗಾವ ತಂದೆ ಶೀಲರಹಿತ ವ್ಯಕ್ತಿ. ಕಗಾವನ ತಂದೆ ಇಟ್ಟುಕೊಂಡವರಲ್ಲಿ ಒಬ್ಬರ ಮಗನು. ಈತ ಯಾರಿಗೂ ಬೇಡದ ಮಗು. ಅವನು ಹುಟ್ಟಿದ್ದು ಜುಲೈ ೧೦, ೧೮೧೩. ತಂದೆಯ ಮೊದಲ ಹೆಂಡತಿ ಮತ್ತು ಆಕೆಯ ತಾಯಿ ಅವ ಎಂಬ ಹಳ್ಳಿಯಲ್ಲಿದ್ದರು. ಅಲ್ಲಿ ಇವನು ಬೆಳೆದ. ಮನೆಯಲ್ಲಾಗಲಿ, ಶಾಲೆಯಲ್ಲಾಗಲಿ ಯಾವ ಅಕ್ಕರೆಯನ್ನೂ ಕಾಣದೆ ಹೋದ. ದೊಡ್ಡವನಾಗುತ್ತಾ ಬಂದಂತೆ ಪುಸ್ತಕಗಳು ಇವನ ಅಗಲದ ಸಂಗಾತಿಗಳಾದರು. ಹೊಟ್ಟೆ ಮಾತ್ರ ಎಂದೂ ತುಂಬಿ ಅರಿಯದು. ಆದರೂ ಹರಿಯುವ ನದಿ, ಸುತ್ತಲಿನ ಪ್ರಕೃತಿಯ ದೃಶ್ಯಗಳು ಇವನ ಹೃದಯವನ್ನು ತುಂಬಿದವು. ಬಾಲ್ಯದಲ್ಲಿಯೇ ಆತ ಕ್ರೈಸ್ತಧರ್ಮದ ಪ್ರಭಾವಕ್ಕೆ ಒಳಗಾದ. ಬೈಬಲ್ ತುಂಬ ಪ್ರಿಯವಾದ ಗ್ರಂಥವಾಯಿತು. ಟೋಕಿಯೋದ ಪ್ರೆಸ್‌ಬಿಟೇಯನ್ ಕಾಲೇಜಿನಲ್ಲಿ ಇವನಿಗೆ ಪ್ರವೇಶ ದೊರಕಿತು. ಅವನಿಗೆ ಓದಿನ ಹುಚ್ಚು ಹೆಚ್ಚಾಗಿ ಅವನ ವ್ಯಕ್ತಿತ್ವವನ್ನೆಲ್ಲಾ ಆಕ್ರಮಿಸಿಕೊಂಡಿತು. ರಷ್ಯಾ-ಜಪಾನ್ ಯುದ್ಧ ಅದರ ಉಗ್ರಾವಸ್ಥೆಯಲ್ಲಿದ್ದಾಗ ಆತ ಟಾಲ್‌ಸ್ಟಾಯ್ ಅವರ ಗ್ರಂಥಗಳಿಂದ ಪ್ರಭಾವಿತನಾದ. ಆಗಲೇ ಈತನಿಗೆ ಅಹಿಂಸೆಯ ದೀಕ್ಷೆ ಸಿಕ್ಕಿದ್ದು. ಶಾಂತಿಮಂತ್ರವನ್ನು ಜಪಿಸಿ, ಯುದ್ಧವನ್ನು ಉಗ್ರವಾಗಿ ವಿರೋಧಿಸಿ ಭಾಷಣ ಮಾಡಿದ. 'ದೇಶದ್ರೋಹಿ'[೩] ಎಂಬ ಬಿರುದು ಸಿಕ್ಕಿದು. ಅಷ್ಟೇ ಅಲ್ಲ ಸಂಜೆ, ಯಾರೂ ಇಲ್ಲದ ಸ್ಥಳಕ್ಕೆ ಇವನನ್ನು ಬರಮಾಡಿಕೊಂಡು ಇಪ್ಪತ್ತು ಜನ ದಾಂಢಿಗರು ಇವನನ್ನು 'ಅಜ್ಜಿ-ಜಜ್ಜಿ' ಮಾಡಿದರು. ಈತನ ಅಹಿಂಸೆಯ ವ್ರತಕ್ಕೆ ಪ್ರಯೋಗ ಶಾಲೆ ಅದೇ ಆಯಿತು. ಇವನು ಕೈಕಟ್ಟಿಕೊಂಡು ತಲೆ ಬಾಗಿಸಿ ಹೊಡೆತಗಳನ್ನು ತಿಂದ. ಜೊತೆಗೆ "ತಂದೆಯೇ, ಇವರನ್ನು ಕ್ಷಮಿಸು, ತಾವೇನು ಮಾಡುತ್ತಿದ್ದೇವೆ ಎಂಬುದು ಇವರಿಗೆ ತಿಳಿಯದು" ಎಂದು ಕ್ರಿಸ್ತನಂತೆ ಪ್ರಾರ್ಥಿಸಿ, ಹರಸಿದ. ಒಂದು ಸ್ವಾರಸ್ಯದ ಸಂಗತಿಯೆಂದರೆ ಆ ಇಪ್ಪತ್ತು ಜನ ದಾಂಢಿಗರ ಗುಂಪಿನಲ್ಲಿ ಅನೇಕರು ಮುಂದೆ ದೊಡ್ಡ ಹುದ್ದೆಗಳಿಗೆ ಏರಿದರು. ಒಬ್ಬನಂತೂ ಮತ್ತೆ ಇವನ ತಲೆಯ ಮೇಲೆ ಕೈಯಿಟ್ಟ, ಇವನಿಗೆ ಕ್ರೈಸ್ತಮತ ದೀಕ್ಷೆನೀಡಲು-ಪಾದ್ರಿಯಾಗಿ![೪]

ಕಾಲೇಜಿನ ಎರಡನೇ ವರ್ಷದಲ್ಲಿ ಕಗಾವ ಕ್ಷಯರೋಗಕ್ಕೆ ಬಲಿಯಾದ. ಹೊಟ್ಟೆಗೆ ಸರಿಯಾಗಿ ಆಹಾರವಿಲ್ಲ. ವಾಸಕ್ಕೆ ಸರಿಯಾದ ಸ್ಥಳವಿಲ್ಲ, ಇನ್ನೇನಾದೀತು?[೫] ಆದರೆ ಅದೇ ಸ್ಥಿತಿಯಲ್ಲಿ ಆತ ಒಂದು ಕಾದಂಬರಿ ಬರೆದ. ಅದು ಬಹು ಬೇಗ ಪ್ರಖ್ಯಾತಿ ಪಡೆಯಿತು.

ಇಪ್ಪತ್ತೊಂದನೆಯ ವಯಸ್ಸಿನಲ್ಲಿ ಕಗಾವ ತನ್ನ ಜೊತೆಯವರೆಲ್ಲ ದಿಗ್ಭ್ರಾಂತರಾಗುವಂತಹ ಒಂದು ನಿರ್ಣಯ ಕೈಗೊಂಡು ಅದನ್ನು ಕಾರ್ಯಗತ ಮಾಡಿದ : ಷಿಂಕಾವದ ಕೊಳಚೆ ಪ್ರದೇಶದಲ್ಲಿ ಹತ್ತು ಸಾವಿರ ಜನ ಹಂದಿಗಳಂತೆ ಉಸಿರಾಡುತ್ತಿದ್ದ ಸ್ಥಳದಲ್ಲಿ ವಾಸಮಾಡಲು ಹೋದ. ಅಲ್ಲಿ ಒಂದು ಮನೆಯ ವಿಸ್ತೀರ್ಣ 6'X6'! ಗಾಳಿ, ಬೆಳಕುಗಳಿಗೆ ಆಜನ್ಮ ಶತ್ರು ಅವು. ಕಿಟಕಿ ಎಂಬುದನ್ನು ಕೇಳೇ ಇಲ್ಲದ ಸ್ಥಳ ಅದು. ಚರಂಡಿಯೇ ರಸ್ತೆ! ದಟ್ಟ ದಾರಿದ್ರ್ಯದ ವಿಹಾರಸ್ಥಾನವಾದ ಆ ಕೊಳಚೆಯಲ್ಲಿ ಕಗಾವನ ವಾಸ ಆರಂಭವಾಯಿತು.ಅನೇಕ ಸಾಂಕ್ರಾಮಿಕ ರೋಗಗಳಿಗೆ ಉಗ್ರಾಣವಾಗಿದ್ದ ಅನೇಕರು ಇವನು ಮನೆ(?)ಯಲ್ಲಿ ಬಂದು ನೆಲೆಸಿದರು. ಈತ ಅವರಿಗೆ ಸೇವೆ-ಶುಶ್ರೂಷೆ ಮಾಡುವುದರ ಜೊತೆಗೆ ಅವರಿಗೆ ಹೊಟ್ಟೆಗೂ ಹಾಕಬೇಕಾಯಿತು! ಹಾಕಿದ ದಿನ ಇವನನ್ನು ಮಿತ್ರನೆಂದೂ, ಹಾಕಲು ಸಾಧ್ಯವಾಗದ ದಿನ ಇವನನ್ನು ಶತ್ರುವೆಂದೂ ಭಾವಿಸಿ ಅದಕ್ಕೆ ತಕ್ಕಂತೆ ಇವನಿಗೆ ಸ್ನೇಹ ದ್ವೇಷಗಳ ಕಾಣಿಕೆ ನೀಡಿದರು.[೬]

ಮಾನವ ಮನಸ್ಸಿನ ಕ್ರೌರ್ಯದ ಆಳವನ್ನೂ, ಕಾಮ ಮುಟ್ಟಬಹುದಾದ ವಿಕೃತಿಯ ಪರಮಾವಧಿಯನ್ನೂ ಕಗಾವ ಈ ಕೊಳಚೆ ಪ್ರದೇಶದಲ್ಲಿ ಕಂಡ. ಅವನ ಹೃದಯ ನಡುಗಿದರೂ ಇಚ್ಛಾಶಕ್ತಿ ಅವನನ್ನು ಅಲ್ಲಿಂದ ಅಲುಗಾಡಗೊಡಲಿಲ್ಲ. ಅವನ ಸೇವೆ ಕ್ರೈಸ್ತ ತತ್ವಬೋಧನೆಗಳು ಏಕಪ್ರಕಾರವಾಗಿ ನಡೆಯುತ್ತಲೇ ಹೋದುವು. ಜನ ಅವನ ಸೇವೆಯನ್ನು ಸ್ವೀಕರಿಸಿದರು. ಅವನ ತತ್ವಬೋಧೆಯನ್ನು ಮಾತ್ರ ಅವನಿಗೆ ಹಿಂದಕ್ಕೆ ಎಸೆದರು. ಬೇಡದ ಮಕ್ಕಳನ್ನು ತಂದು ಇವನ ಮಡಿಲಿಗೆ ಎಸೆದು ಹೋದರು. ಇದೆಲ್ಲ ಅವನ ವ್ಯಕ್ತಿತ್ವಕ್ಕೆ ಹೊಸ ಹೊಸ ಆಯಾಮಗಳನ್ನು ನೀಡುತ್ತಾ ಹೋದವು. ಅವನ ಮನಸ್ಸು ಹೆಚ್ಚು-ಹೆಚ್ಚು ವ್ಯಕ್ತವಾಗುತ್ತ ಹೋದಂತೆ ಅವನ ಬುದ್ಧಿಯೂ ಪ್ರಖರವಾಗುತ್ತಾ ಹೋಯಿತು. "ಬಡತನದ ಮನಶ್ಶಾಸ್ತ್ರೀಯ ವಿವೇಚನೆ"[೭] (The psychology of poverty) ಎಂಬ ಎರಡನೆಯ ಪುಸ್ತಕವನ್ನು ಬರೆದ. ಜೊತೆ ಜೊತೆಗೆ ಒಂದು ಕವನ ಸಂಕಲನವನ್ನು, ಅರ್ಥಶಾಸ್ತ್ರವನ್ನು ಕುರಿತ ಒಂದು ಗ್ರಂಥವನ್ನು ಪ್ರಕಟಿಸಿದ. "ಕೊಳಚೆ ಪ್ರದೇಶವು ಜೀವನ ಮತ್ತು ಮಾನವ ಸಮಾಜಗಳ ಪ್ರಯೋಗಶಾಲೆ"[೮] ಎಂದು ಸಾರಿದ. ಆ ವಿಷಯಕ್ಕೆ ಸಂಬಂಧಿಸಿದಂತೆ ಅವನ ಪ್ರಯೋಗಗಳು ಮುಂದುವರಿಯುತ್ತಾ ಹೋದವು.

ಔದ್ಯೋಗೀಕರಣವು ಮಾನವರನ್ನು ಪಶುಗಳಿಗಿಂತ ಹೀನಸ್ಥಿತಿಗೆ ಇಳಿಸಿದೆ. ಬಡತನ ಹೆಣ್ಣುಮಕ್ಕಳನ್ನು ನಿರ್ಭಾಗ್ಯ. ವೇಶ್ಯೆಯರನ್ನಾಗಿಸಿದೆ. ಕಗಾವ ಇವರ ಉದ್ಧಾರಕ್ಕೆ ಎದ್ದುನಿಂತ. ಜಪಾನಿನ ಇಪ್ಪತ್ತೈದು ಲಕ್ಷ ಮೂಕ ಮಾನವರಿಗೆ ವಾಣಿಯಾದ. ಅವರ ಉದ್ಧಾರಕ್ಕೆ ಪಣತೊಟ್ಟ ವೀರನಾದ. "ಜಪಾನಿನ ಕಾರ್ಮಿಕರ ಚಳುವಳಿಗೆ ಸುಜುಕಿ (Suzuki) ತಂದೆಯಾದರೆ, ಕಗಾವ ತಾಯಿ"[೯] ಎಂಬ ಮಾತು ಜನಜನಿತವಾಯಿತು. ಇಂಥ ಚಳುವಳಿಯ ನಾಯಕರು ತಲುಪುವ ಸ್ಥಳವನ್ನೇ ಇವನೂ ತಲುಪಿದ-ಜೈಲು. ಬಿಡುಗಡೆ-ಮತ್ತೆ ಸೆರೆಮನೆ-ಹೋರಾಟ ಮುಂದುವರಿಯಿತು. ಕಗಾವ ಜನರ ಗೌರವಕ್ಕೆ ಪಾತ್ರನಾದ ನಾಯಕನಾದ. ಮಧ್ಯೆ ಮಧ್ಯೆ ಬೇಸತ್ತ ಬಡ ಕಾರ್ಮಿಕರ ಆಗ್ರಹಕ್ಕೂ ಪಾತ್ರನಾದ. ಆದರೆ ಈತ ಮಾತ್ರ ಯಾವುದರಿಂದಲೂ ವಿಚಲಿತನಾಗದೆ ತನ್ನ ಕರ್ಮಯೋಗವನ್ನು ಮುಂದುವರಿಸಿದ.

೧೯೩೦-೩೧ ಜಪಾನಿನ ಇತಿಹಾಸದಲ್ಲಿ ಅತ್ಯಂತ ಕರಾಳ ವರ್ಷ. ನಿರುದ್ಯೋಗ, ಬಡತನಗಳ ಜೊತೆಗೆ ಆಗಷ್ಟೆ ಜಪಾನನ್ನು ಬುಡಮಟ್ಟ ಅಲುಗಿಸಿದ್ದ ಭೂಕಂಪ ಜನರನ್ನು ಕಂಗಾಲುಗೊಳಿಸಿತು. ಟೋಕಿಯೋದ ಮೇಯರ್ ಹೊರಿಕಿಂ ಕಗಾವನ ನೆರವನ್ನು ಬೇಡಿದನು. ಕ್ಷೇಮವಿಭಾಗದ ಮುಖ್ಯಸ್ಥನಾಗಿ ಕೆಲಸ ನಿರ್ವಹಿಸುವಂತೆ ಕೇಳಿಕೊಂಡನು. ಸಂಬಳ ವರ್ಷಕ್ಕೆ ೧೮೦೦ ಪೌಂಡುಗಳು. ಜೊತೆಗೆ ಅವನ ಉಪಯೋಗಕ್ಕೆ ಒಂದು ಕಾರು. ಕಗಾವ ಕೆಲಸವನ್ನೇನ್ನೋ ಒಪ್ಪಿಕೊಂಡ ಆದರೆ ಸಂಬಳ ತೆಗೆದುಕೊಳ್ಳಲು ನಿರಾಕರಿಸಿದ.ಬಡತನದ ಬಾಳು ಅವನಿಗೆ ಒಗ್ಗಿಹೋಗಿತ್ತು.ಕೊಳಚೆ ಪ್ರದೇಶದಲ್ಲಿ ಧರಿಸುತ್ತಿದ್ದ ಅತ್ಯಂತ ಅಗ್ಗದ ಸೂಟ್ ಧರಿಸಿ ಮೇಯರ್ ಆಫೀಸಿನಲ್ಲಿ ಕೆಲಸಕ್ಕೆ ಹಾಜರಾಗುತ್ತಿದ್ದ. ದಿನವಿಡೀ ದುಡಿತ, ನಿರುದ್ಯೋಗದ ಸಮಸ್ಯೆಯನ್ನು ಗಣನೀಯವಾದ ರೀತಿಯಲ್ಲಿ ಪರಿಹರಿಸುವುದರಲ್ಲಿ ಕಗಾವ ಯಶಸ್ವಿಯಾದ. ಕೇವಲ ಸಮಾಜ ಸುಧಾರಣೆ, ಕೊಳಚೆ ಪ್ರದೇಶದ ಜನರ ಉನ್ನತಿಗಾಗಿ ಶ್ರಮಿಸುವುದು ಇಷ್ಟುಮಾತ್ರಕ್ಕೆ ಕಗಾವನ ಕ್ಷೇತ್ರ ಸೀಮಿತವಾಗಲಿಲ್ಲ. ಆತ ಒಬ್ಬ ಅನುಭಾವಿ. ಭಗವಂತ ಅವನ ಪಾಲಿಗೆ ಸತ್ಯಸ್ಯ ಸತ್ಯ ವಸ್ತು. "ಭಾರತದಲ್ಲಿ ಗಾಂಧೀಜಿ ಬೆಳಗಿನ ಜಾವ ನಾಲ್ಕು ಗಂಟೆಗೇ ಪ್ರಾರ್ಥನೆ ಮಾಡುತ್ತಾರೆ ಎಂದು ಕೇಳಿದ್ದೇನೆ. ನಾವೂ ಅದೇ ಕ್ರಮವನ್ನು ಅನುಸರಿಸಬೇಕು"[೧೦] ಎಂದು ಕಗಾವ ಬರೆದ. ಆದರಂತೆ ಬೆಳಗಿನ ಜಾವ ನಾಲ್ಕು ಗಂಟೆಗೆ ಏಕಾಂತದಲ್ಲಿ ಭಗವಂತನ ಮುಂದೆ ತನ್ನ ಅಂತರಂಗವನ್ನು ತೆರೆಯುತ್ತಿದ್ದ. 'ನಮ್ಮ ಬದುಕಿನ ಅತ್ಯಂತ ಸಂತಸದ ಕ್ಷಣಗಳು ಅವೇ' ಎನ್ನುತ್ತಿದ್ದ ಕಗಾವ. ಪ್ರಕೃತಿಯ ರುದ್ರ ರಮಣೀಯತೆಯೂ ಲಾಲಿತ್ಯವೂ ಅವನಿಗೆ ಭಗವಂತನೊಡನೆ ಸಾಮರಸ್ಯವನ್ನು ಸಾಧಿಸುವ ಸಾಧನಗಳಾದವು. 'ಮಳೆ, ಬಿರುಗಾಳಿ, ಗುಡುಗು, ಮಿಂಚು, ಸಿಡಿಲುಗಳು ಎಷ್ಟು ಮನೋಹರ'[೧೧] ಎನ್ನುತ್ತಿದ್ದ ಆತ. ಆತನ ಮಾತುಗಳು ಇವು :

"ಫ್ಯೂಜೀ ಪರ್ವತವೂ ಜಪಾನಿನ ಆಲ್ಪ್ಸ್ ಪರ್ವತವೂ ನನ್ನ ಹುಬ್ಬಿನ ಮೇಲಣ ಸುತ್ತುಗಳು. ಅಟ್ಲಾಂಟಿಕ್ ಮತ್ತು ಪೆಸಿಫಿಕ್ ಸಾಗರಗಳು ನನ್ನ ಉಡುಪು, ಭೂಮಿ ನನ್ನ ಪಾದಪೀಠದ ಒಂದು ಅಂಶ. ಸೌರವ್ಯೂಹ ನನ್ನ ಅಂಗೈ ಮೇಲಿದೆ. ಲಕ್ಷಾಂತರ ನಕ್ಷತ್ರಗಳನ್ನು ನಾನು ಆಕಾಶದಲ್ಲಿ ಚೆಲ್ಲಿದ್ದೇನೆ. ಇಡೀ ಸೃಷ್ಟಿಯೇ ನನ್ನದು. ಭಗವಂತ ನನಗೆ ಕ್ರಿಸ್ತನನ್ನು ನೀಡಿದಾಗಲೇ ಈ ಸೃಷ್ಟಿಯನ್ನು ನನ್ನದಾಗಿಸಿದ."[೧೨]

ಕಗಾವನಿಗೆ ಒಂದೊಂದು ಪೊದೆಯೂ ಒಂದೊಂದು ದೇವಾಲಯವಾಯಿತು. ಒಂದೊಂದು ಕಲ್ಲೂ ಒಂದೊಂದು ಪೂಜೆಯ ವೇದಿಕೆಯಾಯಿತು, ಪ್ರತಿಯೊಂದು ಕರ್ತವ್ಯವೂ ಒಂದೊಂದು ಉಪದೇಶವಾಯಿತು. ಪ್ರತಿಯೊಂದು ಕೆಲಸವೂ ಪ್ರಾರ್ಥನೆಯಾಯಿತು. ಒಂದೊಂದು ಉಸಿರಾಟವೂ ಪೂಜೆಯನ್ನು ಸ್ವೀಕರಿಸಲು ಸಿದ್ಧನಾಗಿ ಎಲ್ಲೆಲ್ಲೂ ಇರುವ ಭಗವಂತನಿಗೆ ಎತ್ತಿದ ಧೂಪಾರತಿಯಾಯಿತು.

ಕಗಾವ ಸರ್ವಸಂಗ ಪರಿತ್ಯಾಗಿಯಲ್ಲ, ಸಂಸಾರಿ. ಹೆಂಡತಿ ಮಕ್ಕಳೊಡನೆ ಮಧುರವಾಗಿ ಬಾಳು ನಡೆಸಿದ ಕೋಮಲ ಜೀವಿ. ಜಪಾನಿಗೆ ಆತ ಸಲ್ಲಿಸಿದ ಸೇವೆ ದೊಡ್ಡದು. ಸಮಾಜ ಸೇವಕರ, ಸಾಹಿತಿಗಳ ನಡುವೆ ಅವನು ಕಲ್ಪಿಸಿಕೊಂಡ ಸ್ಥಾನವೂ ದೊಡ್ಡದೇ. ಅಂಥ ಉದಾತ್ತಜೀವಿಯ ಜೀವನದ ಕೆನೆಯಂತಿರುವ ಕೆಲವು ಚಿಂತನೆಗಳ ಅನುವಾದ 'ಕಗಾವ ಮಂತ್ರವಾಣಿ.'

ಕಗಾವ ಬರೆದದ್ದು ಜಪಾನೀ ಭಾಷೆಯಲ್ಲಿ. ಅವನ ಬರವಣಿಗೆಯ ಇಂಗ್ಲಿಷ್ ಅನುವಾದವನ್ನಿಟ್ಟುಕೊಂಡು ಶ್ರೀ ಮಹದೇವಯ್ಯನವರು ಕನ್ನಡದ ಭಾಷಾಂತರ ನೀಡಿದ್ದಾರೆ. ಅನುವಾದ ಒಟ್ಟಿನಲ್ಲಿ ತೃಪ್ತಿಕರವಾಗಿದೆ. ಮೂಲದ ಭಾವ, ಭಾವನೆ, ಚಿಂತನೆಗಳು ಕನ್ನಡಿಗರಿಗೆ ಪರಿಚಯವಾಗಬೇಕು ಎಂಬುದಷ್ಟೇ ಮಹಾದೇವಯ್ಯನವರ ಆಪೇಕ್ಷೆಯೆಂದು ತೋರುತ್ತದೆ. ಕನ್ನಡದ ಅನುವಾದವನ್ನು ಪರಿಷ್ಕರಿಸುವ ಪ್ರಯತ್ನ ನಡೆದಂತೆ ತೋರುವುದಿಲ್ಲ. ಅಲ್ಲದೆ ಭಾಷೆಯಲ್ಲಿ ಏಕರೂಪತೆಯನ್ನು ಸಾಧಿಸುವ ಅವಶ್ಯಕತೆಯನ್ನೂ ಅವರು ಮನಗಂಡಂತಿಲ್ಲ. ಕೆಲವು ಕಡೆ ಅನುವಾದ ಕಾವ್ಯಮಯವಾಗಿ ಹರಿದಿದೆ.

ಶ್ರೀ ಮಹದೇವಯ್ಯನವರು ತಾವು ಆರಿಸಿಕೊಂಡಿರುವ ಮೊದಲನೆಯ ಚಿಂತನೆಯನ್ನು ಹೀಗೆ ಅನುವಾದಿಸಿದ್ದಾರೆ :

"ಪ್ರಕೃತಿ ಸರ್ವಾಂಗ ಸುಂದರಿಯಲ್ಲ. ಬಳಿಗೈದಿದವರ ಮನಃಪ್ರವೃತ್ತಿಯನ್ನನುಸರಿಸಿ ರೂಪು ತಳೆವಳಾಕೆ. ದುಃಖದಲ್ಲಿ ಬಳಲಿದವರ ಕಣ್ಣಿಗೆ ಉಜ್ವಲ ಸೂರ್ಯನೂ ಒಂದು ಅಭಿಶಾಪದ ಪ್ರತೀಕ. ದಿವ್ಯ ಭವ್ಯಾನಂದ ಪರವಶರಾದವರಿಗೆ ಹೊಲಸು ಹೊಂಡದಲ್ಲಿ ಹರಿವ ಕೊಳಕು ನೀರೂ ಅಪೂರ್ವಾನಂದ ಚಿಮ್ಮ ವ ಚಿಲುಮೆ."[೧೩]

ಆತ್ಮಶಕ್ತಿ ಸಾಕ್ಷಾತ್ಕಾರ ಪಡೆಯದವರಿಗೆ ಪ್ರಕೃತಿ ತನ್ನ ಹೃದಯ ಬಿಚ್ಚಳು. ಶುದ್ಧಮನಸ್ಸಿನ ಪ್ರಾಚೀನ ಪುಣ್ಯಪುರುಷರ ಕಂಗಳಲ್ಲಿ ನದಿ - ಪರ್ವತಗಳೇ ದೇವರಾಗಿ ನಿಂತವು. ಭಯ ಕಳವಳಕ್ಕೆ ಸಿಕ್ಕಿ ಮಧ್ಯಯುಗದವರಿಗೆ ಪ್ರಕೃತಿ ವಿಕರಾಳ ಭೂತಗಳ ನೆಲೆವನೆಯಾಯಿತು."[೧೪]

"ಸೃಷ್ಟಿ ರಹಸ್ಯವನ್ನರಿತ ಆಧುನಿಕನಿಗ ಪ್ರಕೃತಿ ಪ್ರಕೃತಿಯಾದಳು. ದೇವ ಹೃದಯದಲ್ಲಿ ನೆಲಸಿದವರಿಗೆ ನಿಸರ್ಗವೇ ತೌರುಮನೆ. ಆತ್ಮ ಆತ್ಮಗಳ ಸಂಗಮ ಕಿರುಹೂವಿನಿಂದ ಕವಿಹೃದಯ ಮುಟ್ಟುವ ತವಕವಿದೆ. ಏಕೆಂದರೆ ಎರಡರಲ್ಲೂ ಸಮಾನ ಪ್ರೇಮ ಜೀವವಾಡುತ್ತಿದೆ. ಪ್ರೇಮ ಸ್ಫುರಿಸುವ ತನಕ ಪ್ರಕೃತಿ ರೂಪು ಧರಿಸಳು.....ಸತ್ಯವಾಗಿ ಆತ್ಮನಲ್ಲಿ ಪ್ರೀತಿ ಜನಿಸಿದರೆ ಪ್ರಕೃತಿ ಪೂರ್ಣಪ್ರೇಮಮಯಿಯಾಗಿ ಶೋಭಿಸುವಳು."[೧೫]

"To those filled to overflowing with acstacy even the foul water flowing Sluggishly through the glums becomes a Spring of exquisite bliss" ಎಂಬುದನ್ನು 'ದಿವ್ಯ ಭವ್ಯಾನಂದ ಪರವಶರಾದವರಿಗೆ ಹೊಲಸು ಹೊಂಡದಲ್ಲಿ ಹರಿವ ಕೊಳಕು ನೀರೂ ಅಪೂರ್ವವಾದ ಆನಂದ ಚಿಮ್ಮುವ ಚಿಲುಮೆ' ಎಂದು ಸೊಗಸಾಗಿ ಅನುವಾದಿಸಿದ್ದಾರೆ. ಆದರೆ- 'To modern man, with his understanding of nature, it is for the first time possible to love nature as nature' ಎಂಬುದನ್ನು ಅನುವಾದಿಸಹೊರಟು '......... ಪ್ರಕೃತಿ ಪ್ರಕೃತಿಯಾದಳು' ಎಂದು ಅನುವಾದಿಸಿರುವುದು ಸಮರ್ಪಕವಾಗಿಲ್ಲ. ಅಲ್ಲದೆ 'The fact that there is a direct Communication of spirit with Spirit between the lily of the field and the poet is because love exists between them' ಎಂಬುದನ್ನು ಆತ್ಮ ಆತ್ಮಗಳ ಸಂಗಮ ಕಿರಿಹೂವಿನಿಂದ ಕವಿಹೃದಯ ಮುಟ್ಟುವ ತವಕವಿದೆ ಏಕೆಂದರೆ

ಎರಡರಲ್ಲೂ ಸಮಾನ ಪ್ರೇಮ ಜೀವವಾಡುತ್ತಿದೆ-ಎಂಬುದಾಗಿ ಅನುವಾದಿಸಿದ್ದಾರೆ.[೧೬] ಇಲ್ಲಿ ಕಾವ್ಯಮಯತೆಯ ಕಡೆಗೆ ಅನುವಾದಕರ ಒಲವು ಹರಿದು ನಿಷ್ಪಕ್ಷತೆಗೆ ಊನ ಒದಗಿದೆ.

ಕಗಾವ ಕ್ರೈಸ್ತಧರ್ಮದ ಅಂಧ ಅನುಯಾಯಿಯಲ್ಲೂ-ಅವನು ಏಸುವಿನ ಮಹತ್ವವನ್ನು ಅರಿತವನು. ಅದನ್ನು ನಿರೂಪಿಸುವ-ಒಂದು ವಾಣಿಯನ್ನು ಮಹದೇವಯ್ಯನವರು ಸೊಗಸಾಗಿ ಹೀಗೆ ಅನುವಾದಿಸಿದ್ದಾರೆ.

"ಯೇಸುವಿನ ಅರಿವಿನ ಆಳ ಅವನು ಸಿದ್ಧಾಂತ ರಚನೆಯನ್ನು ನಿರಾಕರಿಸಿದುದರಲ್ಲಿದೆ. ಯಾರಿಗೆ ಸಿದ್ಧಾಂತವೇ ಪ್ರಿಯವೋ ಅವರು ಯೇಸುವಿನಿಂದ ದೂರವಾಗಿರಲಿ, ಧರ್ಮವು ಬರಿ ತತ್ವಗಳ ಕಂತೆ ಅಲ್ಲ. ಅದೊಂದು ಜೀವನ. ಸಿದ್ಧಾಂತಗಳಿಗೆ ದೂರವಾದ ದೇವರನ್ನು ಯೇಸು ಕಂಡುಹಿಡಿದ. ಅವನ ದೇವರು ದೇವರಂಥವನು."[೧೭]

ಇನ್ನೊಂದು ಸೊಗಸಾದ ಚಿಂತನ ಕಗಾವ ಎಂತಹ ಮಧುರವಾದ ಅನುಭಾವವನ್ನು ಸಾಧಿಸಿಕೊಂಡವನು ಎಂಬುದನ್ನು ಸೂಚಿಸುತ್ತದೆ. ಆ ಚಿಂತನೆಯ ಅನುವಾದದಲ್ಲಿಯೂ ಶ್ರೀ ಮಹದೇವಯ್ಯನವರ ಅನುವಾದ ಕಲೆಯ ಕೌಶಲ್ಯವನ್ನು ಕಾಣಬಹುದು. ಕಗಾವನ ವ್ಯಕ್ತಿತ್ವವನ್ನು ಚಿತ್ರಿಸುವಂತೆಯೇ ಮಹದೇವಯ್ಯನವರ ಶೈಲಿಯ ಸೊಗಸನ್ನು ನಿರೂಪಿಸುವುದರಿಂದ ಇಡೀ ಚಿಂತನೆಯ ಅನುವಾದವನ್ನು ಸಮಗ್ರವಾಗಿ ಇಲ್ಲಿ ನೀಡಿದೆ.

"ಆತ್ಮನ ಆಳದಿಂದಲೂ ಚಿಮ್ಮಿ ಹೊಮ್ಮಿದ ಸ್ವರ್ಗದ ಕರುಣೆಯ ಅನಂತಧಾರೆ ಮತ್ತು ಆನಂದ ಇವೇ ನನ್ನ ಆಸ್ತಿ. ನೆಟ್ಟ ನೋಟದಿಂದ ಪ್ರಶಾಂತ ಮನಸ್ಕನಾಗಿ ಧ್ಯಾನಕ್ಕೆ ಕುಳಿತಾಗ ಅಪೂರ್ವ ದಿವ್ಯಾನಂದ ಪ್ರವಾಹದಲ್ಲಿ ಸಿಲ್ಕಿ, ನಿತ್ಯಧಾರಾ ಪೂರ್ವಕ ಚಿಲುಮೆಯಿಂದ ಚಿಮ್ಮಿದ ದೇವರ ಅಮೃತದ ರುಚಿ ಸವಿಯುತ್ತೇವೆ. ಗೋಡೆ ಹುಲ್ಲಿನ ಚಾಪೆಗಳು, ಪಕ್ಕದಲ್ಲಿರುವ ಇದ್ದಿಲಾ ತುಂಬಿದ ಅಗ್ಗಿಷ್ಟಿಕೆ, ಸಾವಿರಾರು ಮುಳ್ಳುಗಳಿಂದ ಚುಚ್ಚಿದಂತಿರುವ ನನ್ನ ಶರೀರ ಎಲ್ಲವೂ ತುಂಬು ಹೃದಯದಿಂದ ಮೈದಡವುವ ದೈವೀಹಸ್ತದಂತೆ ಕೋಮಲವಾಗಿ ಪರಿವರ್ತನೆ ಹೊಂದುತ್ತವೆ."[೧೮]

"ಅವನ ಕೋಮಲ ಹಸ್ತದ ಮೃದುಸ್ಪರ್ಶದಲ್ಲಿ ಅವನ ರಕ್ತಸಂಚಾರದ ಉದ್ವೇಗದಿಂದ ಜಡವಾದ ಆತ್ಮ ಚೈತನ್ಯ ಪಡೆಯುತ್ತಿದೆ. ದೇವರ ಪ್ರೀತಿ ಪ್ರಣಯಿಯ ಪ್ರೀತಿಗಿಂತ ಎಷ್ಟೋ ಹಿರಿದು. ಅವನ ಬೆಳಕೇ ನನ್ನ ಆಹಾರ. ಅವನ ಪವಿತ್ರತೆಯೇ ನಾನು ಉಸಿರಾಡುವ ಗಾಳಿ. ಅವನ ಮೊಗ ಕಾಣದಿದ್ದರೂ ತೋರ್ಬೆರಳಿನ ತುದಿ ನೆರಳು ಮುದ್ರಿತವಾಗಿದೆ ನನ್ನ ಕಣ್ಣುಗಳಲ್ಲಿ. ಬೆರಳಿನ ತುದಿಯುಗುರು ಗೀಜಿದ ಗೀರುಗಳು ಬಹು ಸಾಮಾನ್ಯವಾಗಿದ್ದರೂ ಉಷಃಕಾಲದ ಆಕಾಶಕ್ಕಿಂತ ಹೆಚ್ಚು ಸುಂದರವಾಗಿದೆ."[೧೯]

ವಿಶ್ವದ ವಿರಾಟ ಸೃಷ್ಟಿಯನ್ನು ನಾನು ನೋಡಿಲ್ಲ. ಆದರೆ ದೈವೀಹಸ್ತದ ಮೃದು ಸ್ಪರ್ಶದಲ್ಲಿ ಉಸಿರಾಡದೆ ಉಳಿದ ನನಗೆ ಅನಂತ ಜಗತ್ತುಗಳ ಒಡಲಿನಲ್ಲಿ ನಡೆಯುವುದೆಲ್ಲ ನನಗಾಗಿ ಮತ್ತು ಮನುಷ್ಯ ಜಗತ್ತಿಗಾಗಿ ಉಕ್ಕಿ ಹರಿದ ದಿವ್ಯಾನಂದದ ಚಿರಂತನ ಪ್ರವಾಹದಂತೆ ಭಾಸವಾಗುತ್ತಿದೆ.

ಕಗಾವನ ಮೂವತ್ತೈದು ಚಿಂತನೆಗಳನ್ನು ಮಹದೇವಯ್ಯನವರು ಅನುವಾದಿಸಿದ್ದಾರೆ, ಅವುಗಳನ್ನು ಮಂತ್ರವಾಣಿ ಎಂದು ಕರೆದಿರುವರು.



## ೮

# ಟಿ. ಎನ್. ಮಹದೇವಯ್ಯನವರ ವಚನಗಳು

ಹನ್ನೆರಡನೇ ಶತಮಾನದ ಶಿವಶರಣರ ಸೃಜನ ಪ್ರತಿಭೆಯ ಅಂಕುರವಾಗಿ, ವಚನವೆನ್ನುವ ಸಾಹಿತ್ಯ ಪ್ರಕಾರ ಸ್ವತಂತ್ರ ಅಭಿವ್ಯಕ್ತಿಯನ್ನು ಕಂಡುಕೊಂಡಿತು. ಅದು ವಿಶ್ವದ ಮತ್ತಾವ ಭಾಷೆಗಳಲ್ಲಿಯೂ ಕಾಣಲಾಗದ ಒಂದು ವಿಶಿಷ್ಟ ಸಾಹಿತ್ಯ ಪ್ರಕಾರವಾಗಿ ಕನ್ನಡದಲ್ಲಿ ಬೆಳೆಯಿತು. ಮುನ್ನೂರಕ್ಕೂ ಹೆಚ್ಚು ಶರಣರು, ಮೂವತ್ತಕ್ಕೂ ಮಿಗಿಲಾಗಿ ಶರಣೆಯರು ಈ ಸಾಹಿತ್ಯ ಪ್ರಕಾರದಲ್ಲಿ ತಮ್ಮ ಮಹೋನ್ನತ ಕೊಡುಗೆಯನ್ನು ಕೊಟ್ಟರು. ೧೨ನೇ ಶತಮಾನದಲ್ಲಿ ಕಲ್ಯಾಣದಲ್ಲಿ ನಡೆದ ರಕ್ತ ಕ್ರಾಂತಿಯ ಕಾರಣದಿಂದಾಗಿ ಅದು ತನ್ನ ಚಟುವಟಿಕೆಯನ್ನು ಸ್ತಬ್ದಗೊಳಿಸಿತು. ಪ್ರಾಣಭಯದಿಂದ ಶರಣರು ಕಲ್ಯಾಣದಿಂದ ಚೆದುರಿಹೋದರು. ಆದರೂ ಅದರ ಸೆಲೆ ಬತ್ತಿಹೋಗಲಿಲ್ಲ, ಗುಪ್ತಗಾಮಿನಿಯಾಗಿ ಹರಿಯುತ್ತಿತ್ತು. ಅದು ಮತ್ತೆ ೧೫ರಿಂದ ೧೮ನೇ ಶತಮಾನದವರೆವಿಗೆ ಮತ್ತೆ ಹೊರಹೊಮ್ಮಿತು.

ಕನ್ನಡದ ನವೋದಯ ಕಾಲದಲ್ಲಿ ಆಂಗ್ಲ ಸಾಹಿತ್ಯದ ವಿವಿಧ ಪ್ರಕಾರಗಳಿಂದ ಪ್ರಚೋದನೆಗೊಂಡ ನಮ್ಮ ಸಾಹಿತಿಗಳು ಕನ್ನಡದಲ್ಲೂ ಅವನ್ನು ತರುವ ಸಾಹಸ ಮಾಡಿದರು. ಹೀಗಾಗಿ ಕನ್ನಡ ಸಾಹಿತ್ಯಕ್ಕೆ ಹೊಸ ಸುಗ್ಗಿ ಪ್ರಾಪ್ತವಾಯಿತು., ಹೊಸ ಜೀವ ಸಂಚಾರವಾಯಿತು., ಹೊಸ ರೂಪಗಳಲ್ಲಿ ಆಧುನಿಕ ಕನ್ನಡ ಸಾಹಿತ್ಯ ಶ್ರೀಮಂತವಾಯಿತು. ಹಾಗೆ ಪರಿವರ್ತನೆ ತಂದದ್ದರಲ್ಲಿ ಹನ್ನೆರಡನೆಯ ಶತಮಾನದ ಶಿವಶರಣರ ವಚನ ಸಾಹಿತ್ಯವನ್ನು ಆಧುನಿಕ ಜಗತ್ತಿನ ಸಂಕೀರ್ಣ ಅನುಭವದ ಅಭಿವ್ಯಕ್ತಿಗೆ ವಾಹಕವನ್ನಾಗಿ ಬಳಸಿಕೊಂಡಿದ್ದರ ಫಲವಾಗಿ ಆಧುನಿಕ ವಚನ ಸಾಹಿತ್ಯ ರೂಪಪರಾವರ್ತನೆಯನ್ನು ಪಡೆಯಿತು. ಅದರ ವಿಶೇಷವೆಂದರೆ, ಅದು ೧೨ನೇ ಶತಮಾನದ ಶಿವಶರಣರ ವಚನಗಳ ಅಚ್ಚಿನಲ್ಲಿ (mould)೨೦-೨೧ನೇ ಶತಮಾನದಲ್ಲಿ ತನ್ನ ರಚನಾವಿಶೇಷವನ್ನು ಮುಂದುವರಿಸಿರುವುದು. ಆಧುನಿಕ ವಚನಗಳು ಅಂಕಿತದೊಂದಿಗೆ ಬಸವಾದಿ ಶಿವಶರಣರ ಅಭಿವ್ಯಕ್ತಿ ವಿಧಾನದ ಅನುಕರಣೆಯಾಗಿ ತೋರಿದರೂ ಅದರ ಆಲೋಚನೆಯ ಕೇಂದ್ರವಲಯ

ಸಮಕಾಲೀನವಾದದ್ದು. ಆಧುನಿಕ ಜಗತ್ತಿನ ಹಲವು ಧಾವಂತಗಳನ್ನು ತನ್ನ ಪ್ರಜ್ಞಾವಲಯದ ಅನುಭವಗಳ ಹಿನ್ನೆಲೆಯಲ್ಲಿ ವ್ಯಂಜಿಸುವಂಥದ್ದು. ವೀರಶೈವಧರ್ಮ ಹಾಗೂ ತಾತ್ವಿಕ ಚಿಂತನೆಗಳಿಗೆ ಹೊರಗಾಗಿ ಮುಕ್ತಸಮಾಜದ ಪ್ರಜೆಯಾಗಿ ತನ್ನ ದೈನಂದಿನ ಅನುಭವಗಳಿಗೆ ತೆರೆದುಕೊಳ್ಳುತ್ತಾ ಆ ಸ್ವತಂತ್ರವಾದ ಬಿಡಿ ಬಿಡಿ ಅನುಭವಗಳಿಗೆ, ಚಿಂತನೆಗಳಿಗೆ ಸಾಹಿತ್ಯಿಕ ರೂಪಕೊಡುವಂಥದ್ದು. ಅದು ಅತ್ಯಂತ ಸರಳವಾದುದು. ಕಣ್ಣು ಕುಕ್ಕುವ ಶ್ರೀಮಂತಿಕೆ ಅದಕ್ಕಿಲ್ಲ. 'ವಚನ ಸುಂದರಿಗೇಕೆ ಕನಕರತ್ನಾಭರಣ, ಭಾವದನುಭವಕೇಕೆ ಮೌಕ್ತಿಕಾಭರಣ, ಭಕುತಿಭಾವನೆಗೇಕೆ ವಿಷದಾವರಣ?'[೧] ಎಂದು ಟಿ. ಎನ್. ಮಹದೇವಯ್ಯನವರು ಕೇಳಿರುವರು. ಕಳೆದ ಶತಮಾನದ ಮಧ್ಯಭಾಗದಲ್ಲಿ ಹರ್ಡೇಕರ್ ಮಂಜಪ್ಪ, ಜಚನಿ, ಎಸ್.ವಿ. ರಂಗಣ್ಣ ಮೊದಲಾದವರು ಆಧುನಿಕ ವಚನ ಪರಂಪರೆಗೆ ಜೀವಕೊಡುವ ಪ್ರಯತ್ನ ನಡೆಸಿದರು.

ಕಳೆದ ಶತಮಾನದಲ್ಲಿ ಮುನ್ನೂರಕ್ಕೂ ಹೆಚ್ಚು ಜನ ಲೇಖಕರು ಸುಮಾರು ಐವತ್ತುಸಾವಿರ ವಚನಗಳನ್ನು ಬರೆದು ಆಧುನಿಕ ವಚನ ಸಾಹಿತ್ಯ ಪ್ರಕಾರಕ್ಕೆ ಒಂದು ಗಟ್ಟಿಯಾದ ತಳಹದಿಯನ್ನು ನಿರ್ಮಿಸಿರುವರು. ಆರುಸಾವಿರಕ್ಕೂ ಹೆಚ್ಚು ವಚನಗಳನ್ನು ಒಬ್ಬರೇ ಬರೆಯುವ ಮೂಲಕ ಜ.ಚ.ನಿ. ಹೊಸವಿಕ್ರಮವನ್ನು ಈ ಕ್ಷೇತ್ರದಲ್ಲಿ ದಾಖಲಿಸಿರುವರು. ಆಧುನಿಕ ವಚನ ಪ್ರಕಾರದಲ್ಲಿ ಮೊದಲ ಹೆಸರು ಹರ್ಡೇಕರ ಮಂಜಪ್ಪನವರದು. ೧೯೩೨ರಲ್ಲಿ ಆಲಮಟ್ಟಿಯ ವೀರಶೈವ ಗ್ರಂಥಮಾಲೆಯ ೧೮ನೇ ಕೃತಿಯಾಗಿ ಅವರ 'ಜನಸೇವಕನ ವಚನ' ಪ್ರಕಟವಾಗಿದೆ. ಹನ್ನೆರಡನೆಯ ಶತಮಾನದ ವೈರಾಗ್ಯಮೂರ್ತಿ ಅಲ್ಲಮಪ್ರಭುದೇವರ ಜೀವನ-ಸಾಧನೆಗಳಿಂದ ವಿಶೇಷ ಪ್ರಭಾವಿತರಾದ ಹರ್ಡೇಕರ ಮಂಜಪ್ಪನವರು ತಮ್ಮ ವಚನಗಳಿಗೆ 'ಪ್ರಭುದೇವ' ಎನ್ನುವ ಅಂಕಿತ ಬಳಸಿರುವರು. ಅವರ ಒಟ್ಟು ೩೩ ವಚನಗಳು ಬೆಳಕುಕಂಡಿವೆ. ಗುಣ ಗಾತ್ರಗಳೆರಡರಿಂದಲೂ ಗಣನೀಯವಾಗಿ ವಚನಗಳನ್ನು ರಚಿಸಿದ ಪ್ರಮುಖರೆಂದರೆ ಜಚನಿ, ಸಿದ್ಧಯ್ಯ ಪುರಾಣಿಕ, ಎಸ್.ವಿ. ರಂಗಣ್ಣ, ಎಸ್.ವಿ. ಪರಮೇಶ್ವರ ಭಟ್ಟ, ಮಹದೇವ ಬಣಕಾರ, ಸಂಗಮೇಶ ಹೊಸಮನಿ ಹಾಗೂ ಅನ್ನದಾನಯ್ಯ ಪುರಾಣಿಕ.[೨]

ಆಧುನಿಕ ವಚನಗಳನ್ನು ಸಾಕಷ್ಟು ಸಂಖ್ಯೆಯಲ್ಲಿ ಗುರು-ವಿರಕ್ತರು ಬರೆದಿರುವರು. ಗೂಳೂರಿನ ಶ್ರೀ ಜಚನಿ, ಹುಬ್ಬಳ್ಳಿಯ ಶ್ರೀ ಮೂಜಗಂ, ಮುಂಡರಗಿಯ ಜಗದ್ಗುರು ಶ್ರೀ ಅನ್ನದಾನೀಶ್ವರ ಮಹಾಸ್ವಾಮಿಗಳು, ಸಿರಿಗೆರೆಯ ಶ್ರೀ ಜಗದ್ಗುರು ಶಿವಕುಮಾರ ಮಹಾಸ್ವಾಮಿಗಳು, ಹುಲಸೂರಿನ ಶ್ರೀ ಶಿವಾನಂದ ಮಹಾಸ್ವಾಮಿಗಳು, ಗಿರಿಯಾಪುರದ ಶ್ರೀ ಸದಾಶಿವ ಶಿವಾಚಾರ್ಯರು, ಮೊರಬದ ಶ್ರೀ ಗಂಗಾಧರ ಶಿವಾಚಾರ್ಯರು, ಅಥಣಿಯ ಶ್ರೀ ಚನ್ನಬಸವದೇವರು ಮೊದಲಾದವರಿರುವರು. ವಿಶೇಷವೆಂದರೆ, ಹನ್ನೆರಡನೇ ಶತಮಾನದಲ್ಲಿ ವೀರಶೈವದ ತೆಕ್ಕೆಗೆ ಬಂದ ಶರಣ-ಶರಣೆಯರು ಮಾತ್ರ ವಚನ ರಚನೆ ಮಾಡಿದರು. ಆದರೆ ೨೦ ಹಾಗೂ ೨೧ ನೇ ಶತಮಾನದಲ್ಲಿ ಸರ್ವಧರ್ಮದವರಿಗೂ ವಚನ ಪ್ರಿಯವಾಯಿತು, ಅಭಿವ್ಯಕ್ತಿ ಮಾಧ್ಯಮವಾಯಿತು. ಆಧುನಿಕ ವಚನಗಳ ಅಭಿವ್ಯಕ್ತಿಯಲ್ಲಿ ಹೊಸತನ ಕಾಣಿಸಿಕೊಳ್ಳಲು ನಾನಾ ವೃತ್ತಿಯಲ್ಲಿ ತೊಡಗಿಕೊಂಡ ಹಿರಿಯರು-ಕಿರಿಯರು ಲಿಂಗತಾರತಮ್ಯವಿಲ್ಲದೆ ಭಾಗವಹಿಸಿರುವುದೂ ಕಾರಣವೆನ್ನಬಹುದು. ಡಾ. ಸಂಗಮೇಶ ಹಂಡಗಿ ಅವರು ಈ ವೈವಿಧ್ಯತೆಯ ಮಹಾಪೂರವನ್ನು ಹೀಗೆ ಪರಿಚಯಿಸಿರುವರು:

"ಎಸ್.ವಿ. ರಂಗಣ್ಣ, ಎಸ್.ವಿ. ಪರಮೇಶ್ವರ ಭಟ್ಟ, ಸಿದ್ಧಯ್ಯ ಪುರಾಣಿಕ, ಮಹದೇವ ಬಣಕಾರ, ಬೆಟಗೇರಿ ಕೃಷ್ಣಶರ್ಮ, ಡಿ.ಎಸ್. ಕರ್ಕಿ, ಈಶ್ವರ ಸಣಕಲ್ಲ, ಭುಜೇಂದ್ರ ಮಹಿಷವಾಡಿ, ಸಿ.ಪಿ. ಕೃಷ್ಣಮೂರ್ತಿ, ಹಿರೇಮಲ್ಲೂರು ಈಶ್ವರನ್, ಪಂಚಾಕ್ಷರಿ ಹಿರೇಮಠ, ಎಚ್. ತಿಪ್ಪೇರುದ್ರಸ್ವಾಮಿ ಅವರಂತಹ ಕವಿ-ಸಾಹಿತಿ-ವಿಮರ್ಶಕರಿದ್ದಾರೆ. ರಂಗನಾಥ ದಿವಾಕರರಂತಹ ತತ್ವಜ್ಞಾನಿ ರಾಜಕಾರಣಿಗಳಿದ್ದಾರೆ. ಸಂಗಮೇಸ ಹೊಸಮನಿ, ಸಿಂಪಿ ಲಿಂಗಣ್ಣ, ಶಂ.ಗು. ಬಿರಾದಾರ, ಗಿರಿಜಾ ಹೊಸಮನಿ, ಮಲ್ಲಪ್ಪ, ಬಿ. ಶೇಖರಪ್ಪ, ಬಾಳೇಶ ಲಕ್ಷೆಟ್ಟಿ, ಶರಣಪ್ಪ ಗುಡದಿನ್ನಿ, ಡಿ.ಜಿ. ಬಳೂರಗಿ, ಸಿದ್ಧೇಶ್ವರ ಹಿರೇಮಠ, ಮಹಾಲಿಂಗ ಯಾಳಗಿ, ಗುರುಲಿಂಗಪ್ಪ ಅಣ್ಣಾನವರ, ಈರಯ್ಯಾ ಕಣಬೂರ, ಎಲ್ಲೇಗೌಡ ಬೆಸಗರಹಳ್ಳಿ, ಶಿ.ಚೆ. ವಿರಕ್ತಮಠ ಅವರಂತಹ ಶಿಕ್ಷಕರಿದ್ದಾರೆ.[೩]

ಚಂದ್ರಯ್ಯ ನಾಯ್ಡು, ಗುಂಡ್ಮಿ ಚಂದ್ರಶೇಖರ ಐತಾಳ, ಕೆ. ಭೈರವಮೂರ್ತಿ, ರವೀಂದ ಕಂಬ್ಯಾಣಿ, ಕೆ.ಪಿ. ಶಿವಲಿಂಗಯ್ಯ, ಸಂಗಮೇಶ ನರೆಗಲ್ಲ, ಬ.ಗಿ. ಯಲ್ಲಟ್ಟಿ, ಎಂ.ಪಿ. ಗಣಾಚಾರಿ, ಡಿ. ಲಿಂಗಯ್ಯ, ಎಂ.ಜಿ. ನಾಗರಾಜ್, ಚೆನ್ನಣ್ಣ ವಾಲಿಕಾರ, ಸಿದ್ದಣ್ಣ ಲಂಗೋಟಿ, ಸಂಗಮೇಶ ಹಂಡಿಗಿ, ಕೆ. ಅನಂತರಾಮು, ಸೂಗಯ್ಯ ಹಿರೇಮಠ ಅವರಂತಹ ಪ್ರಾಧ್ಯಾಪಕರಿದ್ದಾರೆ.

ಜೋಳದರಾಶಿ ದೊಡ್ಡನಗೌಡರು, ಪಂಡಿತ ಪುಟ್ಟರಾಜ ಗವಾಯಿಗಳು, ಬಸವರಾಜ ತಾಳಕೇರಿ, ಗುರುಸ್ವಾಮಿ ಕಲಕೇರಿ, ಸಿದ್ಧರಾಮಯ್ಯ ಮಠಪತಿ ಅವರಂತಹ ಗಮಕಿ ಗಾಯಕರಿದ್ದಾರೆ. ದಾನಪ್ಪ ಜತ್ತಿ ಅವರಂತಹ ಕೀರ್ತನಕಾರರಿದ್ದಾರೆ. ಟಿ.ಎಚ್. ಷಣ್ಮುಖಪ್ಪ, ಸೋಮಶೇಖರ ಸಾಲಿ ಅವರಂತಹ ಕಲಾವಿದರಿದ್ದಾರೆ. ಡಾ. ಶಿವದೇವ ಶಾಸ್ತ್ರಿ, ಡಾ. ಈಶ್ವರಯ್ಯ ಕರಡಿ, ಡಾ. ಬಸವರಾಜ ಮೋದಿ ಅವರಂತಹ ವೈದ್ಯರಿದ್ದಾರೆ. ಶಾಂತೇಶ ಹಿರೇಮಠ, ದಾನಪ್ಪ ಬಗಲಿ ಅವರಂತಹ ವೈದ್ಯ ಕಾರ್ಯಕರ್ತರಿದ್ದಾರೆ. ವೀರಪ್ಪ ಇಜೇರಿ, ಶಿವಪುತ್ರಯ್ಯ ರೇವಣಸಿದ್ಧೇಶ್ವರಮಠ, ಸಿ.ಎಂ. ವೀರಣ್ಣ, ಮನೋಹರ ಮಂದರಗಿ ಅವರಂತಹ ವರ್ತಕರಿದ್ದಾರೆ.[೪]

ಎಚ್. ಗಂಗಾಧರನ್, ಡಿ.ಎಸ್.ಪಾಟೀಲ, ಈರಣ್ಣ ನಾಗಠಾಣ, ಅನ್ನದಾನಯ್ಯ ಪುರಾಣಿಕ ಅವರಂತಹ ವಕೀಲರಿದ್ದಾರೆ. ಶ್ರೀಶೈಲ ಜತ್ತಿ, ಎಂ.ಪಿ. ರಮೇಶ್ ಅವರಂತಹ ಬ್ಯಾಂಕ್ ಉದ್ಯೋಗಿಗಳಿದ್ದಾರೆ. ಎಚ್.ಕೆ. ಸದಾನಂದ ಅವರಂತಹ ಉದ್ಯೋಗವಿನಿಮಯ ಕಚೇರಿಯ ಉದ್ಯೋಗಿಗಳಿದ್ದಾರೆ. ಭೀಮರಾವ್ ಅವರಂತಹ ಸರಕಾರದ ನಿವೃತ್ತ ಕಾರ್ಯದರ್ಶಿಗಳಿದ್ದಾರೆ.

ಸಿದ್ಧಲಿಂಗನಗೌಡ ಪಾಟೀಲ, ಸಂಕ್ರಣ್ಣ ನಾಗರಾಳ ಅವರಂತಹ ಕೃಷಿಕರಿದ್ದಾರೆ. ಜೀರಗೆಕಟ್ಟೆ ಬಸವಪ್ಪ, ಶರಣಯ್ಯ ಕಲ್ಯಾಣಿ, ಅವರಂತಹ ಹಿರಿಯರಿದ್ದಾರೆ. ಮಲ್ಲಪ್ಪ ಹುಲಕುರ್ಕಿ, ಸಿದ್ಧಲಿಂಗೇಶ ಹಂಡಗಿ ಅವರಂತಹ ಕಿರಿಯರಿದ್ದಾರೆ. ವೈ.ವಿ. ಪಾರ್ಶ್ವನಾಥ, ವಿ. ಕೃಷ್ಣಶೆಟ್ಟಿ, ಸುಜನಾ, ಗುರುರಾಜ ಸಿದ್ಧಾಪೂರ, ಎನ್. ಪ್ರಹ್ಲಾದರಾವ್ ಅವರಂತಹ ವೀರಶೈವೇತರರೂ ಇದ್ದಾರೆ.[೫]

ಮಾತೆ ಮಹಾದೇವಿ, ಶಿವಶರಣೆ ಮುಕ್ತಾಯಿ ಅವರಂತಹ ಯೋಗಿಣಿಯರಿದ್ದಾರೆ. ಗುರುದೇವಿ ಹಿರೇಮಠ, ಶಾಂತಾದೇವಿ ಶಾಬಾದಿ, ಗು. ಶಂಕರಮ್ಮ, ಓಂಕಾರಮ್ಮ, ಗಂಗಮ್ಮ ಹೊಸಮನಿ,

ಶಿವಲಿಂಗಮ್ಮ ಕಟ್ಟಿ, ಸಿ.ಕನಕಮ್ಮ, ಎಸ್. ಶಾರದಮ್ಮ, ವಿ. ಜಯಮ್ಮ, ಎಂ. ಮಂಗಳಮ್ಮ, ರು. ದೇವೀರಮ್ಮ, ಶಿವಲೀಲಾ ಹಂಡಗಿ, ತೊಗರಿ ಸರ್ವಮಂಗಳಮ್ಮ, ಲೀಲಾ ಕಲಕೋಟಿ, ಜೆ. ಶಾರದಾ ರಾಜಶೇಖರ್, ಜಿ.ವಿ. ರೇಣುಕಾ, ಜಯಶ್ರೀ ದಂಡೆ, ಸರಸ್ವತಿ ಚಿಮ್ಮಲಗಿ, ವಿಜಯಶ್ರೀ ಸಬರದ, ಪ್ರಮೀಳಾ ಯಳಮಲಿ ಅವರಂತಹ ಹಿರಿಯ ಮಹಿಳಾಣಿಮಗಳಿದ್ದಾರೆ. ಜಿ. ರತ್ನಾ, ಜಿ.ಎಸ್. ಚಂದ್ರ ಉಮೇಶ್, ಅಪರ್ಣಾ ಹಂಡಗಿ, ಎಸ್. ಮಾಲಿನಿ ಅವರಂತಹ ಕಿರಿಯರಿದ್ದಾರೆ. ಕು. ಶ್ವೇತಾ ಕರ್ಕಿಯಂತಹ ಅತ್ಯಂತ ಕಿರಿಯ ವಚನಕಾರ್ತಿ ಇದ್ದಾರೆ." (ಆಧುನಿಕ ವಚನಕಾರರು : ಡಾ. ಸಂಗಮೇಶ ಹಂಡಗಿ, ಲಲಿತಾರವಿಂದ : ಪ್ರೊ. ವೀರೇಂದ್ರ ಸಿಂಪಿಯವರ ಅಭಿನಂದನ ಗ್ರಂಥ), ೨೦೦೭)

ಸಹಜವಾಗಿ ಟಿ.ಎನ್. ಮಹದೇವಯ್ಯನವರೂ ಅದರ ಬಲವಾದ ಆಕರ್ಷಣೆಗೆ ಒಳಗಾಗಿ 'ಮಲೆಯ ಮಹಾದೇವ' ಎನ್ನುವ ಅಂಕಿತದಲ್ಲಿ ವಚನ ರಚನೆಗೆ ತೊಡಗಿದರು. ಈ ಮಲೆಯ ಮಹಾದೇವ ಟಿ. ಎನ್. ಮಹದೇವಯ್ಯನವರ ಮನೆದೈವ. ಈಗಿನ ಚಾಮರಾಜನಗರ ಜಿಲ್ಲೆ ಕೊಳ್ಳೇಗಾಲ ತಾಲ್ಲೂಕಿಗೆ ಸೇರಿರುವ ಮಾದೇಶ್ವರ ಬೆಟ್ಟದ ನಡುಮಲೆಯಲ್ಲಿ ನೆಲೆಸಿರುವ ದೈವ ಮಲೆಯ ಮಾದೇಶ್ವರ. ಆ ದೈವವನ್ನು ಕಾಣಬೇಕಾದರೆ ಏಳುಗಿರಿ ಹತ್ತಿ ಏಳುಗಿರಿ ಇಳಿದು ಸಮತಟ್ಟಾದ ಬಯಲಿಗೆ ಬರಬೇಕು. ಅಲ್ಲಿಗೆ ತಲುಪಲು ದುರ್ಗಮವಾದ ಕಾಡು, ಎತ್ತರವಾಗಿ ಬೆಳೆದ ಹೆಬ್ಬಿದಿರು, ಹಿರಿದಾದ ಪರ್ವತಗಳ ಸಮೂಹ, ಕಲ್ಲು ಮುಳ್ಳುಗಳ ಹಾದಿ, ಜೀವಭಯಹುಟ್ಟಿಸುವ ಮೃಗಗಳು ವಾಸಿಸುವ ನಿಬಿಡಾರಣ್ಯ. ಇವೆಲ್ಲವನ್ನು ದಾಟಿ ನಡುಮಲೆಗೆ ಹೋಗಬೇಕು. ಈ 'ದಾಟು'ವ ಪ್ರಕ್ರಿಯೆ ಹುಲುಮಾನವರಿಗೆ ಸಾಧ್ಯವಿಲ್ಲ, ಗಟ್ಟಿಮನಸ್ಸಿನವರಿಗೆ ಮಾತ್ರ ಸಾಧ್ಯ. ಹಾಗೆ ತನ್ನಲ್ಲಿಗೆ ಬರುವ ಭಕ್ತರಿಗೆ ಕೃಪಾಸಿಂಧುವಾಗಿ ಮಲೆಯ ಮಹಾದೇವನು ತನ್ನ ವರದಹಸ್ತವನೆತ್ತಿ ತನ್ನ ರೂಪುಗಾಣಿಸುವನು. ಆ ನಡುಬೆಟ್ಟದ ಬಯಲಿನಲ್ಲಿ ನೆಲೆಗೊಂಡಿರುವ ಮಲೆಯ ಮಹಾದೇವನ ಪವಿತ್ರ ಆವಾಸಸ್ಥಾನವನ್ನು ಕವಿ ಮನದುಂಬಿ ಹೀಗೆ ನೆನೆದಿರುವರು:

ಗಿರಿಶೃಂಗದಾರಾಮದಿಂ ಹೆಬ್ಬಿದಿರ ಮೆಳೆಯೆದ್ದು
ಶಿವನ ಜಟೆಯಂತೆಲ್ಲ ಮುಗಿಲ ಮುಚ್ಚಿಹುದು
ಗಿರಿ ತಾನೆ ಶಿಲಾತಪಸ್ವಿಯೊಲು ಧ್ಯಾನದೊಳಗೊರಗಿಹುದು.
ಮೌನ ಮಂತ್ರದ ವಾಣಿ ತನ್ನ ಸಾಧನೆಯ ನಡೆಸಿಹುದು.
ಹಕ್ಕಿ ಶುಕಪಿಕ ಉರಿದು ಕಲಗಾನ ಮಾಡುತ್ತಿವೆ.
ಶಾಂತಿಯಾಡುತಿದೆ ಶ್ರೀ ಮಲೆಯ ಮಹಾದೇವ ನಿನ್ನ ಗಿರಿಬಯ
ಅನಾಶ್ರಮದಿ.[೬]

ತನುವನ್ನು ದಣಿಸಿ ಶಿವನಿಗೆ ಅರ್ಪಿತವೆಂದು ನಡೆದರೆ ಅದೇ ತಪ; ಮನವನ್ನು ದಣಿಸಿ ಶಿವನಿಗೆ ಅರ್ಪಿತವೆಂದು ನುಡಿದರೆ ಅದೇ ಜಪ; ಭಾವವ ಬಲಿಗೊಟ್ಟು ಶಿವನಿಗೆ ಆ ಭಾವವನ್ನು ಅರ್ಪಿತವೆಂದು ನುಡಿದರೆ ಅದೇ ಅವನನ್ನು ಸೇರುವ ನೆಪ. ಹೀಗೆ ದಣಿಸಿ ನಡೆದಾಗ ಆ ಮಲೆಯ ಮಹಾದೇವ ಬಾ ಬೇಗ,

ಬಾ ಬೇಗ! ಎಂದು ಕೈಬೀಸಿ ತನ್ನ ಕರದಿಂದ ಎತ್ತಿಕೊಳ್ಳುವನೆಂದು ಟಿ. ಎನ್. ಮಹದೇವಯ್ಯನವರು ಹೇಳುವರು. ತನು-ಮನ-ಭಾವಗಳು ಶಿವನಿಚ್ಛೆಯೆಂದರೆ ಶಿವನ ಪ್ರೀತಿಗೆ ಪಾತ್ರರಾಗುವೆವು. ಅವು ನಮ್ಮಿಚ್ಛೆಯೆಂದರೆ ಶಿವನ ಪ್ರೀತಿಗೆ ದೂರವಾಗುವೆವು ಎಂದೂ ಅವರು ಹೇಳುವರು. ಆ ವೇಳೆಗೆ ಅವರು ಕವಿಯಾಗಿ ತಮ್ಮನ್ನು ಗುರುತಿಸಿಕೊಂಡಿದ್ದು, ಈ ಹೊಸ ಅಭಿವ್ಯಕ್ತಿ ವಿಧಾನದಲ್ಲೂ ಪ್ರಯೋಗ ನಡೆಸಹೊರಟರು. ದುರದೃಷ್ಟವೆಂದರೆ ಅವರ ಆಧುನಿಕ ವಚನಗಳು ಬೆಳಕು ಕಂಡದ್ದು ಅವರು ಬದುಕಿದ್ದಾಗಲಲ್ಲ ಅವರ ನಿಧಾನನಂತರ-೧೯೭೧ರಲ್ಲಿ. ಅವರ ವಚನಗಳ ಜನಪ್ರಿಯತೆಯ ಮಾನದಂಡವೆಂದರೆ, ೧೯೯೯ರ ವೇಳೆಗೆ ಅವು ಐದು ಮುದ್ರಣ ಕಂಡಿರುವುದು. ಇದುವರೆವಿಗೆ ಅವರ ಒಟ್ಟು ೬೩ ವಚನಗಳು ಹೊರಬಂದಿವೆ. ಅವರ ವಚನಗಳ ಒಟ್ಟು ಸ್ವರೂಪವನ್ನು ಲಕ್ಷ್ಯದಲ್ಲಿರಿಸಿಕೊಂಡು ಮತ್ತೊಬ್ಬ ಆಧುನಿಕ ವಚನಕಾರರಾದ ಡಾ. ಹೆಚ್. ತಿಪ್ಪೇರುದ್ರಸ್ವಾಮಿಯವರು ಟಿ.ಎನ್.ಮಹದೇವಯ್ಯನವರ ವಚನಗಳಲ್ಲಿನ ವಿಶೇಷತೆಯನ್ನು ಹೀಗೆ ಗ್ರಹಿಸುವರು: "ಅಂದಿನ ಶರಣರ ವಚನಗಳ ರೂಪ ಮತ್ತು ಸ್ವರೂಪವೇ ಈ ವಚನಗಳಿಗೂ ಮೂಲ ಪ್ರೇರಕಶಕ್ತಿ ಎಂಬುದು. ಆ ವಚನಗಳಂತೆ ಇವೂ ಸಹ ಆಧ್ಯಾತ್ಮಿಕ ಹಿನ್ನೆಲೆಯಲ್ಲಿ ರೂಪುಗೊಂಡಿರುವ ಆಂತರಿಕ ಅನುಭವದ ಅಭಿವ್ಯಕ್ತಿಯನ್ನೆ ಉದ್ದೇಶಿಸಿವೆ. ಆ ಶರಣತತ್ವದ ವ್ಯಾಪಕತೆಯನ್ನೂ ಸಾಧನೆಯನ್ನೂ ಇಂದಿನ ಈ ವಿಚಾರವಂತ ಮನಸ್ಸು ಪರಿಭಾವಿಸಿದೆ. ಆದರೆ, ವೈಚಾರಿಕತೆಗೆ ಮತ್ತು ಕಲಾತ್ಮಕ ರೂಪಕ್ಕೆ ಮಾರುಹೋಗಿದೆ"[೭] (ವಚನಕಾರ ಮಹದೇವಯ್ಯನವರು, ಪ್ರ: ವಿ.ಮಹದೇವ್ 'ಮಹದೇವಶ್ರೀ' ೩ನೇ ಅಡ್ಡರಸ್ತೆ, ವಿನೋಬನಗರ, ತುಮಕೂರು-೫೭೨ ೧೦೧).

ಪ್ರೊ. ಜಿ. ಎಸ್. ಸಿದ್ಧಲಿಂಗಯ್ಯನವರು ಅಭಿಪ್ರಾಯಪಡುವಂತೆ "ನವೋದಯಕಾವ್ಯದ ಎಲ್ಲ ಪ್ರಮುಖ ಗುಣಗಳನ್ನು ಒಳಗೊಂಡಂತೆ ಇವರು ಕಾವ್ಯವನ್ನು ಬರೆದವರು."[೮] (ಟಿ.ಎನ್.ಮಹದೇವಯ್ಯನವರ 'ಸಮಗ್ರ ಕಾವ್ಯ'ದ ಮುನ್ನುಡಿ). ನವೋದಯದ ಸಂದರ್ಭದಲ್ಲೇ ಆಧುನಿಕ ವಚನಗಳೂ ಟಿ.ಎನ್. ಮಹದೇವಯ್ಯನವರಿಂದ ಪ್ರಯೋಗಗೊಂಡಿರುವುದು ವಿಶೇಷ. ಬಹುಶಃ ಶಿವಶರಣರ ಬಗೆಗಿನ ವಿಶೇಷವಾದ ಆಸಕ್ತಿ-ವಚನಗಳ ಸಾಹಿತ್ಯಿಕ ಅಧ್ಯಯನ-ಅವರ ಆಧುನಿಕ ವಚನ ರಚನೆಗೆ ಪ್ರೇರಣೆ ನೀಡಿರಬಹುದು. ಅವರು ತಮ್ಮ ಒಂದು ವಚನದಲ್ಲಿ ೧೨ನೇ ಶತಮಾನದಲ್ಲಿ ವಚನ ಸೃಷ್ಟಿಯಾದ ಒಂದು ಅದ್ಭುತ ಚೋದ್ಯವನ್ನು ಆಶ್ಚರ್ಯದ ನೆಲೆಯಲ್ಲಿ ಕಂಡು ಉದ್ಗಾರ ತೆಗೆದಿರುವರು:

ಮೂಡಣದ ಮುಂಬೆಳಕಿನಲ್ಲಿ ಗಿರಿಯೇರಿ ನಿಂತು
ಮೊದಲ ವಚನದ ಕಹಳೆಯನೂದಿ ಜಗಕ್ಕೆ ತೋರಿದವರಾರಯ್ಯ!
ಹೊನ್ನಗಿಂಡಿಯ ಪಿಡಿದು
ಮೊದಲ ವಚನದ ಸುಧೆಯ
ಸವಿಯೂಟ ಬಡಿಸಿದವರಾರಯ್ಯ?
ಮುತ್ತುಮಾಣಿಕ್ಯ ಬೆರಸಿ
ಮೊದಲ ವಚನದ ಕಟ್ಟನಾರು

ಪದಬಂಧದಲ್ಲಿ ಕೂಡಿಸಿಟ್ಟರಯ್ಯ?
ಆ ಕಾರಣಿಕ ಮಹಾಶಿವಶರಣಂಗೆ
ಶ್ರೀ ಮಲೆಯ ಮಹಾದೇವ ಸಾಕ್ಷಿಯಾಗಿ
ನಮೋ ನಮೋ ಎನುತಿರ್ಪೆನಯ್ಯಾ.[೯]

ಬಸವಣ್ಣನವರ ಬಗೆಗೆ ಟಿ.ಎನ್. ಮಹದೇವಯ್ಯನವರಿಗೆ ವಿಶೇಷವಾದ ಭಕ್ತಿ, ಅಭಿಮಾನ, ಗೌರವ. 'ಕ್ರಾಂತಿಯ ದೀಪ' ಎನ್ನುವ ನಾಟಕವನ್ನೂ ಬರೆದಿರುವರು. ಬಸವಣ್ಣನವರ ವಚನಗಳು ಅವರ ಮೇಲೆ ಗಾಢವಾದ ಪ್ರಭಾವವನ್ನು ಬೀರಿವೆ. ಇದಕ್ಕೆ ಬಸವಣ್ಣನವರ ಪಿಂಡಸ್ಥಲದ ಮೊದಲ ವಚನ ಟಿ.ಎನ್.ಮಹದೇವಯ್ಯನವರಲ್ಲಿ ರೂಪಪರಾವರ್ತನೆಗೊಂಡು ಒಂದು ವಚನವಾಗಿ ಬಂದಿರುವುದನ್ನು ತುಲನಾತ್ಮಕವಾಗಿ ನೋಡಬಹುದು:

ಬಸವಣ್ಣ:

ಉದಕದೊಳಗೆ ಬಯ್ಚಿಟ್ಟ ಬಯ್ಕೆಯ ಕಿಚ್ಚಿನಂತಿದ್ದಿತ್ತು;
ಸಸಿಯೊಳಗಣ ರಸದ ರುಚಿಯಂತಿದ್ದಿತ್ತು;
ನನೆಯೊಳಗಣ ಪರಿಮಳದಂತಿದ್ದಿತ್ತು;
ಕೂಡಲಸಂಗಮದೇವರ ನಿಲವು
ಕನ್ನೆಯ ಸ್ನೇಹದಂತಿದ್ದಿತ್ತು.[೧೦]

ಟಿ.ಎನ್.ಮಹದೇವಯ್ಯ:

ಉದಕದ ಬಿಂದುವಿನಾಚೆ ಮರೆತು ಮಲಗೊರಗಿರುವ
ಬಡಬಾಗ್ನಿ ಬಳಿಗಾರ ದಿಟ್ಟಿ ತೆರಳಿತ್ತೋ
ಮೊಗ್ಗಿನಾಚೆಯ ಸವಿಗಂಪಿನೆಡೆಗಾರ ಮನ ಹರಿದು ನಡೆದಿತ್ತೋ!
ಕನ್ನೆಯಾ ಕಮನೀಯ ಕಾಂತಿಯಾಚೆಕಡೆ
ಶಿವನ ಸೌಂದರ್ಯವಾದ ನಟ್ಟನೋಟದ ಎದುರು
ಬಿಚ್ಚಿ ಹರಿಹಿತ್ತೋ.
ಆ ಕಾರಣಿಕ ಶಿವಶರಣ ಭಕ್ತಿ ಭಂಡಾರಿ ಬಸವಣ್ಣ
ಶ್ರೀಮಲೆಯ ಮಹಾದೇವ ಸಾಕ್ಷಿಯಾಗೆರಗಿ
ನಮೋ ನಮೋ ಎನುತಿರ್ಪೆನಯ್ಯಾ
ನಿನ್ನ ಅಡಿದಾವರೆಗಳಲಿ.[೧೧]

ಬಹುಶಃ ಟಿ. ಎನ್. ಮಹದೇವಯ್ಯನವರು ಮೇಲಿನ ವಚನದಲ್ಲಿ ತಮ್ಮ ಮೇಲೆ ಪ್ರಭಾವ ಬೀರಿದ ಉದಕದೊಳಗೆ ಬಚ್ಚಿಟ್ಟ....' ಎಂದು ಪ್ರಾರಂಭವಾಗುವ ಬಸವಣ್ಣನವರ ವಚನದ ಭಾವವಿಸ್ತರಣ ಮಾಡಿ,

ಇಂತಹ ಶ್ರೇಷ್ಠ ವಚನಕಾರ ಕೇವಲ ಶಿವಶರಣನಾಗಿರದೆ ಕಾರಣಿಕನೂ ಭಕ್ತಿಭಂಡಾರಿಯೂ ಆಗಿದ್ದನೆಂದು ಹೇಳಿ ಅಂತಹ ಮಹಾಮಹಿಮನಿಗೆ ನಮೋ ನಮೋ ಎಂದಿರುವರು. ಶಿವಶರಣೆಯರಲ್ಲಿ ಅಕ್ಕಮಹಾದೇವಿಯ ದಿವ್ಯವ್ಯಕ್ತಿತ್ವ ಟಿ.ಎನ್.ಮಹದೇವಯ್ಯನವರ ಮೇಲೆ ಪ್ರಭಾವ ಬೀರಿದೆ. ಅವಳ ಜೀವನ ಚರಿತ್ರೆಯನ್ನು (೧೯೩೫) ಬರೆಯುವ ಮೂಲಕ ಅವರು ತಮ್ಮ ಮನದಾಳದ ಗೌರವಾದರಗಳನ್ನು ಪ್ರಕಟಪಡಿಸಿರುವರು. ಅಷ್ಟಕ್ಕೆ ತೃಪ್ತರಾಗದೆ ಒಂದು ವಚನದಲ್ಲಿ ಅವರು ಅಕ್ಕಮಹಾದೇವಿಯನ್ನು ಕುರಿತು ತಮ್ಮ ಮೆಚ್ಚುಗೆಯನ್ನು ಸೊಗಸಾಗಿ ನಿರೂಪಿಸಿರುವರು. ವಚನದ ಒಂದೊಂದು ಸಾಲು ಅಕ್ಕಮಹಾದೇವಿಯ ಮೇರುಸದೃಶವ್ಯಕ್ತಿತ್ವದ ಪರಿಚಯಮಾಡಿಕೊಡುತ್ತದೆ. ಆ ದಿವ್ಯಮೂರುತಿಯ ಆರಾಧನೆ ಶಬ್ದಗಳಲ್ಲಿ ಸಾಕಾರಗೊಂಡಿದೆ. ವಚನ ಸಾಲುಸಾಲುಗಳಲ್ಲಿ ಬರುವ ಅವ್ವಾ'[೧೨] ಎನ್ನುವ, ಸಂಬೋಧನೆಯೆ ಅಕ್ಕಳ ಬಗೆಗಿನ ಗೌರವ, ಪೂಜ್ಯಭಾವಗಳನ್ನು ತೆರೆದಿಡುತ್ತದೆ. 'ತಿರೆಯ ಚರಿತೆಯೊಳೆಲ್ಲ ನಿನ್ನಂತೆ ಇನ್ನಿಲ್ಲ' ಎನ್ನುವ ಮಾತು ಅದ್ಭುತವಾದುದು;

ಅವ್ವಾ! ಬಾಲೆತನದಲ್ಲಿ ನಿನ್ನ ಜೀವ ಮುಪ್ಪು ಕಂಡಿತ್ತೆ?
ಅವ್ವಾ! ಚಿಗುರಿನಲಿ ನಿನ್ನಸುವು ಹಣ್ಣಾಗಿ ಬಂದಿತ್ತೆ?
ಅವ್ವಾ! ಬೀಣೆಯಿಂಚರ ನುಡಿಗಿಂತ ಮೊದಲಾಗಿ
ಪಂಚಮದ ತಾನದಲಿ ನುಡಿಸಿದ್ದಿತೆ?
ಅವ್ವಾ! ತಿರೆಯ ಚರಿತೆಯೊಳೆಲ್ಲ ನಿನ್ನಂತೆ ಇನ್ನಿಲ್ಲ.
ಶ್ರೀ ಮಲೆಯ ಮಹಾದೇವಂಗೆ ಮನ ಮಾರುಗೊಟ್ಟ
ಶರಣರ ಮನೆಯ ಮಹಾಮಗಳೆ,
ಅಕ್ಕಮಹಾದೇವಿ
ನಿಮ್ಮ ನಿಲವಿಂಗೆ ಶರಣು ಶರಣೆನುತಿರ್ದೆನವ್ವಾ.[೧೩]

ಶರಣ ಸಮೂಹದಲ್ಲೊಂದು ಅದ್ಭುತ ವ್ಯಕ್ತಿತ್ವ ಅಲ್ಲಮಪ್ರಭುದೇವರದು. ಅವರು ಶೂನ್ಯ ಸಿಂಹಾಸನಾಧೀಶ್ವರರು. ಅದನ್ನು ಟಿ.ಎನ್. ಮಹಾದೇವಯ್ಯನವರು ರೂಪಕ ಭಾಷೆಯಲ್ಲಿ ಆ ಶೂನ್ಯಸಿಂಹಾಸನದ ಪರಿಕಲ್ಪನೆಯನ್ನೂ, ಅದನ್ನು ಏರಿದ ಮಹಾಮಹಿಮನ ದಿವ್ಯತ್ವವನ್ನೂ ಹೀಗೆ ತಿಳಿಯಪಡಿಸುವರು;

ಎಂದು ಸಂಭ್ರಮಿಸಿ ಹೇಳುತ್ತಾ, ಆ ಮೂರ್ತಿಯು 'ಶೂನ್ಯ'ದ ಆಳವನ್ನು ಅರಸಿ ಲಿಂಗಾನುಭವವನ್ನು ಮಾಡಿಕೊಂಡು ಶರೀರದಲ್ಲಿ ಅದನ್ನು ಅಳವಡಿಸಿ ಜಗದ ಗುರುವಾದ, ಬಚ್ಚಬರಿ ಬಯಲಿನೊಳಗೋಲಾಡಿದ ಪ್ರಭುದೇವರ ಪಾದಗಳಿಗೆ ಭಕ್ತಿಪೂರ್ವಕವಾಗಿ ನಮಿಸುವರು.

ಬ್ರಹ್ಮಾಂಡದ ಎಲ್ಲೆಡೆಯಲ್ಲೂ ಸೃಷ್ಟಿಕರ್ತನ ಲೀಲೆಯ ಸೋಜಿಗವನ್ನು ಕಾಣುವ ಕವಿಯ ಕಣ್ಣು ಅದನ್ನು ಆಶ್ಚರ್ಯದ ನೆಲೆಯಲ್ಲಿ ತಿಳಿಸುವ ರೀತಿ ಅದ್ಭುತವಾಗಿದೆ. ವಚನದ ಅಂಕಿತವನ್ನು ತೆಗೆದುಬಿಟ್ಟರೆ ವಚನವು

ಸುಂದರ ಕವಿತೆಯಾಗಿ ನಿಲ್ಲುತ್ತದೆ; ವಚನ ರಚನೆಯ ಹಿಂದೆ ಕವಿಮನದ ಶಾಬ್ದಿಕ ಗಾರುಡಿ ಕೆಲಸ ಮಾಡುವುದರಿಂದ ಒಂದು ಕವಿತೆಯ ಓದಿನ ಸುಖಾನುಭವ ವಚನದಲ್ಲೂ ಘನೀಭೂತವಾಗಿ ನಿಲ್ಲುತ್ತದೆ. ಕವಿಮನದ ವಿಸ್ಮಯ ಮಾತಿನಲ್ಲಿ ರೂಪಧಾರಣೆ ಮಾಡುವಾಗ ವಚನ ಕವಿತೆಯಾಗಿಯೂ, ಕವಿತೆ ವಚನವಾಗಿಯೂ ದಿವ್ಯವಾದ ಆನಂದದ ಸುಖೋಷ್ಣತೆಯ ಅನುಭವವನ್ನುಂಟುಮಾಡುತ್ತದೆ. ಇದಕ್ಕೆ ಎರಡು ವಚನಗಳನ್ನು ಉದಾಹರಣೆಯಾಗಿ ಕೊಡಬಹುದು:

೧

ಚಿತ್ತಾರಕೊಂದು ಗೆರೆಯಾಗಿ
ಲಿಪಿಗೊಂದು ಅಕ್ಷರವಾಗಿ
ಕಾವ್ಯಕೊಂದು ಕಲೆಯಾಗಿ
ಜೀವಕ್ಕೊಂದು ಚೇತನವಾಗಿ
**ಜಗವೆಲ್ಲವನ್ನು ಆವರಿಸಿರುವ ನಿನ್ನ ನೋಡಯ್ಯ!**

ಹಕ್ಕಿಗಳ ಕೊರಳಲ್ಲಿ ನೀನು ವಾಣಿ
ಮೋಡಗಳ ಮರೆಯಲ್ಲಿ ನೀನು ಮಿಂಚು
ಅರಳಿದಲರಿನಲಿ ನೀ ಸೊಂಪು ಕಂಪು!
ಶ್ರೀ ಮಲೆಯ ಮಹದೇವ ನನ್ನ ಜೀವದಲಿ ನೀನೆ ಪ್ರಾಣ![೧೪]

ಸೃಷ್ಟಿಯ ವಿಸ್ಮಯೀಭಾವ ಇಡೀ ವಚನವನ್ನು ಕಾವ್ಯಮಯವಾಗಿಸಿದೆ. ಇಡೀ ವಿಶ್ವವನ್ನು ಆವರಿಸಿರುವ ಪರಮಾತ್ಮನ ವಿಚಿತ್ರ ಲೀಲೆಯ ಅನುಭೂತಿ ಕವಿಮನಕ್ಕೆ ಮಾತ್ರ ವೇದ್ಯ. ಆ ದಿವ್ಯಾನುಭವವನ್ನು ಕಾಣುವ ಕಣ್ಣು, ಅನುಭವಿಸುವ ಮನಸ್ಸು ಎರಡೂ ಕವಿಗಿರುವುದರಿಂದ ಆ ಬೆರಗು ಶಬ್ದಗಳಲ್ಲಿ ಮೈದಾಳಿದೆ.

೨

ಗುಟ್ಟೆಲ್ಲಿ ಬಂತಯ್ಯ ನನ್ನ ಎದೆಯಲ್ಲಿ
ತಿಳಿ ತಿಳಿಯಾಗಿ ಹರಿದುರುಳುತಿಹ ತೊರೆನೀರ ತೆರೆಕೂಡ
ಗುಟ್ಟು ಕಟ್ಟಯ್ತೆಂದು ಹಾಡಿ ಉರುಳುತಿದೆ.
ಗಿಡಮರದ ಕೊನೆಕೊನೆಯಲ್ಲು
ಹಣ್ಣ ಚಿಗುರೆಲೆ ತಾವೇ ಸುಳಿಗಾಳಿಗಲುಗಿ
ಗುಟ್ಟು ಬಯಲಾಯ್ತೆಂದು ನಗೆಯಾಡುತಿಹವಯ್ಯ!
ಸಂಜೆಮುಂಜಾನೆಗಳು ತೆರೆಯ ಮರೆಯೊಳು ಹಣಕಿ
'ಇನ್ನೆಲ್ಲಿ ಗುಟ್ಟೆ'ಂದು ಮತ್ತಡಗಿ ಮರೆಯಾಗುತಿಹರಯ್ಯ!
ಇರುಳ ನಭ ದಟ್ಟಣಿಸಿ ಕೋಟಿ ತಾರೆಯ ಕೂಡ

ನನ್ನ ಕೋಟಲೆಗೊಳಿಸಿ ಗುಟ್ಟು ಕಟ್ಟಾಯ್ತೆಂದು ಕಣ್ಣ ಮಿಟುಕಿಸುತಿಹುದಯ್ಯ!
ಎಲ್ಲೆಲ್ಲು ನೆಲೆಸಿರುವ ಶ್ರೀಮಲೆಯ ಮಾದೇವ
ನಿನ್ನ ಅನಂತವ್ಯಾಪ್ತಿಯ ಮುಂದೆಲ್ಲಿ ಬಂತಯ್ಯ ನನ್ನ ಗುಟ್ಟು?[೧೫]

ಸೃಷ್ಟಿಯೊಂದು ಅದ್ಭುತ ರಹಸ್ಯ. ಅದರ ಗರ್ಭದಲ್ಲರಳಿದೆ ವಿಸ್ಮಯದ ಲೋಕ. ಸೃಷ್ಟಿಯ ಈ ಅದ್ಭುತ ಸ್ಫೋಟಗೊಳ್ಳುವುದು ಅದರ ಪ್ರಾಪಂಚಿಕ ರೀತಿಯಲ್ಲಿ. ಈ ವಿಸ್ಮಯದ ತೆರೆ ಸರಿಯುವುದು, ಸೃಷ್ಟಿಯ ಗುಟ್ಟು ಬಯಲಾಗುವುದು ತೊರೆಯ ಜಳುಜುಳು ಹರಿವ ನಾದದಲ್ಲಿ; ಗಿಡಮರಗಳಲ್ಲಿ ಕಾಣಿಸಿಕೊಳ್ಳುವ ಚಿಗುರು, ಕಾಯಿ, ಹಣ್ಣುಗಳಲ್ಲಿ. ಸಂಜೆ ಮುಂಜಾನೆಯ ಕತ್ತಲೆ-ಬೆಳಗುಗಳಲ್ಲಿ; ರಾತ್ರಿಯ ಆಗಸದಲ್ಲಿ ಕೋಟಿ ಕೋಟಿ ನಕ್ಷತ್ರಗಳು ತಮ್ಮ ಕಣ್ಣು ಮಿಟುಕಿಸುವಲ್ಲಿ ತಮ್ಮ ಆರಾಧ್ಯ ದೈವ ಮಲೆಯ ಮಹಾದೇವನನ್ನು ಸಮಸ್ತ ಸೃಷ್ಟಿಯ ಚೈತನ್ಯ ಶಕ್ತಿಯಾಗಿ ಪರಿಭಾವಿಸುವ ಕವಿ ಆ ಸೃಷ್ಟಿಯ ಅನಂತ ಲೀಲೆಗಳಲ್ಲಿ ಅದರ ರಹಸ್ಯ ಸ್ಫುಟಗೊಳ್ಳುವುದನ್ನು ಕವಿ ಮನಸ್ಸು ಗುರುತಿಸುತ್ತದೆ; ಆ ವಿಸ್ಮಯದಲ್ಲಿ ತಾನೂ ಕರಗಿಹೋಗುತ್ತದೆ.

ಭೂಮಾನುಭೂತಿಯು ಶ್ರೇಷ್ಠಕವಿಗೆ ಮಾತ್ರ ಸಾಧ್ಯ. ಆ ಭೂಮಾನುಭೂತಿಯ ದಿವ್ಯತೆಯನ್ನು, ಭವ್ಯತೆಯನ್ನು ಕಣ್ಣು-ಮನಗಳಿಗೆ ತಂದುಕೊಳ್ಳಬಲ್ಲ ಶ್ರೇಷ್ಠ ಕವಿ ಅದನ್ನು ನೋಡಿ, ಅನುಭವಿಸಿ ಆನಂದಿಸಬಲ್ಲ, ಆ ದಿವ್ಯ ಭವ್ಯ ಅನುಭವವನ್ನು ಶಬ್ದಗಳಲ್ಲಿ ಅವತರಿಸುವಂತೆ ಮಾಡಬಲ್ಲ. ಕವಿ ಮನಸ್ಸು ಕಂಡ ಆ ಭೂಮಾನುಭೂತಿ ಹೀಗಿದೆ:

ಭೂಮಿಯ ಕರಸ್ಥಲದಲ್ಲಿ ಗಿರಿಯೆಂಬುದೊಂದು ಶಿವಲಿಂಗ ಕಾಣಿರಯ್ಯ;
ಲಿಂಗದ ಮೇಲೆರೆದ ಜಲಧಾರೆ ತಾನೆ ಹೊಳೆ ತೆರೆ ಕಾಣಿರಯ್ಯಾ!
ಲಿಂಗದ ಮೇಲೇರಿಸಿದ ನಿಚ್ಚ ನೇಹದ ಕುಸುಮವಿಸರದ ರಾಶಿ
ದೇಗುಲವೆ ಕಾಣಿರಯ್ಯ!
ಲಿಂಗಯ್ಯನಿಗೆತ್ತಿ ಹಿಡಿದ ಮಂಗಳಾರತಿ ತರಣಿ ಕಾಣಿರಯ್ಯ![೧೬]
ಲಿಂಗಯ್ಯನ ಸಂಗ ಸಂಗವಾಗಿ ನಿಜಸಂಗ ನಿಸ್ಸಂಗವಾಗಲೆಂದು ಕಾಲನ ದೀಪ,
ಮಲೆಯ ಮಹಾದೇವನ ನಿಜಚರಣದಲಿ ಹಚ್ಚಿಟ್ಟ ನಂದಾದೀಪ ಕಾಣಿರಯ್ಯ!

ಭೂಮಿಯನ್ನು ಅಂಗೈಯಾಗಿಯೂ ಅದರ ಮೇಲಿನ ಪರ್ವತವು ಇಷ್ಟಲಿಂಗವಾಗಿ ಲಿಂಗಕ್ಕೆ ನೀರಿನ ಅಭಿಷೇಕವನ್ನು ಹೊಳೆಯು ಮಾಡುತ್ತಿದೆಯೆಂದೂ, ಅಂಗಕ್ಕೇರಿಸಿದ ಹೂವೇ ದೇಗುಲವಾಗಿಯೂ, ಲಿಂಗಕ್ಕೆ ಹಿಡಿದ ಮಂಗಳಾರತಿಯೇ ಸೂರ್ಯನೆಂದೂ, ಲಿಂಗಯ್ಯನ ಸಂಗ-ನಿಸ್ಸಂಗಗಳ ಭಾವಭ್ರಮೆಯನ್ನು ನಿವಾರಿಸಲು ಕಾಲವೆನ್ನುವ ದೀಪವನ್ನು ಹಚ್ಚಿಡಲಾಗಿದೆಯೆಂದೂ ಅದು ಮಲೆಯ ಮಹಾದೇವನ ಕಾಲ ಬಳಿ ಹಚ್ಚಿಟ್ಟ ನಂದಾದೀಪವೆಂದೂ ಭಾವಿಸುವ ಈ ಅದ್ಭುತ ಕಲ್ಪನೆಯು ಅಥವಾ ಭೂಮಾನುಭೂತಿಯು ಮಹಾಕವಿಯೊಬ್ಬನ ಧೀಶಕ್ತಿಗೆ ಮಾತ್ರ ಸಾಧ್ಯ. ಸಾಮಾನ್ಯ ಕವಿಯೊಬ್ಬನ ಕಲ್ಪನೆಗೆ ಬರಲು ಸಾಧ್ಯವೇ ಇಲ್ಲ. ಪರಮಾತ್ಮನು ಮುಳುಗುವ ಸೂರ್ಯನ ಮರೆಯಲ್ಲಿ ಕೆಂಡದ ಕೆಂಪಾಗಿದ್ದನು; ಬೆಳಗುವ ಚಂದ್ರನ ಹಿಂದುಗಡೆ ಅವನು ತಂಪಿನ ಪೆಂಪಾಗಿದ್ದನು;

ತೊಳಗುವ ನಕ್ಷತ್ರಗಳ ಗುಂಪಿನಲ್ಲಿ ಅವನು ಪುಟ್ಟ ಬೆಳಕಾಗಿದ್ದನು. ಈ ಮೂವರಲ್ಲಿ ತಾನು ತಾನೇ ಆಗಿ ಆಡುತ್ತಲಿದ್ದ ಆ ಪರಮಾತ್ಮನ ನಿಲವನ್ನು ತಿಳಿದವರಾರು? ಎಂದು ಟಿ.ಎನ್. ಮಹದೇವಯ್ಯನವರು ಪ್ರಶ್ನಿಸುವರು. ಹೀಗೆ ಪ್ರಕೃತಿಯಲ್ಲಿ ಪರಮಾತ್ಮನ ನೆಲೆಗಾಣುವುದು ಸಾಮಾನ್ಯರಿಗೆ ಸಾಧ್ಯವಿಲ್ಲ. ಅದು ಕವಿಯ ಕಾಣ್ಕೆ! ಕವಿಮನದ ವಚನಕಾರನ ಕಾಣ್ಕೆ!!

ಭಕ್ತಿ ಸರಳವಾಗಿರಬೇಕು. ಪೂಜೆ ಆಡಂಬರವಿರಹಿತವಾಗಿರಬೇಕು. ಶಿವನನ್ನು ಒಲಿಸಲು ಒಮ್ಮೆ ಶರಣು ಎಂದರೆ ಸಾಕು. ಇದನ್ನು ಹಲವು ವಚನಗಳಲ್ಲಿ ಟಿ.ಎನ್.ಮಹದೇವಯ್ಯನವರು ಹೇಳಿರುವರು. ಅವರು ತಮ್ಮ ಒಂದು ದೀರ್ಘ ವಚನದಲ್ಲಿ ಭಕ್ತರ ಆಡಂಬರದ ಪೂಜೆಯನ್ನು ಖಂಡಿಸಿರುವರು:

ಸಾಸಿರತೊಲ ಹೊನ್ನನು ಕೂಡಿಸಿ
ಸಾಸಿರತೊಲ ಬೆಳ್ಳಿಯ ಬೆರಸಿ
ಅಂದಚೆಂದದ ಮೂರ್ತಿಯ ಕಡೆಸಿ
ಪೂಜಿಪರಯ್ಯಾ, ಹಗಲಿರುಳೂ ಜಾನಿಪರಯ್ಯ!
ಶತಶತತೀರ್ಥದ ಜಲವನು ಹೊತ್ತು
ಮುಂಬೆಳಗಿನ್ನು ಮೂಡುವ ಮೊದಲೆ
ಎರೆಯುವರಯ್ಯಾ, ಅಭಿಷೇಕವೆಂದು ಸುರಿಯುವರಯ್ಯ!
ಬೆಟ್ಟ ಗಿರಿ ಕಾನನ ಸುತ್ತಿ
ಸಾಸಿರ ಕಮಲವನೇರಿಸಿ ಶಿರದಲ್ಲಿ ಮೆರೆಸುವರಯ್ಯ!
ಸುಗಂಧ ಕುಸುಮಗಳನೂಡಿಪರಯ್ಯಾ!
ಕೋಟಿಕಲ್ಲಿನ ಮಂಟಪ ಕಟ್ಟಿ ಚಿನ್ನದ ತಗಡು
ಬೆಳ್ಳಿಯ ಬೋದಿಗೆ ರತ್ನದ ಕಾರಣೆ ಬಿಗಿಸುವರಯ್ಯ!
ಮರಕತ ತೋರಣ ಹರಿಸುವರಯ್ಯ!
ನಿಗೂಢಶಾಸ್ತ್ರದ ವಿಧಿಯನುಸರಿಸಿ
ಪುರಂತನಾದಿಯ ವೇದವ ನುತಿಸಿ
ವೇದಮಂತ್ರವ ಹೇಳುವರ!
ವಾದ್ಯಘೋಷ ಮಾಡುವರಯ್ಯ!
ಹರಿಯುವ ಮನವನು ಹಾರಲು ಬಿಟ್ಟು,
ಕಾಮಕ್ರೋಧವ ಕೆರಳಿಸಿ ಕುಣಿಸಿ
ಹೊನ್ನು ರತುನವ ಸುರಿದರೆ ಬಂತೆ?
ನಿಶ್ಚಲ ಧ್ಯಾನದ ಬತ್ತಿಯನೆರೆದು,
ಕ್ರಿಯಾಜ್ಞಾನದ ಪುಷ್ಪವನೇರಿಸಿ,

ತನುಮನಭಾವದ ಮಂತ್ರವ ನುತಿಸಿ
ಶರಣೊಮ್ಮೆಂದರೆ ಅದೆ ಸಾಕು!
ನಮ್ಮ ಶ್ರೀ ಮಲೆಯ ಮಹಾದೇವನ ಪೂಜಿಸಿ
ನುತಿಸಿದರೊಲವಿನ ನುಡಿಯೊಂದೇ ಸಾಕು![೧೭]

ಟಿ.ಎನ್. ಮಹದೇವಯ್ಯನವರು ಸ್ವಭಾವತಃ ಅನುಭಾವಿ ಕವಿ. ಅವರ ವಚನಗಳಲ್ಲಿ ಸಾಮಾಜಿಕ ಟೀಕೆ/ ವಿಡಂಬನೆ ಬಹಳ ಕಡಿಮೆ. ಕಳ್ಳತನ, ಕೊಲೆಮಾಡುವವರನ್ನು ಅವರು ನೇರವಾಗಿ ಟೀಕಿಸುವುದಿಲ್ಲ; ಅವುಗಳನ್ನು ಆಧ್ಯಾತ್ಮಿಕ ಅರ್ಥವಲಯಕ್ಕೆ ಹೊರಳಿಸಿಬಿಡುವರು. ಕೆಳಗಿನ ಎರಡು ವಚನಗಳನ್ನು ಉದಾಹರಣೆಗೆ ನೋಡಬಹುದು:

ಕಳಬೇಡವೆಂಬಿರಯ್ಯ, ಕಳವುದ ಕಲಿತು
ಇನಿತು ದಿನ ನುರಿತು ಕಳದೆ ಬಾಳುವುದೆಂತು?
ಎದೆಯ ಮನೆಗೊಂದು ಕನ್ನವ ಹಾಕಿ,
ಆಸೆಯಾಮಿಷದ ಕಾಪನು ಹಿಡಿಸಿ,
ಸಾಲಲಿ ನಿಲ್ಲಿಸಿ ಬೂದಿಯನೆರಚಿ,
ಮರವಿನ ಕತ್ತಲ ಕೋಣೆಯ ಹೊಕ್ಕು
ಅರಿವಿನ ದೀಪದ ಕೈ ಬೆಳಕಿತ್ತು
ಭಕ್ತಿಯ ಪೇಠಿಯ ಮೆಲ್ಲಗೆ ಹೊತ್ತು
ಭಕ್ತ ಮಹೇಶ ಪ್ರಸಾದಿ ಪ್ರಾಣಲಿಂಗ ಶರಣ ಐಕ್ಯ
ಎಂಬ ಮೆಟ್ಟಿಲನೇರಿ ಕ್ರಿಯಾಜ್ಞಾನದ ಬಲದಿಂ ತೂರಿ,
ಬಯಲಿನ ಬಯಲಲ್ಲಿ ಮೈಮರೆತು
ಶ್ರೀಮತಿಯ ಮಹಾದೇವನ ಸಿರಿಸಿಂಗರದಲ್ಲಿ
ನಾನೊಂದಾಗೆ ಉಂಟೇ ಅಯ್ಯಾ!
ಕೊಲಬೇಡ! ಕೊಲಬೇಡ! ಕೊಲಬೇಡವೆಂಬಿರಯ್ಯ!
ಕೊಲೆಗಡುಕನಾಗಿದ್ದು ಕೊಲದಿರುವುದೆಂತು?
ಶಿವನಾಮ ಶಸ್ತ್ರವನ್ನು ಒರೆಯಿಂದ ಹಿರಿದೆಳೆದು
ಭವಹರನ ಕೀರ್ತನೆಯ ಬಾಯಲ್ಲಿ ನುಡಿದು
ಕಾಮಕ್ರೋಧಗಳುಬ್ಬಿ ಮೈಮರೆತು ಮಲಗಿರಲು
ಸಾಧನೆಯ ಮೇಲು ನಡೆಯ ಮುಂದಿರಿಸಿ ನಡೆದು,
ಶಿರಹರಿದು ಸಿರಿದೊಗೆದು ಭವದ ರಕುತನ ಹರಿಸಿ
ಶಿವನೊಲುಮೆಯನು ಪಡೆದಾತನೇ
ಶ್ರೀಮಲೆಯ ಮಹಾದೇವನ ನಿಜಚರಣದಲ್ಲಿ[೧೮]

ಟಿ.ಎಸ್. ಮಹದೇವಯ್ಯನವರ ಮನೋಧರ್ಮ ಸರಳವಾದುದು. ೧೨ನೇ ಶತಮಾನದ ಶಿವಶರಣರಿಂದ ಪ್ರೇರಿತವಾದುದು. ಭಕ್ತಿ ಎನ್ನುವ ಬತ್ತಿಗೆ ಕ್ರಿಯೆ ಮತ್ತು ಜ್ಞಾನದ ಉರಿಯನ್ನು ತಾಕಿಸಿ ಅವರು ದೀಪವನ್ನು ಹಚ್ಚಿದ್ದಾರೆ. ಈ ಸರಳ ವಚನ ಅವರ ಮನೋಧರ್ಮವನ್ನು ಬಿಂಬಿಸುತ್ತದೆ:

ನಾನೊಂದು ದೀಪದ ಹಚ್ಚುವೆನಯ್ಯ
ಮನದ ಹಣತೆಯ ತೊಳೆದು
ನೇಹದ ತೈಲವ ಸುರಿದು,
ಭಕ್ತಿಯ ಬತ್ತಿಯನೂಡಿ
ನಾನೊಂದು ದೀಪವ ಹಚ್ಚುವೆನಯ್ಯಾ!
ಕ್ರಿಯಾಜ್ಞಾನದ ಉರಿತಾಗಿ
ನಿಚ್ಚ ನಿಚ್ಚ ಲಿಂಗಯ್ಯನ ಬೆಳಗಲೆಂದು;
ನಮ್ಮ ಮಲೆಯ ಮಹಾದೇವನ ಚರಣವ ತೊಳಗಲೆಂದು
ನಾನೊಂದು ದೀಪವ ಹಚ್ಚುವೆನಯ್ಯಾ![೧೮]

ಅವರು ತಮ್ಮ ಒಂದು ವಚನದಲ್ಲಿ ತಮ್ಮ ಪಂಚೇಂದ್ರಿಯಗಳೆಲ್ಲವನ್ನೂ ಮಲೆಯ ಮಹಾದೇವನಿಗೆ ಅರ್ಪಿಸುವೆನೆನ್ನುವರು. ಭಾವದೊಳಗೆ ಹುಟ್ಟಿದ ಜ್ಞಾನ, ಮನದಲ್ಲಿ ಹುಟ್ಟಿದ ವೈರಾಗ್ಯ, ಹೃದಯದಲ್ಲಿ ಒಸರುವ ಭಕ್ತಿ, ಶರೀರದಲ್ಲಿ ನಡೆಯುವ ಕ್ರಿಯೆ-ಈ ನಾಲ್ಕು ಒಂದಾಗದಿದ್ದರೆ ನಮ್ಮ ಪೂಜೆ ವ್ಯರ್ಥವೆನ್ನುವರು. 'ಶರಣನ ಪೂಜೆಗೆ ಭಕ್ತಿರಸವೆರೆವುದೆ ಜಲಾಭಿಷೇಕ; ಜ್ಞಾನದ ಕುಸುಮವೆ ಪುಷ್ಪಾರ್ಚನೆ; ವೈರಾಗ್ಯದ ಸವಿದಂತೇ ದೀಪ ಧೂಪಂಗಳು; ಕ್ರಿಯೆಯ ಕೈವಾಡವೇ ನಿಚ್ಚಪೂಜೆ' ಎಂದಿರುವರು. ಇಲ್ಲೆಲ್ಲ ಸಮನ್ವಯ ಮಾರ್ಗವನ್ನು ಕಾಣುವೆವು ಇದು 'ಶರಣನ ಶಿವಾರ್ಚನೆಯೆಂದು ಪ್ರಾಣಪೂಜೆಯಯ್ಯಾ....'[೨೦] ಎಂದು ಪ್ರಾರಂಭವಾಗುವ ವಚನದಲ್ಲೂ ಕಾಣಬರುತ್ತದೆ. 'ಲಿಂಗವೆನ್ನೆ ಲಿಂಗೈಕ್ಯವೆನ್ನೆ...' ಎಂದು ಪ್ರಾರಂಭವಾಗುವ ವಚನವನ್ನು ಓದುತ್ತಿದ್ದಂತೆ ಶರಣರ ಆಲೋಚನೆಯ ನೆರಳಾಗಿ ಅಥವಾ ಮುಂದುವರಿಕೆಯಾಗಿ ಕಾಣಬರುತ್ತದೆ. ನೋಡಿದ್ದು, ಮುಟ್ಟಿದ್ದು, ಮನಬಯಸಿದ್ದು ಹೊನ್ನಾದರೆ ಅವುಗಳಿಂದ ಕೆಟ್ಟ ಮೈದಾಸನ ದೃಷ್ಟಾಂತವನ್ನು ಮಹದೇವಯ್ಯನವರು ಕೊಡುವರು. ಆಧುನಿಕ ವಚನಕ್ಕೆ ಆಧುನಿಕ ಹೋಲಿಕೆಗಳ ಅಗತ್ಯವಿದೆಯೆಂಬುದನ್ನು ಅವರು ಯೋಚಿಸುವರು. ಹಾಗೆ ಚಿಂತಿಸುತ್ತ 'ಕರದಿಷ್ಟಲಿಂಗವೇ ಪರಸುಗಲ್ಲು, ಚಿಂತಾಮಣಿ, ಮಲೆಯ ಮಹದೇವನ ನಿಜರೂಪದ ಕಣ್'[೨೧] ಎಂದು ಸಾಂಪ್ರದಾಯಿಕ ಚಿಂತನೆಗೆ ಹೊರಳುವರು. ಪರಮಾತ್ಮನ ಸಾಕ್ಷಾತ್ಕಾರಕ್ಕಾಗಿ ಹಂಬಲಿಸುತ್ತಿರುವ ಜೀವ ತನ್ನನ್ನೊಂದು ದುಂಬಿಯಾಗಿ ಭಾವಿಸಿಕೊಳ್ಳುವ ನೆಲೆಯಲ್ಲಿ ವಚನ ಕಾವ್ಯದ ಸಂಸ್ಪರ್ಶ ಪಡೆಯುತ್ತದೆ. ವಚನದ ಕೊನೆಯ ಸಾಲುಗಳು ಮನದ ತೀವ್ರ ಹಂಬಲವನ್ನು ಬಿಂಬಿಸುತ್ತವೆ-ಪರಿಣಾಮಕಾರಿಯಾಗಿ:

ನಾನೊಂದು ದುಂಬಿಯಾಗರಸುತಿಹೆನಯ್ಯ
ನೀನೊಂದು ಸುಮನಾಗಿ ಚಿಕ್ಕ ಚಿಗುರಿನಲಿ
ಮರೆಮಾಚುತಿಹೆಯಯ್ಯ!
ನಿನ್ನಿಂದಕಾಣದಲೆ ಕಂಪರಸಿ 'ಜೀಂ' ಎಂದು

ಸುತ್ತುತಿಹೆನಯ್ಯ!
ಅರಸರಸಿ ಬಂದಂತೆ ನೀ ಮರಮರಸಿ ಮರೆಯಾಗಿ
ಕಾಡುತಿಹೆಯಯ್ಯ!
ಬೇಡಿದವರ ಕಾಡುವುದೆ, ಕಾರುಣ್ಯನಿಧಿ ನೀನು
ಕಂಗಳಿಗೆ ತೋರಯ್ಯ
ಶ್ರೀ ಮಲೆಯ ಮಹಾದೇವ ನಿನ್ನ ನಿಲವ ಬೇಗ![೨೨]

ಡಾ. ಹೆಚ್. ತಿಪ್ಪೇರುದ್ರಸ್ವಾಮಿಯವರು ಅಭಿಪ್ರಾಯಪಡುವಂತೆ "ಅಂತರಂಗದ ಶೋಧನೆ, ಅಂತರಂಗ-ಬಹಿರಂಗಗಳ ಸಮನ್ವಯದಿಂದ ಸಿದ್ಧಿಸಿದ ಪೂರ್ಣದೃಷ್ಟಿ, ಮತ್ತು ಆ ದೃಷ್ಟಿಗೆ ಅನುಗುಣವಾದ ಸಾಹಿತ್ಯ ಸೃಷ್ಟಿ ಕೌಶಲ್ಯಗಳನ್ನು ಕವಿ-ಅನುಭಾವಿ ಈ ಎರಡು ಮಾರ್ಗಗಳಲ್ಲೂ ಬೆಳೆಯುತ್ತಿರುವ ಚೇತನವಾಗಿ ಮಹದೇವಯ್ಯನವರು ಇಲ್ಲಿ ಕಾಣಿಸಿಕೊಳ್ಳುತ್ತಾರೆ."[೨೩] ಅವರ ಸೃಜನಪ್ರತಿಭೆ ವಯಸ್ಸಿನೊಂದಿಗೆ ಮಾಗುತ್ತಿರುವ ಹಂತದಲ್ಲೇ ನಿಂತುಹೋಯಿತು ಅವರ ಅಕಾಲಿಕ ನಿಧನದಿಂದ. ಅವರ ಕಾವ್ಯ ಪಡೆದಷ್ಟು ವೈಶಾಲ್ಯ ಹಾಗೂ ವೈಪುಲ್ಯವನ್ನು ಅವರ ವಚನಗಳು ಪಡೆಯಲಿಲ್ಲ. ಬಹುಶಃ ಈಗಿನಂತೆ ಆಗ ಆಧುನಿಕ ವಚನದ ಅಬ್ಬರ ಹೆಚ್ಚಿರಲಿಲ್ಲವೇನೊ. ಅವರು ಇನ್ನಷ್ಟು ಕಾಲ ಬದುಕಿದ್ದರೆ, ಆಧುನಿಕ ವಚನ ಸಾಹಿತ್ಯ ಪ್ರಕಾರಕ್ಕೆ ಅವರಲ್ಲಿ ನೆರೆ ಬಂದು ಮಹತ್ವದ ವಚನಕಾರರಾಗಿ ಪರಿಗಣಿತರಾಗುತ್ತಿದ್ದರೇನೋ. ಸದ್ಯಕ್ಕೆ ದೊರೆತಿರುವ ಅವರ ೬೪ ವಚನಗಳ ಮೂಲಕ ಅವರ ಸ್ಥಾನ ನಿರ್ದೇಶನ ಮಾಡುವುದು ಕಷ್ಟವಾಗುತ್ತದೆ ಇಷ್ಟು ಮಾತ್ರ ಹೇಳಬಹುದು: ಅವರು ಕವಿಯಾಗಿ, ಅನುಭಾವಿಯಾಗಿ ನೆನಪಿನಲ್ಲಿ ಉಳಿಯುವ ವಚನಗಳನ್ನು ಬರೆದಿರುವರು. ಇನ್ನೊಂದು ಮಹತ್ವದ ಸಂಗತಿಯೆಂದರೆ, ಅವರು ೨೦ನೇ ಶತಮಾನದಲ್ಲಿ ಬರೆದರೂ ೧೨ನೇ ಶತಮನದ ವಚನ ಪರಿಸರದ ಅನುಭಾವಿಕವಿಯಾಗಿಯೇ ತಮ್ಮ ಚಹರೆಯನ್ನು (identity) ಉಳಿಸಿಕೊಂಡಿರುವರು; ಅವರ ಭಾವ ಹಾಗೂ ಭಾಷೆ ಎರಡೂ ಶಿವಶರಣರ ಕಾಲದ್ದು. ಅವರು ಆಶಾವಾದಿ-ವಚನಕಾರರಂತೆ ಬದುಕಿನಲ್ಲಿ ದುಃಖ, ಎಡರುಗಳು ಮನಸ್ಸನ್ನು ಪರೀಕ್ಷಿಸಲು ಬರುತ್ತವೆ. ಅವನ್ನು ನಿಜಶರಣನು ಗೆಲ್ಲಲು ಪ್ರಯತ್ನಿಸುವನು. ಆ ಆಶಾವಾದ ಕೆಳಗಿನ ವಚನದಲ್ಲಿ ಮೈದಾಳಿವೆ:

ದುಃಖ ಬಂತೆಂದಳುವನವನೊಬ್ಬ ಹೇಡಿ ಕಾಣಿರೋ!
ಎಡರು ಬಂತೆಂದಳಲುವನವನೊಬ್ಬ ಹಂದೆ ಕಾಣಿರೋ!
ತನು-ಮನವಟ್ಟಿ ಸುಟ್ಟು ಶುಚಿ ಮಾಡಲೆಂದು ಬಂದಿತ್ತು ದುಗುಡ!
ತನು-ಮನದ ಭಾವವನ್ನು ಮೀರಿ ನಿಂದಾತನೇ
ಶ್ರೀ ಮಲೆಯ ಮಹಾದೇವನ ಚರಣದಲ್ಲಿ ನಿಜಭಕ್ತ! ನಿಜಶರಣ! ನಿಜೈಕ್ಯಾ![೨೪]

ವಚನದ ಕೊನೆಯ ಸಾಲುಗಳಲ್ಲಿ ದುಃಖ ದುಗುಡ ಎಡರುಗಳು ಪರೀಕ್ಷೆಗಳು. ಅವುಗಳನ್ನು ಮೀರಿ ನಿಲ್ಲುವವನೆ ನಿಜವಾದ ಭಕ್ತ, ಶರಣ, ಐಕ್ಯ ಎಂದು ಹೇಳುವಲ್ಲಿ ಆಶಾವಾದ ಕೆನೆಗಟ್ಟುತ್ತದೆ. ಟಿ.ಎನ್. ಮಹದೇವಯ್ಯನವರು ಆ ಅರ್ಥದಲ್ಲಿ ನಿಜವಾದ ಮಲೆಮಹಾದೇವನ ಭಕ್ತ!



೯

# ಸಣ್ಣಕತೆಗಳು-ಎರಡು ವಿಖ್ಯಾತ ಪ್ರಣಯ ಕಥೆಗಳು

ಶ್ರೀಯುತ ಟಿ. ಎನ್. ಮಹದೇವಯ್ಯನವರು ಅನ್ಯದೇಶಿಯ ಪುರಾಣ ವ್ಯಕ್ತಿಗಳ ಪರಿಚಯ ಮಾಡಿಕೊಟ್ಟಿರುವ ಹಲವಾರು ಲೇಖನಗಳಲ್ಲಿ ಈಜಿಪ್ಟಿನ ರಾಜಮನೆತನದ ಮೂಲವ್ಯಕ್ತಿಗಳಾದ ಈಸಿನ್-ಆಸಿರಿನ್ ಹಾಗೂ ಪೋರ್ಚುಗೀಸ್‌ನ ಇನೆಜ್- ಪೆಡ್ರೋ ಇವರ ಪ್ರಿಯತಮನ ಪ್ರಣಯ ಕಥೆಗಳನ್ನು ನಿರೂಪಿಸುವ ಎರಡು ಬರೆಹಗಳನ್ನಿಲ್ಲಿ ಪರಿಚಯ ಮಾಡಿಕೊಡಲು ಪ್ರಯತ್ನಿಸಲಾಗಿದೆ. ಮೊದಲ ಲೇಖನವು ಹಲವಾರು ಆಧಾರಗಳನ್ನು ಪಡೆದು ರಚಿತವಾಗಿದ್ದರೆ. ಎರಡನೆಯದು ಶ್ರೀ ಎಯಿಲೀನ್ ಬಿಗ್‌ಲ್ಯಾಂಡ್ (Eillen Bigland) ಅವರ ಲೇಖನದ ನೇರ ಆಧಾರದಿಂದ ರಚಿತವಾದದ್ದೆಂದು ಲೇಖಕರೇ ಹೇಳಿಕೊಂಡಿದ್ದಾರೆ.[೧]

ಆಸಿರಿಸ್ ಸೂರ್ಯನಿಗೆ ಮೂರನೆಯ ತಲೆಯವನಾದ ಪ್ರಾಚೀನ ಈಜಿಪ್ಟಿನ ದೇವತೆ. ಅವನಿಗೊಬ್ಬ ತಮ್ಮ: ಟೈಫಾನ್ ಅವನ ಹೆಸರು ಇವರಿಬ್ಬರೂ ಒಡಹುಟ್ಟಿದವರಾದರೂ ಗುಣಲಕ್ಷಣಗಳಲ್ಲಿ ಉತ್ತರಧ್ರುವ ದಕ್ಷಿಣಧ್ರುವಗಳು. ಅಣ್ಣ ಎಷ್ಟು ಉದಾತ್ತನೋ ಪ್ರಶಾಂತನೋ ತಮ್ಮ ಅಷ್ಟೇ ಕ್ಷುಲ್ಲಕ ಹಿಂಸಾರಭಸಮತಿ: ಅಣ್ಣ ನಿರ್ಮಲಾಂತಃಕರಣದವನಾದರೆ ತಮ್ಮ ಕುಸ್ಸಿತಬುದ್ದಿಯವನು; ಆಸಿರಿಸ್ ಸದಾ ಶುದ್ಧಜೀವನವನ್ನು ನಡೆಸಿದವನು, ತಮ್ಮ ಮದ್ಯಪಾನಿ, ಲಂಪಟ, ಒಟ್ಟಾರೆ, ಅಣ್ಣ ದೈವೀಗುಣದ ಮೂರ್ತಿಮತ್ತಾದರೆ ತಮ್ಮ ಸೈತಾನನ ಸ್ವರೂಪ. ಇಂತಹ ತಮ್ಮನಿಗೆ ಅಣ್ಣನ ರಾಜ್ಯವನ್ನು ಲಪಟಾಯಿಸುವ ಆಸೆ, ವೈಭವದಲ್ಲಿ ಮೆರೆಯುವ ಹಂಬಲ.[೨]

ಇದೊಂದೇ ಹಂಬಲವಾದರೆ ಪರವಾಯಿಲ್ಲವೆನ್ನಿಸಬಹುದು. ಅವನ ಇನ್ನೊಂದು ಮಹಾತ್ವಾಕಾಂಕ್ಷೆಯ ಹೇಯವಾದದ್ದು. ಆಸಿರಿಸ್ ತನ್ನ ಒಡಹುಟ್ಟಿದವಳಾದ ಈಸಿಪ್‌ಳನ್ನೆ (ಆಗಿನ ಈಜಿಪ್ಟ್ ದೇಶದ ಸಂಪ್ರದಾಯಗಳಿಗನುಗುಣವಾಗಿ) ಮದುವೆಯಾಗಿದ್ದ ಇವರಿಬ್ಬರ ದಾಂಪತ್ಯ 'ವರಲಕ್ಷ್ಮೀನಾರಾಯಣ ಸ್ವರೂಪಾಯ'. ಅತ್ಯಂತ ಚೆಲುವೆಯಾದ ಈಸಿಪ್‌ಳ ಮೇಲೆ ಟೈಫಾನ್‌ನ ಗೃಧ್ರಕಣ್ಣುಗಳು ಬಿದ್ದವು. ಅವಳ

ಸಹವಾಸ ಅವನ ಜೀವನಧ್ಯೇಯವಾಗಿ ಬಿಟ್ಟಿತು. ಅಣ್ಣನ ಸ್ವತ್ತಾಗಿದ್ದ 'ಧರೆಗಂ ಲತಾಂಗಿಗಂ' ಇವನು ಆಟಿಸಿ ಅವುಗಳನ್ನು ಪಡೆಯುವ ಉದ್ದೇಶದಿಂದ ಏನೆಲ್ಲ ಕಾರಸ್ಥಾನಗಳಲ್ಲಿ ತೊಡಗಿದೆ.

ಟೈಫಾನ್‌ನ ಕೆಲಸ ಅಷ್ಟು ಸುಲಭವಾದುದಾಗಿರಲಿಲ್ಲ. ಏಕೆಂದರೆ ಅಣ್ಣ-ಅತ್ತಿಗೆಯರು ದೇಶದ ಪ್ರಜೆಗಳೆಲ್ಲರ ಕಣ್ಮಣಿಗಳಾಗಿದ್ದರು. ಅವರ ಮೇಲೆ ತಾನು ಬಹಿರಂಗವಾಗಿ ಹಲ್ಲೆ ನಡೆಸಿದರೆ ಜನರೇ ತನ್ನನ್ನು ಪುಡಿಪುಡಿಗುಟ್ಟುವರೆಂಬ ಅರಿವು ಅವನಿಗಿತ್ತು. ಅದಕ್ಕೆ ಅವನು ಉಪಾಯದಿಂದಲೂ ಗುಪ್ತವಾಗಿಯೂ ಕಾರ್ಯಸಾಧಿಸುವುದನ್ನು ಆಲೋಚಿಸುತ್ತಿದ್ದ. ಕುಟಿಲಮತಿಯಾದ ಇವನ ಮಾತಿನ ಜಾಣ್ಮೆ- ಬಲ್ಮೆಗಳಿಗೆ ಬಿದ್ದು ಕೆಲವರು ಇವನೊಡನೆ ಸೇರಿಕೊಂಡರು. ಹೇಗೆ ತನ್ನ ಕಾರ್ಯವನ್ನು ಕೈಗೂಡಿಸಿಕೊಳ್ಳಬೇಕೆಂದು ಇವನು ಜಾಗರೂಕನಾಗಿ ವಿಚಾರ ಮಾಡುತ್ತಿದ್ದ.

ಈಜಿಪ್ಟಿಯನ್ನರಿಗೆ, ಸಾವಿನ ಬಗೆಗಿದ್ದ ವಿಶಿಷ್ಟ ಭಾವನೆಯಿಂದಾಗಿ ಅವರು ತಮ್ಮ ಸಾವಿನ ನಂತರ ತಮ್ಮನ್ನಿಡಬೇಕಾದ ಶವಪೆಟ್ಟಿಗೆಯನ್ನು ತಾನೇ ತಯಾರಿಸಿ ಇಟ್ಟುಕೊಳ್ಳುತ್ತಿದ್ದರು. ಅದು ವ್ಯಕ್ತಿಯ ಅಮೂಲ್ಯ ಆಸ್ತಿಯೆಂದು ಪರಿಗಣಿತವಾಗಿತ್ತು. ಟೈಫಾನ್ ಈ ನಂಬಿಕೆಯನ್ನೇ ತನ್ನ ಕಾರ್ಯಚರಣೆಗೆ ಬಳಸಿಕೊಂಡೆ. ಅರಸನ ಆಪ್ತಸೇವರಿಗೆ ಆಮಿಷಗಳನ್ನೊಡ್ಡಿ ರಾಜನ ದೇಹದ ಉದ್ದಳತೆಗಳನ್ನು, ಅವನ ಶವಪೆಟ್ಟಿಗೆಯ ಒಟ್ಟು ಅಳತೆಯ ಸ್ವರೂಪವನ್ನೂ ಸಂಗ್ರಹಿಸಿದ ಅತ್ಯಂತ ಸುಂದರವಾದೊಂದು ಶವಪೆಟ್ಟಿಗೆಯೊಂದನ್ನೂ ಅಣ್ಣನ ಅಳತೆಗಳಿಗನುಗುಣವಾಗಿ ತಯಾರುಮಾಡಿಸಿದ. ಅನಂತರ ಒಂದುವಿಶೇಷ ಭೋಜನಕೂಟವೊಂದನ್ನೇರ್ಪಡಿಸಿ ಅಣ್ಣ ಅತ್ತಿಗೆಯರನ್ನೂ ಇನ್ನೂ ಹಲವಾರು ಮಂದಿ ಆಪ್ತರು ಹಾಗೂ ಗಣ್ಯರನ್ನು ಆಹ್ವಾನಿಸಿದ. ಒಂದು ಕೋಣೆಯಲ್ಲಿ ಈ ಶವಪೆಟ್ಟಿಗೆಯನ್ನು ಎಲ್ಲರಿಗೂ ಕಾಣಿಸುವಂತೆ ಆಕರ್ಷಕವಾಗಿ ಇರಿಸಿದ್ದ.

ಊಟವಾಯಿತು ಟೈಫಾನ್ ಮೋಜಿನ ಕ್ರೀಡೆಯೆಂಬಂತೆ ತನ್ನ ಉಪಾಯ ಸಾಧನೆಯಲ್ಲಿ ತೊಡಗಿದ. ಅಲ್ಲಿ ನೆರೆದಿದ್ದ ಮಂದಿಯನ್ನು ಉದ್ದೇಶಿಸಿ ಮಾತನಾಡಿ ಯಾರ ದೇಹವು ಆ ಶವಪೆಟ್ಟಿಗೆಯಲ್ಲಿ ಸರಿಯಾಗಿ ಅಡಕವಾಗುತ್ತದೋ ಅವರಿಗೇ ಅದನ್ನು ಉಡುಗೊರೆಯಾಗಿ ನೀಡುವುದಾಗಿ ಘೋಷಿಸಿದೆ. ಎಲ್ಲರಿಗೂ ಆಸೆ- ಅಂತಹ ಸುಂದರ ಶವಪೆಟ್ಟಿಗೆ ತಮ್ಮದಾಗಬೇಕೆಂದು; ಸರಿ, ಎಲ್ಲರೂ ಅದರಲ್ಲಿ ಹೋಗಿ ಮಲಗಿ ಅದೃಷ್ಟ ಪರೀಕ್ಷೆ ಮಾಡಿದರು. ಅದರೆ ಅದು ಯಾರಿಗೂ ಸರಿಯಾಗಿ ಹೊಂದಲಿಲ್ಲ ಕೊನೆಗೆ ಈ ಧೂರ್ತ ಅಣ್ಣನನ್ನು ಬಹುವಿನಯದಿಂದ ತಾನೂ ಆ ಪರೀಕ್ಷೆಮಾಡಬಹುದಲ್ಲ ಎಂದು ಬಿನ್ನೈಸಿದ. ಅಣ್ಣ ವಿನೋದವೆಂದು ಭಾವಿಸಿ ಒಪ್ಪಿ ಶವಪೆಟ್ಟಿಗೆಯಲ್ಲಿ ಹೋಗಿ ಮಲಗಿದ. ತಕ್ಷಣ ಟೈಫಾನ್‌ನಿಂದ ಆಜ್ಞಪ್ತರಾದ ಸೇವಕರು ಅದರ ಮುಚ್ಚಳವನ್ನು ಮುಚ್ಚಿ ಮೊಳೆಗಳನ್ನು ಜಡಿದರು. ಜನರೆಲ್ಲ ಹಾಹಾಕಾರಗೊಂಡರು ಈ ಕಾರ್ಯವನ್ನು ವಿರೋಧಿಸಿ ರಾಜನನ್ನು ಕಾಪಾಡುವಷ್ಟು ಧೈರ್ಯವನ್ನು ತೋರಲಿಲ್ಲ.

ಆ ಪೆಟ್ಟಿಗೆಯನ್ನು ಗುಪ್ತವಾಗಿ ನದಿಯೊಂದಕ್ಕೆ ಎಸೆದರೂ ಈಸಿಸ್ ಅದನ್ನು ತಿಳಿದು ಹೇಗೋ ಅದನ್ನು ತನ್ನ ವಶಕ್ಕೆ ತೆಗೆದುಕೊಂಡು ಅದಕ್ಕೆ ವಿಧಿಯುಕ್ತವಾದ ಸಂಸ್ಕಾರವನ್ನು ನೀಡುವ ಉದ್ದೇಶದಿಂದ ತಲೆತಪ್ಪಿಸಿಕೊಂಡಳು. ಟೈಫಾನ್ (ಇವನಿಗೆ ಸೆಟ್ ಎಂಬ ಹೆಸರೂ ಇದೆ) ಅವಳ ಮೇಲೆ ಸಿಟ್ಟಾದ. ಹೇಗಾದರೂ

ಅವಳ ಸಖ್ಯವನ್ನು ಪಡೆಯಬೇಕೆಂದು ಅವಳನ್ನರಸುತ್ತ ಪರಿವಾರದೊಂದಿಗೆ ಹೊರಟ. ತನ್ನ ಪತಿಯ ಶವವಿದ್ದ ಪೆಟ್ಟಿಗೆಯೊಡನೆ ನೈಲ್‌ನದಿಯ ತೀರವೊಂದರಲ್ಲಿ ನೆಲೆಯಾಶ್ರಯಿಸಿ ಭಿಕಾರಿಯಂತೆ ಅವಳು ಸ್ವಲ್ಪಕಾಲ ಕಳೆದಿದ್ದಳು. ಅದೊಂದು ತಾಳೆಯವನ, ಅಲ್ಲಿಯೇ ಹಿಂದಿನ ರಾಣಿಯ ಆಶ್ರಯ. ಒಂದು ಬೆಳದಿಂಗಳ ರಾತ್ರಿ ಆ ರಾಜ ಹಾಗೂ ಅವನ ಪರಿಹಾರದವರು ಇವಳಿದ್ದೆಡೆಗೆ ಬಂದರು. ಇವಳನ್ನ ಪತ್ತೆ ಹಚ್ಚಲಾಗದಿದ್ದರೂ ಶವಪೆಟ್ಟಿಗೆಯನ್ನು ಗುರುತಿಸಿ, ಅದನ್ನು ಒಡೆದು, ಒಳಗಿದ್ದ ಶವವನ್ನು ಛಿದ್ರಗೊಳಿಸಿ ದಿಕ್ಕುಪಾಲಾಗಿ ಎಸೆದ.

ಆ ಹೊತ್ತಿಗೆ ಗರ್ಭಿಣಿಯಾಗಿದ್ದ ಈಸಿಸ್ ಮುಂದೆ ಕಾಡಿನಲ್ಲಿ ಮಗನನ್ನು ಹೆತ್ತಳು, ಅಲ್ಲಿಯೇ ಅವನನ್ನು ಸಾಕಿ ಸಲಹಿ ದೊಡ್ಡವನನ್ನಾಗಿ ಮಾಡಿದಳು. ತಾಯ ದುಃಖವಿಮೋಚನೆಯ ಕರ್ತವ್ಯ ಮಗನದಾಯಿತು. ಮುಂದೆ ತನ್ನ ಪರಾಕ್ರಮದಿಂದ ಸೆಟ್‌ನನ್ನು ರಣರಂಗದಲ್ಲಿ ಸೋಲಿಸಿ ತಾನು ರಾಜನಾದ (ಇವನೇ ಹೊರನ್ ಈಜಿಪ್ಟ್‌ನ ಕಾಮದೇವ). ತಾಯಿ ಪರಿವ್ರಾಜಕ ವ್ರತವನ್ನು ಧರಿಸಿ ಜೀವನ ಸಾಗಿಸಿದಳು.

ಇನೆಜಿಳ ಕಿರೀಟಧಾರಣೆಯ ರುದ್ರಸಮಾರಂಭವು ಮತ್ತಷ್ಟು ರುದ್ರಮಯವಾದ ಇತಿಹಾಸ. ಇನೆಜ್ ಡಿಕಾಸ್ಟ್ರೋ ಗ್ಯಾಲಿಸಿಯ ಪ್ರಾಂತದ ಆಗರ್ಭ ಶ್ರೀಮಂತನ ಮಗಳು. ಇನೆಜ್‌ಳ ಚಿಕ್ಕಪ್ಪ ಸ್ಪೆಯಿನ್‌ನ ಪ್ರತಿಷ್ಠಿತ ಅಧಿಕಾರಿ. ಅವನ ಸಹಾಯ ಡ್ಯೂಕ್‌ನ ಮಗಳಾದ ಕ್ರಾನ್‌ಸ್ಟಾನ್ಸಿಯಳ ಜೊತೆ ಬೆಳೆಯಲು ಡ್ಯೂಕ್‌ನ ಅರಮನೆಗೆ ಬರುತ್ತಾಳೆ. ಆ ಇಬ್ಬರು ಬಾಲಕಿಯರು ಆಗಾಧ ಸ್ನೇಹದಿಂದ ಬೆಳೆಯುತ್ತಾರೆ. ಮುಂದೆ ಅವರಿಬ್ಬರು ಸುಂದರ ತರುಣಿಯರಾಗಿ ಬೆಳೆದು ವಿವಾಹ ವಯಸ್ಕರಾಗುತ್ತಾರೆ.

ಹಲವಾರು ರಾಜಕೀಯ ಕಾರಣಗಳಿಂದ ಪೋರ್ಚುಗಲ್‌ನ ದೊರೆಗುವರ ಡಾಂ ಪೆಡ್ರೋನೊಂದಿಗೆ ಕ್ರಾನ್‌ಸ್ಟಾನ್ಸಿಯಗಳ ಮದುವೆ ನಡೆಯುತ್ತದೆ. ಪರಮ ಸ್ನೇಹಿತೆಯಾದ ಇನೆಜಳನ್ನೂ ಕ್ಯಾನ್‌ಸ್ಟಾನ್ಸಿಯ ತನ್ನ ಅತ್ತೆಯ ಮನೆಗೆ ಕರೆದೊಯ್ಯುತ್ತಾಳೆ. ಹೊಸದಾಗಿ ಮದುವೆಯಾದ ಈ ದೊರೆಗುವರಿಗೆ ಏನೋ ಹೇಳಲಾರದ ಅಂಜಿಕೆ-ಗಾಬರಿಗಳಿಂದಾಗಿ ತನ್ನ ಗಂಡನೊಡನೆ ಪ್ರೇಮಸಲ್ಲಾಪಗಳಲ್ಲಿ ಭಾಗಿಯಾಗಲು ಸಾಧ್ಯವಾಗಲಿಲ್ಲ. ಡಾಂ ಪೆಡ್ರೋ ತುಂಬ ಸಹಾನುಭೂತಿಪರವಾಗಿ ಹೆಂಡತಿಯ ಒಲವಿಗಾಗಿ ಕಾಯುತ್ತಿದ್ದ. ವಿನಾಕಾರಣ ಗಂಡನೊಡನೆ ವಿಷಯ ಬಾಂಧವ್ಯವನ್ನು ಪಡೆದ ಗೆಳತಿಯ ಬಗ್ಗೆ ಇನೆಜಳಿಗೆ ಆಶ್ಚರ್ಯವಾಗುತ್ತಿತ್ತು. ಪೆಡ್ರೋ ನೋಡಲು ಕುರೂಪಿಯಲ್ಲ, ಅವನ ನಡವಳಿಕೆ ಹಳಿಯುವಂತಹದಲ್ಲ, ಹೀಗಿದ್ದರೂ ಕ್ಯಾನ್‌ಸ್ಟಾನ್ಸಿಯಗಳು ನಡೆದುಕೊಳ್ಳುವ ರೀತಿ ಪರಿಸ್ಥಿತಿಯನ್ನು ಸುಖಮಯವಾಗಿಸುವಂಥದಾಗಲಿಲ್ಲ.

ಇನೆಜಳಿಗೆ ಪೆಡ್ರೋವಿನ ಸ್ಥಿತಿಗತಿಗಳ ಬಗ್ಗೆ ಕನಿಕರವುಂಟಾಯಿತು. ಪೆಡ್ರೋವಿಗೂ ತನ್ನ ಹೆಂಡತಿಯ ಈ ಗೆಳತಿಯ ಕಂಗಳಲ್ಲಿ ಭರವಸೆಯ ಬೆಳದಿಂಗಳು ಕಾಣಿಸಿತು. ಸಾಕಷ್ಟು ದೀರ್ಘಕಾಲದ ಈ ಮೂಕವಾದ ಪರಸ್ಪರ ಸಹಾನುಭೂತಿ-ಪ್ರೇಮಗಳು ಅವರ ಪ್ರಣಯದಲ್ಲಿ ಪರ್ಯವಸಾನವಾಯಿತು. ಇದರಿಂದ ಕಣ್ತೆರೆದ ಕ್ಯಾನ್‌ಸ್ಟಾನ್ಸಿಯ ತನ್ನ ಹಿಂದಿನ ಪ್ರಾಣ ಸ್ನೇಹಿತೆಯ ಮೇಲೆ ವಿಷಕಾರಲು ತೊಡಗಿದಳು. ಪರಿಸ್ಥಿತಿಯನ್ನರಿತ

ಪೆಡ್ರೋ ಬೇರೆಯ ಸ್ಥಳವೊಂದರಲ್ಲಿ ಇನೆಜನಿಗೆ ವಸತಿ ಕಲ್ಪಿಸಿದನು. ತಾನು ಅಲ್ಲಿಗೆ ಹೋಗಿ ಅವಳ ಸಾಮೀಪ್ಯದ ಸವಿಯನ್ನು ಸವಿಯುತ್ತಿದ್ದನು.

ಈ ಪರಿಸ್ಥಿತಿಗೆ ತಾನೇ ಕಾರಣಳಾದರೂ ಕ್ಯಾನ್‌ಸ್ಟಾನ್ಸಿಯಳಿಗೆ ತನ್ನ ಗೆಳತಿಯ ಬಗ್ಗೆ ರೊಚ್ಚು ದಿನದಿನಕ್ಕೆ ಹೆಚ್ಚಾಯಿತು. ಅರಸನ ಆಸ್ಥಾನದ ಕೆಲವು ಕುಟಿಲ ರಾಜಕಾರಣಿಗಳೊಂದಿಗೆ ಇನೆಜಳ ಬಗ್ಗೆ ಸೇಡು ತೀರಿಸಿಕೊಳ್ಳಲು ಒಂದು ತಂತ್ರವನ್ನು ಆಲೋಚಿಸುತ್ತಿದ್ದಳು. ರಹಸ್ಯವಾಗಿ ಅವಳನ್ನು ಕೊಲ್ಲುವ ಬಗೆಯನ್ನು ಕುರಿತು ವಿಚಾರ ಮಾಡುತ್ತಿದ್ದಳು.

ಒಮ್ಮೆ ಮುಖ್ಯ ಕಾರ್ಯವೊಂದಕ್ಕಾಗಿ ಪೆಡ್ರೋ ಬೇರೆ ಪ್ರಾಂತ್ಯಕ್ಕಾಗಿ ಹೋಗುವಂತೆ ಇವರೇ ಏರ್ಪಾಡು ಮಾಡಿದರು. ದೊರೆ ಅತ್ತ ಹೋದ ಮೇಲೆ ಇತ್ತ ಅವಳ ಎರಡು ಹಸುಗೂಸುಗಳನ್ನು ಬಿಟ್ಟು ಇನೆಜಳ ಕೊಲೆ ಹಾಗೂ ಹೀಗೂ ನಡೆದೇ ಹೋಯಿತು. ಅರಮನೆಯ ಸಮೀಪದಲ್ಲಿ ಅವಳ ಶವವನ್ನು ಹೂತಿಬಿಟ್ಟರು. ಇನೆಜ್ ಭಯದಿಂದ ಸತ್ತಳೆಂಬ ಸುದ್ದಿಯನ್ನು ಹರಡಿದರು.

ಪೆಡ್ರೋ ಬಂದಾಗ ಅವನಿಗಿದುರಾದ ಈ ವಾರ್ತೆ ಅವನನ್ನು ರೋಷಗ್ರಸ್ತನಾಗುವಂತೆ ಮಾಡಿತು. ಈ ಕಾರಸ್ಥಾನದಲ್ಲಿ ಪಾಲುದಾರನಾಗಿದ್ದ ತನ್ನ ತಂದೆಯ ಮೇಲೆಯೇ ಯುದ್ಧ ಸಾರಿದನು. ಅದರೆ ತಂದೆ ಉಪಾಯಾಂತರದಿಂದ ಅವನು ಯುದ್ಧವಿಮುಖನಾಗುವಂತೆ ಮಾಡಿದನು. ಪೆಡ್ರೋ ತಾನೇ ಎಲ್ಲ ಆಡಳಿತ ಸೂತ್ರವನ್ನು ಕೈಗೆ ತೆಗೆದುಕೊಂಡನು. ಕೆಲ ಕಾಲಾನಂತರ ಅರಸನ ಸಾವುಂಟಾದಾಗ ಪೆಡ್ರೋ ರಾಜನಾಗುವ ಸನ್ನಿವೇಶವುಂಟಾಯಿತು.

ಪೆಡ್ರೋ ಇನೆಜಳಿಗೆ ಸೂಕ್ತಸ್ಮಾರಕವನ್ನು ನಿರ್ಮಿಸಲು ಆಲೋಚಿಸಿದನು. ಇನೆಜಳೇ ತನ್ನ ಧರ್ಮಪತ್ನಿಯೆಂದೂ ಅವಳ ಮಕ್ಕಳು ರಾಜಕುಮಾರರೆಂದೂ ಪಾದ್ರಿಗಳ ಮುಖಾಂತರ ವಿದ್ಯುಕ್ತವಾಗಿ ಸಾರಿದನು. ಅನಂತರ ತನ್ನ ಕಿರೀಟಧಾರೆಯ ಸಮಾರಂಭದಲ್ಲಿ ಧರ್ಮಪತ್ನಿಯಾದ ಇನೆಜಳು ಭಾಗಿಯಾಗುತ್ತಾಳೆಂದು ಪ್ರಕಟಿಸಿ, ಹೂತಿದ್ದ ಅವಳ ಶವಕ್ಕೆ ಮಹಾರಾಣಿಯ ಕಿರೀಟಧಾರಣೆಯನ್ನು ನೆರವೇರಿಸಿದಾಗ ಜನರು ಭಯ ಆಶ್ಚರ್ಯಗಳಿಂದ ನಡುಗಿಹೋದರು.

ಈ ಎರಡೂ ಕತೆಗಳು ರುದ್ರಪ್ರಣಯ ಕಥೆಗಳು ಬೇರೆ ಬೇರೆ ಪ್ರದೇಶಗಳಲ್ಲಿ ಜನಜನಿತವಾದವು. ಎರಡೂ ರಾಜ ಪ್ರಣಯಿಗಳ ಕಥೆಗಳು. ಮೊದಲನೆಯದರಲ್ಲಿ ಕೊಲೆಗೀಡಾದವನು ಗಂಡನಾದರೆ, ಎರಡನೆಯದರಲ್ಲಿ ಹೆಂಡತಿ; ಮೊದಲ ಕತೆಯಲ್ಲಿ ಈ ದುರಂತಕ್ಕೆ ಕಾರಣ ಗಂಡನ ತಮ್ಮ, ಎರಡನೆಯದರಲ್ಲಿ ಹೆಂಡತಿಯ ಸ್ನೇಹಿತೆ (ಕ್ಯಾನ್‌ಸ್ಟಾನ್ಸಿಯ ಎಂದೂ ಪೆಡ್ರೋನ ಹೆಂಡತಿಯಂತೆ ನಡೆದುಕೊಳ್ಳಲಿಲ್ಲ) ಸಾವಿನ ನಂತರವೂ ತಮ್ಮ ಪ್ರಿಯವ್ಯಕ್ತಿಯನ್ನು ಆರಾಧ್ಯವಾಗಿ ಮಾಡಿಕೊಂಡರು. ಉಳಿದವರು ಇಷ್ಟಾದರೂ ಎರಡನೆಯ ಕಥೆಯಲ್ಲಿ ಶವಕ್ಕೆ ಕಿರೀಟಧಾರಣೆಯನ್ನು ಮಾಡಿಸುವ ಸಂದರ್ಭ ಎಂಥವರಲ್ಲಿಯೂ ನಡುಕ ಹುಟ್ಟಿಸುವಂಥದು ಆದರೂ ಆ ಪ್ರೀತಿಯ ಆಳ ಎಲ್ಲರ ಮನ ಸೆಳೆಯುವಂಥದು. ಅತ್ಯಂತ ನಿರ್ಮಲ ಪ್ರೀತಿ, ಎರಡೂ ಕಥೆಗಳಲ್ಲಿ, ಮೂರನೆಯ

ವ್ಯಕ್ತಿಯಿಂದ ಹಾಲಾಹಾಲಕವಾದ ಪರಿಸ್ಥಿತಿಗೆ ಎಡೆಮಾಡಿಕೊಟ್ಟರೂ ಸಾವಿನಿಂದ ಉಳಿದ ಜೀವ ಸಾಥಿಗಳು ಸತ್ತ ತಮ್ಮ ಪ್ರಿಯರ ಬಗ್ಗೆ ತೋರಿದ ಪ್ರೀತಿ ಅನನ್ಯ. ಪೆಡ್ರೋವಿನ ರೊಚ್ಚು, ಶವಕ್ಕೆ ಕಿರೀಟವಿಡುವ ಕ್ರಮ ಅವನ ಆಳವಾದ ಪ್ರೀತಿಗೆ ಜ್ವಲಂತ ದ್ಯೋತಕ.

ಅನ್ಯಮೂಲವನ್ನು ಆಧರಿಸಿದ ಈ ಎರಡೂ ಕಥೆಗಳು ತಮ್ಮಲ್ಲಿ ತಾವೇ ಆಕರ್ಷಕವಾಗಿವೆ. ಅದನ್ನು ಕನ್ನಡದಲ್ಲಿ ಶ್ರೀ ಟಿ. ಎನ್. ಮಹದೇವಯ್ಯನವರು ತುಂಬ ಆಕರ್ಷಕವಾಗಿ ನಿರೂಪಿಸುತ್ತಾರೆ. ಕಥೆಗಳು ಕ್ರಿಯಾಪೂರ್ಣವಾಗಿದ್ದು ಬೇಸರವನ್ನು ಎಲ್ಲಿಯೂ ಉಂಟುಮಾಡುವುದಿಲ್ಲ. ಆದರೆ ಕಥೆಯ ಕೆಲವು ಘಟನೆಗಳ ಹಿನ್ನೆಲೆಯಲ್ಲಿ ಬರುವ ಸಾಮಾಜಿಕ-ಧಾರ್ಮಿಕ ವಿವರಗಳು ಕಥೆಯ ಏಕಮುಖವಾದ ಓಟಕ್ಕೆ ಸ್ವಲ್ಪ ಟಾಂಗ್ ಕೊಡುತ್ತವೆಯೆನಿಸುತ್ತದೆ. ಉದಾಹರಣೆಗೆ ಮೊದಲನೆಯ ಕಥೆಯಲ್ಲಿ ಬರುವ ಈಜಿಪ್ಶಿಯನ್ನರ ಸಾವಿನ ಬಗ್ಗೆ ಪಡೆದಿದ್ದ ಮನೋಭಾವ, ಎರಡನೆಯ ಕಥೆಯಲ್ಲಿ ಬರುವ ಕೆಲವು ಚಾರಿತ್ರಿಕ ನಿರೂಪಣೆಗಳು. ಇವುಗಳ ತಿಳುವಳಿಕೆ ಕಥೆಗಳನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಲು ಅವಶ್ಯವಾದರೂ ಕಥೆಗಳ ಒಡಲಲ್ಲಿ ಬರದೆ, ಟಿಪ್ಪಣಿಗಳಾಗಿ ಬಂದಿದ್ದರೆ ಚೆನ್ನಾಗಿತ್ತೆನಿಸುತ್ತದೆ. ಕನಸಿನ ವಾತವರಣವನ್ನು ನಿರ್ಮಿಸುವ ಶಕ್ತಿಯಿರುವ ಕಥೆಗಳ ಸನ್ನಿವೇಶಗಳಿಂದ ದೊಪ್ಪನೆ ನೆಲಕ್ಕೆ ಬಿದ್ದಂತಾಗುತ್ತದೆ ಇದರಿಂದ.

■■

೧೦

# ಉಪಸಂಹಾರ

ದಿವಂಗತ ಟಿ.ಎನ್. ಮಹದೇವಯ್ಯನವರು ನವೋದಯ ಕಾಲದ ಪ್ರತಿಭಾವಂತ ಕವಿಗಳು. ಅವರು ವಾಸ್ತವಿಕ (Realistic) ಕವಿಗಳೂ ಹೌದು, ರೋಮ್ಯಾಂಟಿಕ್ ಕವಿಗಳೂ ಹೌದು. ನವೋದಯಕಾಲದ ಕವಿಗಳ ಬರವಣಿಗೆಯನ್ನು ಗಮನಿಸಿದಾಗ ಅವರು ಇವೆರಡರ ಸುಮಧುರ ಪಾಕವಾಗಿರುವಂತೆ ತೋರುವರು. ಜೆ. ಮಿಡ್‌ಲ್ಟನ್ ಮರ್ರಿ ಅಭಿಪ್ರಾಯಪಡುವಂತೆ "ಶ್ರೇಷ್ಠ ವಾಸ್ತವಿಕ ಲೇಖಕನ ಸ್ವಭಾವ, ಅವನ ಚಟುವಟಿಕೆ ಮತ್ತು ಶ್ರೇಷ್ಠ ರೊಮ್ಯಾಂಟಿಕ್ ಲೇಖಕನ ಸ್ವಭಾವ, ಚಟುವಟಿಕೆ ಒಂದೇ. ವ್ಯತ್ಯಾಸವೇನೆಂದರೆ ವಾಸ್ತವಿಕ ಲೇಖಕ ದಿನನಿತ್ಯದ ಜೀವನದಿಂದ, ರೊಮ್ಯಾಂಟಿಕ್ ಲೇಖಕ ಕಾಲ್ಪನಿಕವಾಗಿ ಭೂತಕಾಲದಲ್ಲಿ ಹರಡಿದ್ದ ಜೀವನದಿಂದ (ಚರಿತ್ರೆಯಿಂದ) ಅಥವಾ ಹಾಗೆಯೇ ಶುದ್ಧ ಭಾವನೆಗಳ ಪ್ರಪಂಚದಲ್ಲಿ ಮುಂದುವರಿಸಲ್ಪಟ್ಟ ಜೀವನದಿಂದ ತನ್ನ ಕಥಾವಸ್ತುವನ್ನು ಆರಿಸುತ್ತಾನೆ..... ಒಬ್ಬನು ವಾಸ್ತವಿಕವಾದಿಯಾಗಿರುವುದು ಇನ್ನೊಬ್ಬನು ರೊಮ್ಯಾಂಟಿಕನಾಗಿರುವುದು ಕೇವಲ ಸನ್ನಿವೇಶದ ಆಕಸ್ಮಿಕವಷ್ಟೇ; ಈ ಕಾರಣದಿಂದಾಗಿ ಅತ್ಯುತ್ತಮ ಲೇಖಕರ ಪೈಕಿ ಅನೇಕರು-ಎಲ್ಲ ಅತ್ಯುತ್ತಮ ಲೇಖಕರು ಎಂದು ಇನ್ನೇನು ಹೇಳುವುದರಲ್ಲಿದ್ದೆ- ಎರಡೂ ಬಗೆಯ ಲೇಖಕರಾಗಿರುತ್ತಾರೆ. (ಶೈಲಿ : ಅನುವಾದ : ಎಡ್ವರ್ಡ್ ನೊರೋನ, ೧೯೯೯, ಭಾಗ್ಯವಾನ್ ಪ್ರಕಾಶನ ಮೈಸೂರು -೨.) ಟಿ.ಎನ್. ಮಹದೇವಯ್ಯನವರು ನವೋದಯಕಾಲದ ಉತ್ಕ್ರಾಂತಿಯ ಘಟ್ಟದಲ್ಲಿ ಕಾವ್ಯರಚನೆಗೆ ತೊಡಗಿದರು. ವಿಶೇಷವೆಂದರೆ, ಅವರು ಸ್ವಾತಂತ್ರ್ಯಪೂರ್ವದ ಕಾಲಘಟ್ಟದ ಪ್ರಭಾವೀವಲಯದಲ್ಲಿ ತಮ್ಮ ಸೃಜನಾತ್ಮಕ ಪ್ರತಿಭೆಯನ್ನು ಪ್ರಕಟಪಡಿಸಿದರು ಅವರು ಓದಿದ್ದು ಬಿ.ಎಸ್ಸಿ; ವೃತ್ತಿ ನಿರತರಾದದ್ದು ಕಂದಾಯ ಇಲಾಖೆಯಲ್ಲಿ; ಅಮಲ್ದಾರರಾಗಿ ಸೇವೆ ಸಲ್ಲಿಸುತ್ತಲಿರುವಾಗಲೇ ತೀವ್ರ ಹೃದಯಾಘಾತದಿಂದ ನಿಧನರಾದರು (೬.೪.೧೯೬೧). ಅವರ ತಂದೆಯವರು ವರ್ತಕರಾಗಿದ್ದರು. ಸಾಹಿತ್ಯ ಪರಿಸರ ಆ ವರ್ತಕ ಮನೆತನದಲ್ಲಿರಲಿಲ್ಲ. ದೈವದತ್ತ ಪ್ರತಿಭೆ ಹಾಗೂ ಅಂತರಂಗದ ಪ್ರಚೋದನೆ ಅವರನ್ನು ಸಾಹಿತ್ಯಕ್ಷೇತ್ರದಲ್ಲಿ ದುಡಿಯುವಂತೆ ಮಾಡಿತು.

ತಮ್ಮ ಸರಕಾರಿ ಸೇವೆಯ ದೈನಂದಿನ ಚಟುವಟಿಕೆಗಳಲ್ಲಿ, ಗುರುತರ ಜವಾಬ್ದಾರಿಯಲ್ಲಿ, ವರ್ಗಾವಣೆಯ ಭರಾಟೆಯಲ್ಲಿ ಅವರ ಸಾಹಿತ್ಯಾಸಕ್ತಿ ಕಮರಿಹೋಗಬೇಕಾಗಿದ್ದಿತು. ಆದರೆ, ಸಾಹಿತ್ಯರಚನೆಯ ಜೀವಂತ ಹಂಬಲ ಅವರ ಅಂತರಂಗದಲ್ಲಿ ಸ್ರೋತರೂಪದಲ್ಲಿ ಹರಿಯುತ್ತಿದ್ದುದರಿಂದ, ಅವರು ತಮ್ಮ ಅಂತರಂಗದ ದನಿಗೆ ನಿಷ್ಠರಾಗಿ ನಡೆದುಕೊಂಡುದರಿಂದ ಅವರಲ್ಲಿ ಜೀವಂತವಾಗಿದ್ದ ಸಾಹಿತ್ಯಾಸಕ್ತಿ ಬತ್ತಿಹೋಗಲಿಲ್ಲ. ಅದೊಂದು ಉತ್ಸಾಹದ ಚಿಲುಮೆಯಾಗಿದ್ದುದರಿಂದ ಅವರ ಬದುಕು ಹಾಗೂ ಕ್ರಿಯಾತ್ಮಕವಾಗಿ ಸಾಹಿತ್ಯಕ ಚಟುವಟಿಕೆಗಳಲ್ಲಿ ಸಾಯುವವರೆವಿಗೂ ತೊಡಗಿಸಿಕೊಳ್ಳುವುದು ಸಾಧ್ಯವಾಯಿತು. ಮಹದೇವಯ್ಯನವರು ಬದುಕಿರುವವರೆಗೂ ಕಾಯಕನಿಷ್ಠೆಯನ್ನು ಮೆರೆದಿದ್ದಾರೆ. ಕಚೇರಿಯ ಕೆಲಸದ ವೇಳೆಯನ್ನು ಕಟ್ಟುನಿಟ್ಟಿನಿಂದಲೂ ಪ್ರಾಮಾಣಿಕತೆಯಿಂದಲೂ ನಡೆಸಿದ್ದೇ ಅಲ್ಲದೆ ಉಳಿದ ಸಮಯವನ್ನು ಸಂಪೂರ್ಣವಾಗಿ ಸಾಹಿತ್ಯಸೃಷ್ಟಿ ಕಾರ್ಯಕ್ಕೇ ಮೀಸಲಾಗಿಟ್ಟವರು. ಕನ್ನಡ ನಾಡು ನುಡಿಗಳ ಮೇಲಿನ ಅಭಿಮಾನವನ್ನು ಬಾಲ್ಯದಿಂದಲೇ ಬೆಳೆಸಿಕೊಂಡು ಬಂದಿದ್ದ ಮಹದೇವಯ್ಯನವರು ಕನ್ನಡಪರ ಸಂಘಟನೆಗಳನ್ನು ತಾವಿದ್ದೆಡೆ ಹುಟ್ಟುಹಾಕಿದ್ದಾರೆ. ಹೋದಕಡೆ ಕಟ್ಟಿ ಹೋಗಿದ್ದಾರೆ.

ವಿಚಿತ್ರವೆಂದರೆ, ಅವರು ಪ್ರಭಾವಿತರಾದದ್ದು ಸ್ವಾತಂತ್ರ್ಯಪೂರ್ವ ಹಾಗೂ ಸ್ವಾತಂತ್ರ್ಯೋತ್ತರ ಕಾಲದ ನವೋದಯ ಸಾಹಿತ್ಯದ ಧ್ಯೇಯ ಧೋರಣೆಗಳಿಂದ. ಅವರು ಒಂದು ಪಂಥಕ್ಕೆ ನಿಷ್ಠರಾದರೇ ಹೊರತು ಒಂದು ಸಾಹಿತ್ಯಗುಂಪಿನ ಚಟುವಟಿಕೆಗಳಲ್ಲಿ ತಮ್ಮನ್ನು ಗುರುತಿಸಿಕೊಳ್ಳ ಹೊರಡಲಿಲ್ಲ. ಅವರು ಪ್ರಸಿದ್ಧಿಯ ಹಂತದಲ್ಲಿರುವಾಗ ಆಧುನಿಕ ಸಾಹಿತ್ಯದಲ್ಲಿ ಹೊಸ ಪಂಥಗಳು-ಪ್ರಗತಿಶೀಲ ಹಾಗೂ ನವ್ಯ-ಹುಟ್ಟಿಕೊಂಡಿದ್ದವು. ಅವುಗಳ ಜೊತೆಗೂ ಅವರು ತಮ್ಮನ್ನು ಗುರುತಿಸಿಕೊಳ್ಳಲಿಲ್ಲ; ಪ್ರಭಾವಕ್ಕೂ ಒಳಗಾಗಲಿಲ್ಲ. ಅಕಾಡೆಮಿಕ್ ವಲಯದಿಂದ ದೂರವಿದ್ದ ಅವರು ಕೊನೆಯವರೆವಿಗೂ ಒಂದು ಪ್ರತ್ಯೇಕ ದ್ವೀಪವಾಗಿಯೇ ಉಳಿದರು. ಅವರು ತಾವು ಬರೆದದ್ದನ್ನು ಪತ್ರಿಕೆಗಳಿಗೆ ಪ್ರಕಟನೆಗಾಗಿ ಕಳುಹಿಸುತ್ತಿದ್ದರು; ಬಾನುಲಿಗಾಗಿ ನಾಟಕಗಳನ್ನು ರಚಿಸುತ್ತಿದ್ದರು; ರಾಷ್ಟ್ರ, ಪ್ರಾಂತ್ಯಾಭಿಮಾನಿಯಾಗಿ, ಸಾಹಿತ್ಯ ಪರಿಚಾರಕರಾಗಿ ನಾಡು-ನುಡಿಯ ಬಗೆಗಿನ ಉತ್ಕಟ ಅಭಿಮಾನವನ್ನು ತಮ್ಮ ಭಾಷಣಗಳ ಮೂಲಕ ಪ್ರಕಟಪಡಿಸುತ್ತಿದ್ದರು. ಆದರೆ, ಎಂದೂ ಪ್ರಚಾರ ಬಯಸಿ ಮುಂಚೂಣೆಗೆ ಬಂದು ನಿಲ್ಲಲಿಲ್ಲ. ಹೀಗಾಗಿ ಅವರು ಸಾಹಿತ್ಯವಲಯದಲ್ಲಿ ಓರ್ವ ಒಂಟಿ ಸಲಗ. ಅದು ನಡೆದುದೇ ದಾರಿ.

ದುರ್ದೈವವೆಂದರೆ, ನವೋದಯದ ಪ್ರಸಿದ್ಧಕವಿಗಳು ತಮ್ಮ ಕವಿತಾಸಂಕಲನಗಳನ್ನು ಪ್ರಕಟಿಸುವ ಮೂಲಕ ಕನ್ನಡ ಕಾವ್ಯಲೋಕದ ತಾರೆ(star)ಗಳಾದರು. ಆದರೆ, ಟಿ.ಎನ್. ಮಹದೇವಯ್ಯನವರು ಸ್ವೋಪಜ್ಞತೆಯನ್ನು ಪ್ರಕಟಪಡಿಸುವ ಕವಿತೆಗಳನ್ನು ಬರೆದಿದ್ದರೂ ಪ್ರಚಾರದ ಹಂಬಲಕ್ಕೆ ಬಲಿಬೀಳದೆ ತೆರೆಯ ಮರೆಯಲ್ಲೇ ಉಳಿದರು. ಅವರು ಕಾವ್ಯಪ್ರಪಂಚದ ಮುಖ್ಯಧಾರೆಗೆ (main stream) ತಮ್ಮನ್ನು ಹೊಂದಿಸಿಕೊಳ್ಳುವ ಪ್ರಯತ್ನ ನಡೆಸಲೇ ಇಲ್ಲ. ಬಹುಶಃ ಶೈಕ್ಷಣಿಕ ಪರಿಸರದಿಂದ ಹೊರಗುಳಿದ ಅವರಿಗೆ ತಮ್ಮನ್ನು-ಅದಕ್ಕೆ ಭಿನ್ನವಾದ ಪರಿಸರದಲ್ಲಿ ಕೆಲಸಮಾಡುತ್ತಿರುವ ಕಾರಣ-ಮುಖ್ಯಧಾರೆಯೊಂದಿಗೆ ಗುರುತಿಸಿಕೊಳ್ಳಲು

ಅವಕಾಶವಾಗಲಿಲ್ಲವೋ ಏನೋ! ಅವರು ತಮ್ಮ ಮೊದಲ ಕವನ ಸಂಕಲನ 'ವೀಣಾ'ವನ್ನು ರವೀಂದ್ರನಾಥ ಠಾಕೂರರಿಗೆ ಅರ್ಪಿಸಲು ಬಯಸಿ ಅವರ ಅನುಮತಿಯನ್ನೂ ಪಡೆದಿದ್ದರು. ರವೀಂದ್ರರ ಪ್ರಭಾವ ಟಿ.ಎನ್. ಮಹದೇವಯ್ಯನವರ ಮೇಲೆ ವಿಶೇಷವಾಗಿ ಆಗಿದೆ. ಅದನ್ನು ತಮ್ಮ ಅನೇಕ ಕವಿತೆಗಳ ರಚನಾಸಂದರ್ಭವನ್ನು ಹೇಳುವಾಗ ಆ ಋಣವನ್ನು ಮುಚ್ಚುಮರೆಯಿಲ್ಲದೆ ತಿಳಿಸಿರುವರು. ರವೀಂದ್ರರಷ್ಟೇ ಇಂಗ್ಲಿಷ್ ಕವಿಗಳ, ಗ್ರೀಕ್ ನಾಟಕಕಾರರ ಪ್ರಭಾವವೂ ಅವರ ಮೇಲೆ ಆಗಿದೆ. ಅದನ್ನೂ ಟಿ.ಎನ್. ಮಹದೇವಯ್ಯನವರು ನೆನೆದಿರುವರು. ನವೋದಯ ಕಾವ್ಯಸಂದರ್ಭದಲ್ಲಿ ಭಾವಗೀತೆಗಳ ಮಹಾಪೂರವೇ ಹರಿದುಬಂದಿದೆ. ಟಿ.ಎನ್. ಮಹದೇವಯ್ಯನವರೂ ಕಾಲದ ಪ್ರಭಾವಕ್ಕೆ ಒಳಗಾಗಿ ಅನೇಕ ಭಾವಗೀತೆಗಳನ್ನು, ಕಥನ ಕವನಗಳನ್ನು ಬರೆದಿರುವರು. ಎಸ್.ವಿ. ಪರಮೇಶ್ವರ ಭಟ್ಟರು 'ಭಾವಗೀತೆ'ಯ ಲಕ್ಷಣವನ್ನು ಹೀಗೆ ಗುರುತಿಸಿರುವರು "(ಭಾವಗೀತೆ)ಯಲ್ಲಿ ಮುಖ್ಯವಾದದ್ದು ಭಾವ ಮಾತ್ರ. ಕವಿಯ ಒಂದು ಹೊತ್ತಿನ ಒಂದು ನಿಟ್ಟಿನ ಒಂದು ಮನೋಧರ್ಮವನ್ನು ಮಾತ್ರ ಭಾವಗೀತೆ ಕುರಿಯುತ್ತದೆ. ಒಂದೇ ಒಂದಾದ ಭಾವ ತನಗೆ ತಾನೆ, ಅಯತ್ನಪೂರ್ವಕವಾಗಿ ಅಕೃತಕವಾಗಿ ಕವಿಯ ಮನಸ್ಸಿನ ತುಯ್ತದ ಫಲವಾಗಿ ಚಿಮ್ಮಿಬರುತ್ತದೆ. ಈ ಭಾವಗ್ರಹಣಕ್ಕೆ ಬೇಕಾಗುವಷ್ಟೇ ಕಥೆ, ಪಾತ್ರ, ವರ್ಣನೆ ಇವು ತೀರ ತೆಳ್ಳಗೆ ತೀರ ಗೌಣವಾಗಿ ಬಂದಿರುತ್ತವೆ. ಭಾವದ ಹರಿಯುವಿಕೆಗೆ ಪ್ರಣಾಳಿಕೆಯಾಗಿ, ಹಾರುವಿಕೆಗೆ ದಾರವಾಗಿ ಬಂದಿರುತ್ತವೆ. ಭಾವಗೀತೆ ವ್ಯಕ್ತಿನಿಷ್ಠವಾದದ್ದು. ಅಂತರ್ಮುಖಿಯಾದ ಕವಿಯ ಒಳಗಣ ಬಗೆಯಿಂದ, ಸ್ವಕೀಯವಾಗಿ ಕವಿ ಕಂಡುಂಡ ಅನುಭವಗಳಿಂದ ಪ್ರಚೋದಿತವಾದದ್ದು. ಹೀಗೆ ಭಾವಗೀತೆ ಸ್ವನಿಷ್ಠವೂ ವೈಯಕ್ತಿಕವೂ ಆಗಿರುತ್ತದೆ. ಕವಿಯಾದವನು ತನ್ನ ಅನುಭವ, ತನ್ನ ಚಿತ್ತವೃತ್ತಿ, ತನ್ನ ಆಲೋಚನೆಗಳಲ್ಲಿಯೇ ಕಾವ್ಯದ ಸೆಲೆ ಸ್ಫೂರ್ತಿಗಳನ್ನು ಕಂಡುಕೊಳ್ಳುತ್ತಾನೆ." (ಭಾವಗೀತೆ : ಎಸ್.ವಿ. ಪರಮೇಶ್ವರ ಭಟ್ಟ, ೧೯೬೧, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು)

೧೯೩೦ರ ದಶಕದಲ್ಲೇ ಟಿ.ಎನ್. ಮಹದೇವಯ್ಯನವರ ಬಹಳಷ್ಟು ಕವಿತೆಗಳು ಬಂದಿದ್ದರೂ ಅವರ 'ಸಮಗ್ರ ಕಾವ್ಯ' ಪ್ರಕಟವಾದುದು ೧೯೯೦ರಲ್ಲಿ. ಅವರ ಸು. ೩೨೪ ಕವಿತೆಗಳು ಇಲ್ಲಿ ಸೇರ್ಪಡೆಯಾಗಿವೆ. ಟಿ.ಎನ್. ಮಹದೇವಯ್ಯನವರದು ಸಾಹಿತ್ಯ-ಸಂಗೀತ-ಸಂಸ್ಕೃತಿಗಳಿಂದ ಪಕ್ವಗೊಂಡ ಮನಸ್ಸು. ಸಂಗೀತ ಹಾಗೂ ವೀಣೆ ಅವರಿಗೆ ಪ್ರಿಯವಾದವು. ಅವರ ಕವಿಮನಸ್ಸು ನವೋದಯ ಕಾಲದ್ದು. 'ಪುಷ್ಪಮಾಲಿಕೆ ಹಿಡಿದು ಕಾಯುತಿದೆ ದೇವಿ। ಕನ್ನಡದ ಬನವರಸಿ ತಂದ ಹೂಗಳ ಹೆಣೆದೆ' ಎನ್ನುವ, 'ಕನ್ನಡದ ಉಸಿರಿನಲಿ ಬದುಕುವ ತನಕವು ಬದುಕಿ। ಕನ್ನಡದ ಸಂಸ್ಕೃತಿಯ ಒಡಗೂಡಿ ಒಂದಾಗಿ। ಕನ್ನಡದ ಉಸಿರಿನಲಿ ನನ್ನ ಸಾವಿರುವಂತೆ। ವರವಿತ್ತು ಹರಸು ಬಾ, ಇನಿತೊಂದು ಸಾಕು' ಎಂದು ನಾಡದೇವಿಯನ್ನು ಪ್ರಾರ್ಥಿಸುವ ಮನೋಭಾವ ಅವರದು. ಆ ಕಾಲಮಾನದ ಎಲ್ಲ ಆಶೋತ್ತರಗಳನ್ನು ತಮ್ಮ ಕವಿತೆಗಳಲ್ಲಿ ಭಾವಪೂರ್ಣವಾಗಿ ಮಿಶ್ರಗೊಳಿಸಿದ ರಚನೆಗಳವು. ಸ್ವಾತಂತ್ರ್ಯದ ಕನಸು, ದೇಶಾಭಿಮಾನ, ಭಾಷಾಭಿಮಾನ, ಸಂಸ್ಕೃತಿಯ ರಕ್ಷಣೆಯ ಬಗೆಗಿನ ಕಳಕಳಿ, ಸಾಮಾಜಿಕ ಬದಲಾವಣೆಗೆ ಮನದ ತುಡಿತ, ನಮ್ಮಲ್ಲಿನ ಬೌದ್ಧಿಕ ದಾಸ್ಯತ್ವದ ಬಗೆಗಿನ ನವಿರಾದ

ಟೀಕೆ, ಪ್ರಕೃತಿಯೊಂದಿಗಿನ ತಾದಾತ್ಮ್ಯಭಾವ-ಅವರ ಕವಿತೆಗಳ ವಸ್ತುವಿನ ಹರಹು. ಇಂದ್ರಿಯಗ್ರಾಹ್ಯವಾದ ರೂಪಲೋಕದ ಸೌಂದರ್ಯ, ಸುತ್ತಲಿನನಿಸರ್ಗ ವೈಭವದಲ್ಲಿ ಗುಡ್ಡ ಬೆಟ್ಟಗಳಲ್ಲಿ ಆಗಸದ ನಕ್ಷತ್ರ ಲೋಕದಲ್ಲಿ ಕೋಗಿಲೆ ಕಾಗೆ ಮೊದಲಾದ ಪ್ರಾಣಿ ಪಕ್ಷಿ ರೂಪದಲ್ಲಿ ವ್ಯಕ್ತವಾಗಿದೆ. ಟಿ.ಎನ್. ಮಹದೇವಯ್ಯನವರು ರಸನಿಷ್ಠಕವಿ, ಪ್ರಕೃತಿಯ ಅನನ್ಯ ಉಪಾಸಕರು. ಪ್ರಕೃತಿಯ ಸಾನ್ನಿಧ್ಯದಲ್ಲಿ ಅವರು ಮನಶ್ಶಾಂತಿಯನ್ನು ಕಂಡುಕೊಳ್ಳುವರು. ಆರಾಧನೆಯಲ್ಲಿ ಶುದ್ಧ ಸಾತ್ವಿಕ ಭಾವವಿರುವುದರಿಂದ ಮಧುರಕೂಜನದ ಕೋಗಿಲೆ ಎಷ್ಟು ಮುಖ್ಯವಾಗುತ್ತದೊ ಅಷ್ಟೇ ಮುಖ್ಯವಾಗುತ್ತದೆ ಕಾಗೆ. ಕಾಗೆಯನ್ನು ದಲಿತವರ್ಗಕ್ಕೆ ಸಮೀಕರಿಸಿರುವುದು, ಹೊಸಕಾಲದ ಬರವನ್ನು ವ್ಯಂಜಿಸುವುದಕ್ಕೆ 'ಕಾಗೆ'ಯನ್ನು ಬಳಸಿಕೊಂಡಿರುವುದು ವಿಶೇಷವೆನ್ನಿಸುತ್ತದೆ. ಸಂಗೀತದ ಸಾಹಚರ್ಯ ಭಾವಗೀತೆಗೆ ಇರಬೇಕೆಂಬುದು ಆ ಕಾಲದ ಕವಿಗಳ ಮನದಾಳದ ಬಯಕೆ. ಛಂದಸ್ಸಿನ ಬಳಕೆ, ಭಾವಗಳಿಗೆ ತಕ್ಕ ಸೌಕುಮಾರ್ಯ ಪದಬಳಕೆ, ನೆಲ-ಬಾನು, ಸೂರ್ಯ-ಚಂದ್ರ, ಪ್ರಕೃತಿ-ವಿಕೃತಿಗಳ ಬಗೆಗಿನ ತೀವ್ರವಾದ ಸೆಳೆತ ಟಿ.ಎನ್. ಮಹದೇವಯ್ಯನವರ ಮೂರು ದಶಕಗಳ ಕಾವ್ಯಕರ್ಮದ ಅವಿಭಾಜ್ಯ ಭಾಗಗಳು. ಅವರು ಶಬ್ದಗಳಲ್ಲಿ ಅಂತರ್ಗತವಾಗಿರುವ ನಾದದ ಉಪಾಸಕರು. 'ನಿನ್ನ ಕೃಪೆ' ಎನ್ನುವ ಕವಿತೆಯನ್ನು ಹಾಡುವ ಕ್ರಮದ ಸೂಚನೆಯನ್ನು ರಾಗ-ಅಠಾಣ ಎಂದು ಕೊಟ್ಟಿರುವರು. ಆದರೆ ಅವರ ಕವಿತೆಗಳ ಮನೋವೃತ್ತಿಯನ್ನು ಗಮನಿಸಿದಾಗ ಸಂಗೀತದೊಂದಿಗೆ ಸಾಹಚರ್ಯ ದೂರವೆನಿಸುತ್ತದೆ. ಪ್ರಕಟಣೆ, ಪ್ರಶಂಸೆ, ಪ್ರಶಸ್ತಿಗಳ ಕಡೆಗೆ ದಿವ್ಯ ನಿರ್ಲಕ್ಷ್ಯ ತೋರಿದ ಈ ಕವಿ ತೋರಿದ ಸಂಯಮ ಮೆಚ್ಚಬಹುದಾದರೂ ಅದು ತನಗೆ ತಾನೇ ಮಾಡಿಕೊಂಡ ಅನ್ಯಾಯ, ಸಹೃದಯಲೋಕಕ್ಕೆ ಮಾಡಿದ ನಷ್ಟ. ಕವಿತಾ ವನಿತಾ ಲತಾ ಇವು ಪರರ ಆಶ್ರಯವಿಲ್ಲದೆ ಬೆಳೆಯಲಾರವು ಎಂಬ ಆರ್ಯೋಕ್ತಿ ಮಹದೇವಯ್ಯನವರನ್ನು ನೆನೆಸಿಕೊಂಡಾಗ ನಿಜವೆನಿಸುವುದಿಲ್ಲವೆ?

ಟಿ.ಎನ್. ಮಹದೇವಯ್ಯನವರು ಒಳ್ಳೆಯ ಕವಿಗಳಾಗಿದ್ದಂತೆ ಸಮರ್ಥ ನಾಟಕಕಾರರೂ ಆಗಿದ್ದರು. ಅವರು ಬರೆದ ನಾಟಕಗಳೆಲ್ಲ ಬಾನುಲಿ ನಾಟಕಗಳು. ಅವುಗಳನ್ನು ಬರೆಯುವ ಶೈಲಿ, ಬಳಸುವ ಭಾಷೆ ಬಾನುಲಿಗೆ ಪೂರಕವಾದವುಗಳು. ಕವಿಮನಸ್ಸು ಅವರ ನಾಟಕಗಳ ಭಾಷೆ ಪ್ರೌಢವಾಗಿದೆ, ಅರ್ಥಪೂರ್ಣವಾಗಿದೆ, ಶ್ರವಣಯೋಗ್ಯವಾಗಿದೆ. ಬಾನುಲಿ ಬರವಣಿಗೆಗೆ ಬೇಕಾಗುವ ಮುಖ್ಯ ಸಾಧನ ಎಂದರೆ ಶ್ರವಣಸಾಧ್ಯವಾದ ಭಾಷೆ. ನಾಟಕಗಳ ಪಾತ್ರ ಹಾಗೂ ಕೇಳುವ ಶ್ರೋತೃ ಇವರ ನಡುವೆ ಮಧುರ ಸೇತುವೆ ನಿರ್ಮಿಸಬಲ್ಲ ಶಕ್ತಿ ಬಾನುಲಿ ಪ್ರಯೋಗದ ನಾಟಕಕ್ಕಿದೆ. 'ವಿಜಯಶ್ರೀ' ನಾಟಕಸಂಕಲನದಲ್ಲಿನ ಅದೇ ಹೆಸರಿನ ನಾಟಕ ಪಂಪನ ಭರತ-ಬಾಹುಬಲಿ ಪ್ರಸಂಗವನ್ನು ಆಧರಿಸಿದೆ. ಕಥೆ ಪೌರಾಣಿಕವಾದರೂ ರೂಪಕದಲ್ಲಿನ ದೃಶ್ಯ ಸಂಯೋಜನೆ, ಹೊಸ ಪಾತ್ರಗಳ ರಚನೆ, ಕಥಾನಿರೂಪಣೆ-ಇಲ್ಲೆಲ್ಲ ಸಂಪೂರ್ಣವಾಗಿ ಹೊಸತನವನ್ನೊಳಗೊಂಡಿದೆ. 'ವಿದ್ಯಾರಣ್ಯ' ಐತಿಹಾಸಿಕ ಏಕಾಂಕ ನಾಟಕ. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಹಿನ್ನೆಲೆಯ ಈ ನಾಟಕ ಉಜ್ವಲ ರಾಷ್ಟ್ರಾಭಿಮಾನವನ್ನು ಮೂಡಿಸುವಲ್ಲಿ ಯಶಸ್ವಿಯಾಗಿದೆ. 'ನೀಲಾಂಬಿಕೆ' ನಾಟಕ ೧೨ನೇ ಶತಮಾನದ ಮಹಾನ್ ಶರಣ, ಸಮಾಜ ಸುಧಾರಕ ಬಸವಣ್ಣನವರ ಜೀವನದ ಕೊನೆಯಘಟ್ಟಕ್ಕೆ ಸಂಬಂಧಿಸಿದುದು.

ಶರಣರ ವಚನಗಳನ್ನು ಸಂದರ್ಭೋಚಿತವಾಗಿ ಅಳವಡಿಸಿಕೊಂಡು, ಅರ್ಥಪೂರ್ಣ ಸಂಭಾಷಣೆಗಳನ್ನೊಳಗೊಂಡ ನಾಟಕವಿದು. ನೀಲಾಂಬಿಕೆ ಬಸವಣ್ಣನವರ ಧರ್ಮಪತ್ನಿ. ಅವಳು ಆ ಕಾಲದ ಮಹಿಳೆಯರ ನಡುವೆ ಒಂದು ಉಜ್ವಲರತ್ನ; ಗೃಹಿಣೀಧರ್ಮಕ್ಕೆ ಒಂದು ಶ್ರೇಷ್ಠ ಉದಾಹರಣೆ. ಶೂನ್ಯಸಂಪಾದನೆಯಲ್ಲಿ ಬರುವ ಅಜಗಣ್ಣನ ಸೋದರಿ ಮುಕ್ತಾಯಕ್ಕನ ಕಥೆ ಮುಕ್ತಾಯಕ್ಕ ನಾಟಕರೂಪ ಪಡೆದಿದೆ. ಅಲ್ಲಮಪ್ರಭು ಹಾಗೂ ಮುಕ್ತಾಯಕ್ಕಗಳ ನಡುವೆ ನಡೆಯುವ ಗಹನವಾದ ತಾತ್ವಿಕ ಚರ್ಚೆ ಇಲ್ಲಿ ಸರಳ ಸಂಭಾಷಣಾರೂಪದಲ್ಲಿ ಬಂದಿದೆ.

ಟಿ.ಎನ್. ಮಹದೇವಯ್ಯನವರು ಗ್ರೀಕ್ ರುದ್ರನಾಟಕಗಳ ಬಗೆಗೆ ವಿಶೇಷ ಆಸಕ್ತಿ ತಳೆದಿರುವರು. ಆ ಆಸಕ್ತಿಯಫಲವಾಗಿ 'ಈಡಿಪಸ್' 'ಈಡಿಪಸ್‌ನ ಅಂತ್ಯ' 'ಸೋಫೋಕ್ಲಿಸ್' ನಾಟಕಗಳು ರೂಪುಗೊಂಡಿವೆ. ಕ್ರಿ.ಪೂ. ಎರಡನೇ ಶತಮಾನದ ಕೊನೆಯಲ್ಲಿ ಬದುಕಿದ್ದ ಗ್ರೀಸ್ ದೇಶದ ಮಹಾಮೇಧಾವಿ ಗಣಿತಜ್ಞ ಆರ್ಕಿಮಿಡೀಸನ ಬದುಕನ್ನೇ ಕಥಾವಸ್ತುವನ್ನಾಗಿ ಹೊಂದಿರುವ ನಾಟಕ ಆರ್ಕಿಮಿಡೀಸ್. ಅವನು ಗ್ರೀಸ್ ದೇಶದ ಸ್ವಾತಂತ್ರ್ಯಕ್ಕಾಗಿ ತನ್ನ ಬದುಕನ್ನೇ ತ್ಯಾಗಮಾಡಿದ ಮಹಾವೀರ, ಜ್ಞಾನಿ; ಸಿರಾಕ್ಯೂಸ್ ನಗರದೇವತೆ ತನ್ನನ್ನು ಸೆರೆಯಿಂದ ಬಿಡಿಸಬೇಕೆಂದು ಸ್ವತಃ ಪ್ರಾರ್ಥಿಸಿದರೂ ಗಣಿತದ ಶುಭ್ರ ನಿರ್ಮಲ ತತ್ವವನ್ನು ಸ್ವಾರ್ಥಕ್ಕಾಗಿ ಬಳಸಬಾರದೆನ್ನುವ ಉದಾತ್ತ ಚಾರಿತ್ರ್ಯಶುದ್ಧಿಯುಳ್ಳವನು. ಸಿರಾಕ್ಯೂಸ್ ನಗರದೇವತೆಯ ಶಾಪದ ಕಾರಣದಿಂದ ಅವನು ರೋಮನ್ ಸೈನಿಕನೊಬ್ಬನಿಂದ ಹತನಾಗುವನು. ಬದುಕಿನ ಆದರ್ಶ ಹಾಗೂ ಸ್ವಾತಂತ್ರ್ಯಪ್ರೇಮವನ್ನು ಮನೋಜ್ಞವಾಗಿ ನಾಟಕದಲ್ಲಿ ಬಿಂಬಿಸಲಾಗಿದೆ. 'ತಲೆಗಡುಕರು' ಎನ್ನುವ ನಾಟಕ ಐದು ದೃಶ್ಯಗಳನ್ನೊಳಗೊಂಡಿದೆ. ಈ ನಾಟಕಕ್ಕೆ ರಷ್ಯಾದ ಮಹಾಮಾನವತಾವಾದಿ ಟಾಲ್‌ಸ್ಟಾಯ್‌ರವರ 'Rule by murder' ಎನ್ನುವ ಕೃತಿಯಿಂದ ಪ್ರೇರಣೆದೊರಕಿದೆ. ಮನುಷ್ಯನಲ್ಲಿ ಅಂತರ್ಗತವಾಗಿರುವ ಲೋಭ ಹಾಗೂ ದಯಾವಿಹೀನ ಗುಣಗಳ ಮೇಲೆ ಬೆಳಕು ಚೆಲ್ಲುವ ನಾಟಕ. ಒಂದು ತಲೆ ತೆಗೆಯಲು ಇಂತಿಷ್ಟು ಬೆಲೆ ನಿಗದಿಮಾಡುವ ಮೂಲಕ ಮನುಷ್ಯನಲ್ಲಿನ ಕ್ರೌರ್ಯ ಹಾಗೂ ಲೋಭ ಅವನನ್ನು ಆಳವಾದ ಪತನಮಾರ್ಗಕ್ಕೆ ದೂಡುತ್ತದೆನ್ನುವುದರ ಬಗೆಗೆ ಟಾಲ್‌ಸ್ಟಾಯ್ ಮನಂಬುಗುವಂತೆ ಹೇಳಿರುವರು. ಮಾನವನಲ್ಲಿನ ಈ ರಾಕ್ಷಸೀಗುಣ ಸಾರ್ವಕಾಲಿಕವಾದುದು. ಈ ನಾಟಕದಲ್ಲಿ ಬರುವ ಪಾತ್ರಗಳು ಪ್ರಸ್ತುತವಾಗಬಲ್ಲವು. ಕ್ರೌರ್ಯದ ಹಿಂದಿರುವ ಅಮಾನವೀಯತೆ ಹಾಗೂ ಒಂದು ಜೀವದ ಬಗೆಗಿನ ಲಘುಧೋರಣೆ-ಹಣದ ಆಕರ್ಷಣೆಯ ಮುಂದೆ ಮಾನವೀಯತೆ ಅರ್ಥಕಳೆದುಕೊಳ್ಳುವುದು-ಟಾಲ್‌ಸ್ಟಾಯ್ ಕಾಲದ್ದಷ್ಟೇ ಅಲ್ಲ, ನಮ್ಮ ಕಾಲದ್ದೂ ಆಗುತ್ತದೆ. (ಎರಡನೆ ದೃಶ್ಯ ಹೊರತುಪಡಿಸಿ) ಇಡೀ ನಾಟಕ ಜೈಲಿನ ಪರಿಸರದಲ್ಲಿಯೇ ನಡೆಯುವುದು ವಿಶೇಷ.

ಟಿ.ಎನ್. ಮಹದೇವಯ್ಯನವರ ಸಮಗ್ರ ನಾಟಕಗಳು ಅವರ ಸಮಗ್ರ ಕಾವ್ಯದಂತೆ ಮರಣಾನಂತರ ಪ್ರಕಟವಾಗಿದೆ. ಇಲ್ಲಿನವರೆವಿಗೆ ಅವರ ನಾಟಕಗಳ ಬಗೆಗೂ ಗಂಭೀರ ಅಧ್ಯಯನ ನಡೆದಂತಿಲ್ಲ.

'ರಾಷ್ಟ್ರಕವಿ' ಡಾ.ಜಿ.ಎಸ್. ಶಿವರುದ್ರಪ್ಪನವರು ಸಾಹಿತ್ಯ ನಿರ್ಮಿತಿ, ಸಾಹಿತ್ಯವಿಮರ್ಶೆ ಹಾಗೂ ಸಂಶೋಧನೆಗಳು ವರ್ತಮಾನ ಹಾಗೂ ಪರಂಪರೆಯ ಅರಿವು ಮತ್ತು ಅನುಸಂಧಾನದಿಂದ ನಡೆಯಬೇಕೆಂದು

ಹೇಳುವರು : "ಸಾಹಿತ್ಯ ನಿರ್ಮಿತಿ ಎನ್ನುವುದು ತನ್ನ ವರ್ತಮಾನದ ಸಮಕಾಲೀನ ಅನುಭವಗಳ ನೆಲೆಯಲ್ಲಿ ನಿಂತು, ಸೃಜನಶೀಲ ಮನಸ್ಸು ತನ್ನ ಹಿಂದಿನ ಪರಂಪರೆಯೊಂದಿಗೆ ಏರ್ಪಡಿಸಿಕೊಳ್ಳುವ ಸಂಬಂಧ ಹಾಗೂ ಪ್ರತಿಕ್ರಿಯೆಗಳ ಪರಿಣಾಮವಾಗಿದೆ. ಹಾಗೆಯೇ ನಿಜವಾದ ಸಾಹಿತ್ಯ ವಿಮರ್ಶೆಯಾಗಲೀ ಸಂಶೋಧನೆಯಾಗಲೀ ಪರಂಪರೆಯ ಅರಿವು ಮತ್ತು ಅನುಸಂಧಾನದಿಂದ ನಡೆಯಬೇಕಾದ ಕ್ರಿಯೆಯಾಗಿದೆ." (ಸಮಗ್ರ ಗದ್ಯ ಸಂಪುಟ ೧, ೨೦೦೭, ಮುನ್ನುಡಿ, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು). ಟಿ.ಎನ್. ಮಹದೇವಯ್ಯನವರು ಸಾಹಿತ್ಯದ ವಿದ್ಯಾರ್ಥಿಯಲ್ಲ, ವಿಜ್ಞಾನದ ವಿದ್ಯಾರ್ಥಿ. ಅಕಾಡೆಮಿಕ್ ವಲಯದಲ್ಲಿ ಕ್ರಿಯಾಶೀಲರಾಗಿ ತೊಡಗಿಕೊಂಡವರಲ್ಲ; ಮಾಸ್ತಿ, ಸಿದ್ಧಯ್ಯ ಪುರಾಣಿಕ, ಪು.ತಿ. ನರಸಿಂಹಾಚಾರ್, ಕೆ.ಎಸ್. ನರಸಿಂಹಸ್ವಾಮಿ, ಮೊದಲಾದವರಂತೆ ಸರಕಾರಿ ಸೇವೆಯಲ್ಲಿ ಯಾಂತ್ರಿಕವಾಗಿ ತಮ್ಮ ಬದುಕಿನ ಬಹುಭಾಗವನ್ನು ಕಳೆದವರು. ಸೃಜನಕ್ರಿಯೆಗೂ ಮಾಡುವ ವೃತ್ತಿಗೂ ಯಾವ ಸಂಬಂಧವೂ ಇರುವುದಿಲ್ಲ. ಓದಿನಿಂದ, ತಿಳಿವಳಿಕೆಯಿಂದ, ವಿಚಾರವಂತಿಕೆಯಿಂದ, ಶುಚಿ ರುಚಿಯಾದ ಜೀವನ ಸಂಸ್ಕಾರದಿಂದ ಸೃಜನಪ್ರತಿಭೆ ಬೆಳೆಯಲು, ವಿಕಸಿತವಾಗಲು, ಸಾಹಿತ್ಯಸೃಷ್ಟಿಕ್ರಿಯೆಯಲ್ಲಿ ತೊಡಗಲು ಪ್ರಚೋದನೆ ನೀಡಬಹುದು. ಟಿ.ಎನ್. ಮಹದೇವಯ್ಯನವರು ಅಪಾರ ಪರಿಶ್ರಮದಿಂದ ಸಾಹಿತ್ಯಜ್ಞಾನವನ್ನು ಕರಗತ ಮಾಡಿಕೊಡರು. ಅವರು ಕನ್ನಡ ಸಾಹಿತ್ಯ, ಆಂಗ್ಲ ಸಾಹಿತ್ಯ, ಗ್ರೀಕ್ ಸಾಹಿತ್ಯಗಳ ಬಗೆಗೆ ಆಳವಾದ ವ್ಯಾಸಂಗ ಮಾಡಿರುವರು. ಈ ನೆಲದ ಸಂಸ್ಕೃತಿಯ ಬಗೆಗೆ ಉತ್ತಮ ಪರಿಜ್ಞಾನವನ್ನು ಹೊಂದಿರುವರು. ಸ್ವತಂತ್ರವಾಗಿ ವಿಚಾರಮಾಡುವ, ವಿಷಯ ಪ್ರತಿಪಾದನೆಯಲ್ಲಿ ತೂಕ ತಪ್ಪದಂತೆ ಎಚ್ಚರವಿರುವ, ತಮ್ಮ ಇತಿ-ಮಿತಿ ಪ್ರಮಾಣವರಿತು, ಕ್ರಮವರಿತು ಜಾಡುಹಿಡಿದು ನಡೆಯುವ ಗುಣವನ್ನು ಅವರು ಪರಿಶ್ರಮಪೂರ್ವಕವಾಗಿ ರೂಢಿಸಿಕೊಂಡಿರುವರು. ಅವರ ಸೃಜನ ಪ್ರತಿಭೆ, ಕಾವ್ಯ, ನಾಟಕ, ಕತೆ, ಕಾದಂಬರಿ ಪ್ರಕಾರಗಳಲ್ಲಿ ಪ್ರಕಟವಾದಂತೆ ವಿಮರ್ಶೆಯಲ್ಲೂ ವ್ಯಕ್ತವಾಗಿದೆ. ಅವರ ವಿಮರ್ಶಾ ವಿಷಯವ್ಯಾಪ್ತಿ ದೊಡ್ಡದು. ಅವರ ವಿಮರ್ಶೆಯಲ್ಲಿ ಆಳವಾದ ವಿವೇಚನೆ, ತೀಕ್ಷ್ಣ ವಿಚಾರಪರ ದೃಷ್ಟಿ, ವ್ಯಾಸಂಗದಲ್ಲಿನ ನಿಷ್ಠೆ, ತುಂಬು ಉತ್ಸಾಹ ಕಾಣಬರುತ್ತದೆ. ಅವರ 'ಅನುಭವ ಮಂಟಪ' ಎನ್ನುವ ಪುಟ್ಟ ಕೃತಿಯಾಗಬಹುದು, 'ಶ್ರೀ ಕೃಷ್ಣದೇವರಾಯನ ಸಾಹಿತ್ಯ ವೈಭವ' ಎನ್ನುವ ಲೇಖನವಾಗಬಹುದು, ಭರತೇಶ ವೈಭವವನ್ನು ಕುರಿತ ಸಹೃದಯ ಪರವಾದ ವಿಮರ್ಶೆಯಾಗಬಹುದು, ಪಂಪಮಹಾಕವಿಯ ಬಾಹುಬಲಿ ಕುರಿತ ಲೇಖನವಿರ ಬಹುದು, ಅಕ್ಕಮಹಾದೇವಿ ಮತ್ತು ಆಂಡಾಳ್, ಅಕ್ಕನ ವಚನಗಳು ಮತ್ತು ತಿರುಪ್ಪಾವೈ-ಹೀಗೆ ತುಲನಾತ್ಮಕ ವಿವೇಚನೆಯಿರಬಹುದು, ಜಗತ್ತಿಗೆ ಶ್ರೇಷ್ಠ ಚಿಂತಕರಲ್ಲೊಬ್ಬನಾದ ಜಪಾನಿನ ಕಗಾವನ ಚಿಂತನೆಗಳ ಬಗೆಗೆ ಬರೆದ ಮೊಟ್ಟಮೊದಲ ಪರಿಚಯಾತ್ಮಕವಾದ ಲೇಖನವಾಗಬಹುದು ಅವರ ಪ್ರತಿಭೆಯ ಆಳ-ವಿಸ್ತಾರಗಳನ್ನು ಪರಿಚಯಿಸುತ್ತವೆ. ಅವರ ಕನ್ನಡ ಸಾಹಿತ್ಯಕ್ಕಷ್ಟೇ ಮೀಸಲಾಗದೆ ಅನ್ಯ ಭಾಷೆ-ಸಾಹಿತ್ಯ-ಸಂಸ್ಕೃತಿಗಳ ಬಗೆಗೂ ವಿವೇಚನೆ ನಡೆಸಿರುವುದು ಗಮನಾರ್ಹವಾಗಿದೆ. ಅವರು ಕವಿಯಾಗಿರುವುದರಿಂದ ಅವರು ಪ್ರಸ್ತುತಪಡಿಸುವ ವಿಚಾರಗಳಿಗೆ ಕವಿತೆಯ ಭಾವಸಂಸ್ಪರ್ಶವಾಗುತ್ತದೆ. ರಸನಿಷ್ಠ ವಿಮರ್ಶಕರಾಗಿ, ಒಮ್ಮೊಮ್ಮೆ ಕೃತಿಯ ಅಂತರಾಳವನ್ನು ಪ್ರವೇಶಿಸಿ ತಮ್ಮದೇ ಆದ ಧಾಟಿಯಲ್ಲಿ ವಿವಕ್ಷಿಸುವುದು, ವಿಶ್ಲೇಷಿಸುವುದು ವಿಶೇಷವಾಗಿ ಕಂಡುಬರುತ್ತದೆ. ಅದು ಸಾಹಿತ್ಯಾಧ್ಯಯನದಿಂದ,

ಸಂಸ್ಕಾರಗೊಂಡ ಮನಸ್ಸಿನಿಂದ, ಭಾವನಾವಿವಶತೆಯಿಂದ ಕೃತಿಯೊಂದರ ಗ್ರಹಿಕೆ ತನ್ನದೇ ಆದ ವಿಶಿಷ್ಟ ಪಾಕವನ್ನು ಪಡೆದುಕೊಳ್ಳುತ್ತದೆ. ಸೃಜನಕ್ರಿಯೆಯ ಭಾಗವಾಗಿ ವಿಮರ್ಶೆ ತನ್ನ ಒಳತೋಟಿಯನ್ನು ಪ್ರಕಟಗೊಳಿಸಿದೆ. ಬಹುಮುಖಪ್ರತಿಭೆಯ ವ್ಯಕ್ತಿಯೊಬ್ಬನಲ್ಲಿ ಕಂಡುಬರುವ ಕ್ರೀಕಲಾಪಗಳಿವು. ಸೃಜನಪ್ರತಿಭೆಯಷ್ಟೇ ಸೃಜನ ವಿಮರ್ಶೆಯೂ ಮುಖ್ಯವೆಂಬುದನ್ನು ಟಿ.ಎನ್. ಮಹದೇವಯ್ಯನವರು ನಂಬಿರುವರು. ಹೀಗಾಗಿ ೧೯೩೦ ರಿಂದ ೧೯೬೦ರ ವರೆಗಿನ ಅವರ ವಿಮರ್ಶಾ ಪ್ರಕ್ರಿಯೆಗಳು ಕಾಲದ ದೃಷ್ಟಿಯಿಂದ ಮುಖ್ಯವಾಗುತ್ತವೆ. ಆ ಕಾಲಘಟ್ಟದಲ್ಲಿ ಸಾಹಿತ್ಯ ವಿಮರ್ಶೆಯೆನ್ನುವುದು ನಿಶಿತಮತಿಯೊಬ್ಬನ ಸಹೃದಯಪರವಾದ ಸಾಹಿತ್ಯ ಸಲ್ಲಾಪವಾಗಿರುತ್ತಿತ್ತು ಇಲ್ಲವೆ ರಸನಿಷ್ಠ, ಭಾವನಿಷ್ಠ, ದರ್ಶನನಿಷ್ಠ ಸಾಹಿತ್ಯ ಪ್ರತಿಕ್ರಿಯೆಯಾಗಿರುತ್ತಿತ್ತು. ನವ್ಯರು ವಿಮರ್ಶೆಗೆ ಕೊಟ್ಟ ವ್ಯಾಖ್ಯಾನ ಅಥವಾ ಆಧುನಿಕ ಜ್ಞಾನ ವಿಜ್ಞಾನಗಳಿಂದ ಪರಿಪುಷ್ಟವಾದ ಪಾರಿಭಾಷಿಕ ರೂಪ ಆಧುನಿಕ ಸಂವೇದನೆ ಕೊಟ್ಟ ಬಳುವಳಿಯಾಗಿ ತೋರುತ್ತದೆ. ಟಿ.ಎನ್. ಮಹದೇವಯ್ಯನವರು ೧೯೬೧ರ ಏಪ್ರಿಲ್ ೬ ರಂದು ಲಿಂಗೈಕ್ಯರಾದ ಕಾರಣ ಅವರ ಮೇಲೆ ಆಧುನಿಕ ಸಾಹಿತ್ಯ ವಿಮರ್ಶೆ ಪ್ರಭಾವ ಬೀರಿದಂತೆ ತೋರದು.

ಟಿ.ಎನ್. ಮಹದೇವಯ್ಯನವರು ಆಧುನಿಕ ವಚನಕಾರರೂ ಆಗಿರುವರು. 'ಶ್ರೀ ಮಲೆಯ ಮಹಾದೇವ' ಅಂಕಿತದಲ್ಲಿ ಅವರ ಸು. ೬೪ ವಚನಗಳು ಬೆಳಕು ಕಂಡಿವೆ. ಇವುಗಳನ್ನು ಬರೆದ ಕಾಲಮಾನದ ಖಚಿತ ವಿವರ ದೊರೆಯುವುದಿಲ್ಲ. ವಚನ ಸಾಹಿತ್ಯದ ನಿಷ್ಠಾವಂತ ವಿದ್ಯಾರ್ಥಿಯಾಗಿದ್ದ ಅವರು ಹೊಸ ಸಂವೇದನೆಯನ್ನು ಬಳಸಿಕೊಂಡು ಹಳೆಯ ವಚನದ ಮೌಲ್ಡ್‌ನಲ್ಲಿ ಆಧುನಿಕ ಚಿಂತನೆಗಳ ಅಭಿವ್ಯಕ್ತಿಯ ಹೊಸ ಸಾಧ್ಯತೆಗಳನ್ನು ಹುಡುಕಹೊರಟ ಹರ್ಡೇಕರ ಮಂಜಪ್ಪ, ಜಚನಿ, ಎಸ್.ವಿ. ರಂಗಣ್ಣ ಮೊದಲಾದವರ ಪ್ರಯತ್ನದಿಂದ ಪ್ರಭಾವಿತರಾಗಿ ಟಿ.ಎನ್. ಮಹದೇವಯ್ಯನವರೂ ಆಧುನಿಕ ವಚನಗಳನ್ನು ಬರೆದರು. ಅವು ಸಂಖ್ಯೆಯಲ್ಲಿ ಹೆಚ್ಚಿಲ್ಲದಿರಬಹುದು ಆದರೆ ಗುಣದಲ್ಲಿ ಮೌಲ್ಯಯುತವಾಗಿವೆ. ಅವರಿಗೆ ಶಿವಶರಣರ ವಚನಗಳ ಅಭಿವ್ಯಕ್ತಿ ವಿಧಾನ, ಬಾಹ್ಯ ಹಾಗೂ ಅಂತರಂಗದ ಲಕ್ಷಣಗಳು ತಿಳಿದಿದ್ದುದರಿಂದ ತಮ್ಮ ಆಲೋಚನೆಗಳಿಗೆ ಹೊಸ ಅಭಿವ್ಯಕ್ತಿ ವಿಧಾನವನ್ನು ಅಳವಡಿಸಲು ಸಾಧ್ಯವಾಯಿತು. ಭಾವ, ಭಾಷೆ, ಚಿಂತನೆಗಳು ಮುಪ್ಪುರಿಗೊಂಡು ಸಿದ್ಧವಾದ ಅವರ ವಚನಗಳು ಗಾತ್ರದಲ್ಲಿ ಪುಟ್ಟವು, ಆದರೆ, ಪರಿಣಾಮಕಾರಿಯಾದವು. ಅವರು ಸ್ವಭಾವತಃ ಕವಿಗಳು. ಮನದ ಭಾವವನ್ನು ವ್ಯಂಜಿಸಲು ಅವರಿಗೆ ಕವಿತೆಯೊಂದು ಅಭಿವ್ಯಕ್ತಿ ಮಾಧ್ಯಮವಾಗಿದ್ದರೂ ಶಿವಶರಣರ ಆಲೋಚನಾಕ್ರಮವನ್ನು ಚೆನ್ನಾಗಿ ಗ್ರಹಿಸಿದ್ದ ಟಿ.ಎನ್. ಮಹದೇವಯ್ಯನವರು ಶರಣರ ಆಲೋಚನೆಯ ರೀತಿಯಲ್ಲಿ, ಇರುವ ಶಾಬ್ದಿಕ ಮಿತಿಯಲ್ಲಿ ಕವಿತೆಯಲ್ಲಿ ಹೇಳಲಾಗದ್ದನ್ನು ವಚನದಲ್ಲಿ ಅಭಿವ್ಯಕ್ತಿಸಲು ಪ್ರಯತ್ನಿಸಿದರು. ಹೀಗಾಗಿ ಅವರ ಆಧುನಿಕ ವಚನಗಳು ಅಧ್ಯಯನಯೋಗ್ಯವಾಗಿವೆ.

ಟಿ.ಎನ್. ಮಹದೇವಯ್ಯನವರು ಎರಡು ಕಾದಂಬರಿಗಳನ್ನು ಬರೆದಿರುವರು. 'ಕಡಲ ಸೇಡು' ಅವರ ಮೊದಲ ಕಾದಂಬರಿ. ಕಡಲನ್ನೇ ನಂಬಿ ಬದುಕಿದ ಕುಟುಂಬವೊಂದರ ದುರಂತ ಕಥೆ. 'ತೋಟದ ಮನೆ' ಹುಡುಗನೊಬ್ಬನ ಕಣ್ಣಿನಲ್ಲಿ ಒಂದು ಕುಟುಂಬದ ಬದುಕಿನ ನಿರೀಕ್ಷಣೆ ಮಾಡುವ ಪ್ರಯತ್ನವಾಗಿ ತೋರುತ್ತದೆ. ಟಿ.ಎನ್. ಮಹದೇವಯ್ಯನವರ ಸೃಜನಕ್ರಿಯೆಯಲ್ಲಿ ಇವು ಪ್ರಾಯೋಗಿಕ ಸೃಷ್ಟಿಗಳೇ ಹೊರತು ತೀರಾ ಮಹತ್ವದ ಕೃತಿಗಳೇನಲ್ಲ.

ಟಿ.ಎನ್. ಮಹದೇವಯ್ಯನವರು ನವೋದಯಕಾಲದ ಪ್ರತಿನಿಧಿಗಳು. ಅವರು ಓದು ಚಿಂತನೆ ಹಾಗೂ ಬರೆಹಗಳೆಲ್ಲವೂ ಆ ಕಾಲಮಾನದ ಪರಿಸರ-ಪ್ರಭಾವಗಳಿಂದ ಪರಿಷ್ಕಾರಗೊಂಡವು. ಅವರು ಒಳ್ಳೆಯ ಕವಿ-ನಾಟಕಕಾರ-ವಿಮರ್ಶಕರಾಗಿ ಈ ಮೂರೂ ಕ್ಷೇತ್ರಗಳಲ್ಲಿ ಮಹತ್ವದ ಸಾಧನೆ ಮಾಡಿದವರು. ದುರಂತವೆಂದರೆ ಅವರು ಮಾಗುತ್ತಿರುವ ಹಂತದಲ್ಲೇ ವಿಧಿ ಅವರನ್ನು ತನಗೆ ಬೇಕೆಂದು ಕರೆದುಕೊಂಡದ್ದು. ಅವರು ಗುಂಪುಗಾರಿಕೆಯಿಂದ ದೂರವಿದ್ದು 'ಸ್ವಾಂತಸ್ಸುಖಾಯ'ವೆನ್ನುವ ಧೋರಣೆಯಿಂದ ಸಾಹಿತ್ಯ ರಚನೆ ಮಾಡಿದರು. ಕವಿ,ವಿಮರ್ಶಕ, ನಾಟಕಕಾರ, ಕಾದಂಬರಿಕಾರ, ವಚನಕಾರ ಮಹದೇವಯ್ಯನವರ ಸಮಗ್ರ ಸಾಹಿತ್ಯ ಕುರಿತ ವಿಮರ್ಶೆಯಾಗಲಿ, ಪ್ರಶಂಸೆಯಾಗಲಿ ಈವರೆಗೂ ಬಾರದಿರುವುದು ದುರ್ದೈವವಲ್ಲವೆ? ಸಾಹಿತ್ಯಲೋಕ ಗುರುತಿಸುವ ಹಂತದಲ್ಲಿ ಅವರು ನಮ್ಮನ್ನು ಅಗಲಿ ಹೋದರು. ಸಾಹಿತ್ಯಲೋಕದಲ್ಲಿ ಬೆಳಗುವ ದಿನಗಳಲ್ಲಿ ಅವರು ಕಣ್ಮರೆಯಾದರು. ಭೌತಿಕವಾಗಿ ಇಂದು ಅವರಿಲ್ಲ, ಆದರೆ ಅವರು ಬಿಟ್ಟುಹೋದ ಸಾಹಿತ್ಯವಿದೆ. ಅವುಗಳ ಬೆಲೆಗಟ್ಟುವ ಮೂಲಕ ಅವರಿಗೆ ನಿಜವಾಗಿ ದಕ್ಕಬೇಕಾದ ಸ್ಥಾನ-ಮಾನವನ್ನು ದೊರಕಿಸಿಕೊಡುವ ಪುಟ್ಟ ಪ್ರಾಮಾಣಿಕ ಪ್ರಯತ್ನ ಈ ಮಹಾಪ್ರಬಂಧವಾಗಿದೆ.

ಅವರನ್ನು ನೆನೆದಾಗ ಬಸವಣ್ಣನವರ ಈ ವಚನ ತಾನಾಗಿ ಹೊರಹೊಮ್ಮುತ್ತದೆ:

ಭಕ್ತಿಯೆಂಬ ಪೃಥ್ವಿಯ ಮೇಲೆ
ಗುರುವೆಂಬ ಬೀಜವಂಕುರಿಸಿ
ಲಿಂಗವೆಂಬ ಎಲೆಯಾಯಿತ್ತು
ಲಿಂಗವೆಂಬ ಎಲೆಯ ಮೇಲೆ
ವಿಚಾರವೆಂಬ ಹೂವಾಯಿತ್ತು
ಆಚಾರವೆಂಬ ಕಾಯಾಯಿತ್ತು
ನಿಷ್ಪತ್ತಿಯೆಂಬ ಹಣ್ಣಾಯಿತ್ತು
ನಿಷ್ಪತ್ತಿಯೆಂಬ ಹಣ್ಣು
ತೊಟ್ಟು ಕಳಚಿ ಬೀಳುವಲ್ಲಿ
ಕೂಡಲ ಸಂಗಮದೇವ
ತಮಗೆ ಬೇಕೆಂದು ಎತ್ತಿಕೊಂಡ.

ಶ್ರೀಯುತರು ಅಕಾಲಿಕ ಮರಣಕ್ಕೆ ತುತ್ತಾದರೂ ಶಾಶ್ವತ ಸಾಹಿತ್ಯ ನಿರ್ಮಾಣ ಕೀರ್ತಿಗೆ ಭಾಜನರಾಗಿದ್ದಾರೆ. ಮಹದೇವಯ್ಯನವರು ಟಂಕಿಸಿರುವ ಅಪಾರ ನಾಣ್ಯಗಳು ಅಪ್ಪಟ ಚಿನ್ನದ ನಾಣ್ಯಗಳೇ ಆಗಿದ್ದರೂ ಚಲಾವಣೆಗೆ ಬಾರದಿರುವುದು ಅತ್ಯಂತ ದೌರ್ಭಾಗ್ಯವಾಗಿದೆ. ಮಹದೇವಯ್ಯನವರು ಬಾಳಿ ಬೆಳಗಿದ ಕಾಲ ಮತ್ತು ಅವರು ಸೃಷ್ಟಿಸಿದ ಸಾಹಿತ್ಯ ಕನ್ನಡಿಗರ ಸಮೀಕ್ಷೆಗೂ ವಿವಕ್ಷೆಗೂ ಒಳಗಾಗಬೇಕಾಗಿದೆ. ಮಹದೇವಯ್ಯನವರು ಇಡೀ ಜೀವನವನ್ನು ಜನತೆಯ ಕಾರ್ಯಗಳಿಗೂ ಕನ್ನಡ ಸಾಹಿತ್ಯದ ಸರ್ವಾಂಗೀಣ ಪ್ರಗತಿಗೂ ಎಲೆಯ ಮರೆಯ ಕಾಯಿಯಂತೆ ಅಹರ್ನಿಶಿ ದುಡಿದು ಅಮರರಾಗಿದ್ದಾರೆ.

■■

# ಅನುಬಂಧ - ೧

## ಟಿ. ಎನ್. ಮಹದೇವಯ್ಯನವರ ಜೀವನದ ವಿವರ

ಜನನ : ೧೯೧೪ ಡಿಸೆಂಬರ್ ೨೬, ತುಮಕೂರು. ತಂದೆ : ನಾಗಪ್ಪ, ತಾಯಿ : ಅಡವಮ್ಮ

ವಿದ್ಯಾಭ್ಯಾಸ : ೧೮೩೭ ಬೆಂಗಳೂರು ವಿಶ್ವವಿದ್ಯಾಲಯದ ಸೆಂಟ್ರಲ್ ಕಾಲೇಜಿನಲ್ಲಿ ಬಿ.ಎಸ್ಸಿ. ಪದವಿ.

ವಿವಾಹ : ೧೯೩೭ ಮಹಾದೇವಮ್ಮನವರೊಡನೆ.
೧೯೪೮ ದ್ವಿತೀಯ ವಿವಾಹ ಶ್ರೀಮತಿ ಸುಶೀಲಮ್ಮನವರೊಡನೆ.

ಸರ್ಕಾರಿ ಸೇವೆ : ೧೯೩೮ ರೆವಿನ್ಯೂ ಇನ್ಸ್‌ಪೆಕ್ಟರ್ ಆಗಿ ನೇಮಕ.
೧೯೫೬ ಅಮಲ್ದಾರ್ ಆಗಿ ನೇಮಕ.
೧೯೬೧ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಲ್ಲಿ ಸಹ ನಿರ್ದೇಶಕರಾಗಿ ನೇಮಕ (ಚಿಕ್ಕಮಗಳೂರು ಮತ್ತು ಶಿವಮೊಗ್ಗ ಜಿಲ್ಲೆ.)

ಸಾಹಿತ್ಯ ಸೇವೆ : ೧೯೩೫ "ಮಹಾದೇವಿಯಕ್ಕನವರ ಜೀವನ ಚರಿತ್ರೆ" ಪ್ರಕಟಣೆ .
೧೯೩೬ ಹಂಪೆಯಲ್ಲಿ ಆಚಾರ್ಯ ಬಿ. ಎಂ. ಶ್ರೀ ಅವರ ಸಮ್ಮುಖದಲ್ಲಿ "ಹಂಪೆಯ ಕನಸು" ನೀಳ್ಗವನದ ವಾಚನ.
೧೯೩೭ ಡಾ॥ ಮಂಜುನಾಥ್‌ರವರ "ರಸಾಯನ ಶಾಸ್ತ್ರ" ಗ್ರಂಥದ ಕನ್ನಡ ಅನುವಾದ ಪ್ರಕಟಣೆ
೧೯೩೮ "ಕ್ರಾಂತಿಯದೀಪ" ಬಸವಣ್ಣನವರ ಬದುಕನ್ನು ಕುರಿತ ಮೂರು ಅಂಕಗಳ ನಾಟಕ ಪ್ರಕಟಣೆ.
೧೯೩೯ "ಪುಷ್ಪಾಂಜಲಿ"ಯನ್ನು ಒಪ್ಪಿಸಿಕೊಳ್ಳಲಿಕ್ಕೆ ವಿಶ್ವಕವಿ ರವೀಂದ್ರ ಒಪ್ಪಿಗೆ -ಪತ್ರಮುಖೇನ.
೧೯೪೪ : "ಅನುಭವ ಮಂಟಪ" ಲೇಖನ (ಪ್ರೊ॥ ಶಿ.ಶಿ. ಬಸವನಾಳರ ಕೋರಿಕೆಯ ಮೇರೆಗೆ).
೧೯೪೮ "ಬಾಷ್ಪಾಂಜಲಿ" ಗದ್ಯ ಕವನ (ಗಾಂಧೀಜಿ ಸಾವಿನ ಬಗೆಗೆ) ಪ್ರಕಟಣೆ.
ಪತ್ನಿ ಮಹದೇವಮ್ಮನವರ ಮರಣ "ಆ ಸಮಾಧಿ....." ಎಂಬ ಶೋಕಗೀತೆಯ ರಚನೆ.
೧೯೫೦ "ವೀಣಾ" ಕವನ ಸಂಕಲನ ಪ್ರಕಟಣೆ.
೧೯೫೧ ಮಗ ಅರವಿಂದನ ಮರಣ, ದುಃಖತಪ್ತರಾಗಿ ಶೋಕ ಗದ್ಯಗೀತೆಯ ರಚನೆ.
೧೯೫೩ ರತ್ನಾಕರವರ್ಣಿಯ "ಭರತೇಶ ವೈಭವ ಸಂಗ್ರಹ" ಹಾಗೂ ಮಹಾಪ್ರಂಬಧ ರಚನೆ.
೧೯೫೬ 'ಹಂಪೆಯ ಕನಸು", "ಮಕರಂದಾಜಿ" ಪ್ರಕಟಣೆ.
೧೯೬೧ ಏಪ್ರಿಲ್ ೬ ರಂದು ಸೋಮವಾರ ಪೇಟೆಯಲ್ಲಿ ಹೃದಯಾಘಾತ.

## ಅನುಬಂಧ-೨-ಕೃತಿಗಳು

ಕಾದಂಬರಿಗಳು : ಕಡಲಸೇಡು, ತೋಟದಮನೆ, ಪೂರ್ಣಿಮಾ, ರೋಸಿನಾ.

ನಾಟಕಗಳು : ರುದ್ರಪಶುಪತಿ, ಈಡಿಪಸ್, ಈಡಿಪಸ್‌ನ ಅಂತ್ಯ, ಆರ್ಕಿಮಿಡೀಸ್ ತಲೆಗಡುಕರು, ಮಕರಂದಾಜಿ, ಬುದ್ಧಮಂದಿರ, ಕೃಷ್ಣದೇವರಾಯ.

ಪ್ರವಾಸ ಸಾಹಿತ್ಯ: ಕಡಲ ಕರೆಗೆ, ಕಲ್ಹತ್ತಿಗೆ, ಗೋಮಟಗಿರಿ.

ವಿಮರ್ಶೆ : ಭರತೇಶ ವೈಭವ ಮಹಾಪ್ರಬಂಧ ಒಂದು ವಿಮರ್ಶೆ ೧೯೫೩, ಧರ್ಮಜಿಜ್ಞಾಸೆ, ಅನುಭವಮಂಟಪ, ಬಸವಪ್ರತಿಜ್ಞಾ

ಲೇಖನಗಳು : ಅಕ್ಕನ ವಚನಗಳು ಮತ್ತು ತಿರುಪ್ಪಾವೈ, ಕೈಲಾಸನಂ ಮತ್ತು ನಾಟಕಕಲೆ, ಸ್ವಾತಂತ್ರ್ಯಶ್ರೀ, ಗೊಮ್ಮಟದರ್ಶನ, ವಚನಸಾಹಿತ್ಯ, ಜನ್ನನ ಅಮೃತಮತಿ, ಕನ್ನಡ ನುಡಿಯ ಪ್ರಾಚೀನತೆ, ಮಿತಸಂತಾನ, ಮಹಾಶ್ವೇತೆಯತಪಸ್ಸು, ನೆನಪಿನ ದಿನ, ಕವಿಕಾವ್ಯದರ್ಶನ, ಆ ಚಿತ್ರಪಟ, ಕವಿಕಂಠಹಾರ, ಪಂಪಾಮಹಾಕವಿಯಬಾಹುಬಲಿ, ಋಗ್ವೇದದಲ್ಲಿ ಪ್ರಕೃತಿಪೂಜೆ.

ಜೀವನ ಚರಿತ್ರೆ : ಮಹಾದೇವಿಯಕ್ಕನವರ ಜೀವನ ಚರಿತ್ರೆ , ಕೃಷ್ಣದೇವರಾಯ, ಮಹರ್ಷಿ ಕನಿಫ್ಯೂಷಿಯಸ್, ಮಹರ್ಷಿ ದೇವೇಂದ್ರರ ಸತ್ಯದರ್ಶನ, ಮೋಸಸ್.

# ಅಡಿಟಿಪ್ಪಣಿಗಳು

## ೨. ಟಿ. ಎನ್. ಮಹದೇವಯ್ಯನವರ ಬದುಕು

೧. ಸದಾಶಿವಯ್ಯ- ಗುಪ್ತಗಂಗಾ-ಸ್ಮರಣೆ ಸಂಪುಟ, ಟಿ.ಎನ್. ಮಹದೇವಯ್ಯ ಸ್ಮಾರಕ ಗ್ರಂಥಮಾಲಾ, ತುಮಕೂರು, ೧೯೭೮, ಪು. ೬೦.

೨. ಪ್ರಕಾಶ್.ಜಿ-ನಂದ ಕಿಶೋರ-ವರ್ಸಾ ಪ್ರಕಾಶನ, ಶಾಂತಿನಗರ, ತುಮಕೂರು, ೧೯೯೪, ಪು. ೧೨.

೩. ಅದೇ, ಪು. ೧೯.    ೪. ಅದೇ, ಪು. ೩೪, ೩೫.    ೫. ಅದೇ, ಪು. ೪೨.    ೬. ಅದೇ, ಪು.- ೪೬.

೭. ಪ್ರಕಾಶ್.ಜಿ-ನಂದ ಕಿಶೋರ, ಪು. ೫೦, ೫೧.    ೮. ಅದೇ, ಪು. ೫೪    ೯. ಅದೇ, ಪು. ೬೪, ೬೫.

೧೦. ಅದೇ, ಪು. ೬೮, ೬೯.    ೧೧. ಅದೇ, ಪು. ೭೨-೭೩.    ೧೨. ಅದೇ, ಪು. ೯೦-೯೧.

೧೩. ಅದೇ, ಪು. ೯೭. ೧೪. ಅದೇ, ಪು. ೧೦೧.

## ೩. ಟಿ. ಎನ್. ಮಹದೇವಯ್ಯನವರ ಕವನಗಳು

೧. ಪ್ರೊ. ಅ.ರಾ. ಮಿತ್ರ (ಸಂ.) ಟಿ. ಎನ್. ಮಹದೇವಯ್ಯನವರು ಆಯ್ದ ಕವನಗಳಿಗೆ ಬರೆದ ಮುನ್ನುಡಿ- ಟಿ. ಎನ್. ಮಹದೇವಯ್ಯನವರ ಸ್ಮಾರರಕ ಗ್ರಂಥಮಾಲೆ, ಮಹಾದೇವಶ್ರೀ, ವಿನೋಬಾನಗರ ತುಮಕೂರು, ೨೦೦೩.

೨. ಅದೇ, ಪು. ೩. ೩. ಪರಿವಿಡಿ

೪. ವೀರಭದ್ರಯ್ಯ (ಸಂ.)- ಸಮಗ್ರಕಾವ್ಯ, ಟಿ. ಎನ್. ಮಹದೇವಯ್ಯನವರ ಸ್ಮಾರಕಮಾಲೆ, ಮಹದೇವಶ್ರೀ ವಿನೋಬನಗರ, ತುಮಕೂರು, ೧೯೯೦-ಪು. ೩೧.

೫. ಅದೇ, ಪು. ೨೫೧.

೬. ಅ.ರಾ. ಮಿತ್ರ (ಸಂ.) ಟಿ. ಎನ್. ಮಹದೇವಯ್ಯನವರ ಆಯ್ದ ಕವನಗಳು ಟಿ. ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲೆ, ಮಹಾದೇವಶ್ರೀ, ವಿನೋಬಾನಗರ ತುಮಕೂರು, ೨೦೦೩, ಪು. ೧.

೭. ಅದೇ, ಪು. ೧.  ೮. ಅದೇ, ಪು. ೨.  ೯. ಅದೇ, ಪು. ೩. ೧೦. ಅದೇ, ಪು. ೩.  ೧೧. ಅದೇ, ಪು. ೪.

೧೨. ಅದೇ, ಪು. ೫. ೧೩. ಅದೇ, ಪು. ೧೫. ೧೪. ಅದೇ, ಪು. ೭. ೧೫. ಅದೇ, ಪು. ೧೬.

೧೬. ವೀರಭದ್ರಯ್ಯ (ಸಂ.) ಸಮಗ್ರಕಾವ್ಯ, ಗುಪ್ತಗಂಗಾ-ಸ್ಮರಣ ಸಂಪುಟ, ಟಿ.ಎನ್. ಮಹದೇವಯ್ಯ ಸ್ಮಾರಕ ಗ್ರಂಥಮಾಲೆ, ಮಹದೇವಶ್ರೀ ತುಮಕೂರು, ೧೯೯೦, ಪು. ೪೬೨

೧೭. ಪ್ರೊ. ಅ.ರಾ. ಮಿತ್ರ (ಸಂ.) ಟಿ. ಎನ್. ಮಹದೇವಯ್ಯನವರು ಆಯ್ದ ಕವನಗಳು, ಟಿ. ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲೆ, ಮಹಾದೇವಶ್ರೀ, ವಿನೋಬಾನಗರ ತುಮಕೂರು, ೨೦೦೩, ಪು. ೧೭.

೧೮. ವೀರಭದ್ರಯ್ಯ (ಸಂ.) ಸಮಗ್ರಕಾವ್ಯ, ಟಿ.ಎನ್. ಮಹದೇವಯ್ಯ ಸ್ಮಾರಕ ಗ್ರಂಥಮಾಲೆ, ಮಹದೇವಶ್ರೀ ತುಮಕೂರು, ೧೯೯೦, ಪು. ೨೮

೧೯. ಅದೇ, ಪು. ೨೮.    ೨೦. ಅದೇ, ಪು. ೨೮.    ೨೧. ಅದೇ, ಪು. ೩೯೭.    ೨೨. ಅದೇ, ಪು. ೨೮.

೨೩. ಅದೇ, ಪು. ೮೦.    ೨೪. ಅದೇ, ಪು. ೮೧.    ೨೬. ಅ.ರಾ. ಮಿತ್ರ (ಸಂ.) ಪೂರ್ವೋಕ್ತ ೨೭೯.

೨೭. ವೀರಭದ್ರಯ್ಯ(ಸಂ.) ಟಿ.ಎನ್. ಮಹದೇವಯ್ಯನವರ ಸಮಗ್ರಕಾವ್ಯ, ಪು. ೨೭೯.

೨೮. ವೀರಭದ್ರಯ್ಯ(ಸಂ.) ಟಿ.ಎನ್. ಮಹದೇವಯ್ಯನವರ ಸಮಗ್ರಕಾವ್ಯ, ಪು. ೪೭೦.

೨೯. ಪ್ರೊ. ಅ.ರಾ.ಮಿತ್ರ (ಸಂ.) ಮಹದೇವಯ್ಯನವರ ಆಯ್ದ ಕವನಗಳು, ಪು. ೧೮.

೩೦. ಅದೇ, ಪು. ೨೧.    ೩೧. ಅದೇ, ಪು.    ೨೧. ೩೨. ಅದೇ, ಪು.    ೨೨. ೩೩. ಅದೇ, ಪು. ೨೩.

೩೪.ಅದೇ, ಪು. ೨೫.    ೩೫. ಅದೇ, ಪು. ೨೬.    ೩೬. ವೀರಭದ್ರಯ್ಯ (ಸಂ.) ಸಮಗ್ರ ಕಾವ್ಯ, ಪು. ೮.

೩೭. ಅದೇ, ಮುನ್ನುಡಿ, ಜಿ.ಎಸ್. ಶಿವರುದ್ರಪ್ಪ.

೩೮. ಸುಜನಾ, ಗುಪ್ತಗಂಗಾ,-ಸ್ಮರಣ ಸಂಪುಟ ಟಿ.ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲೆ, ತುಮಕೂರು, ೧೯೯೦. ಪು. ೧೨೯.

೩೯. ವೀರಭದ್ರಯ್ಯ ಮತ್ತು ಎಸ್. ವಿದ್ಯಾಶಂಕರ (ಸಂ.) ಗುಪ್ತಗಂಗಾ ಸುಜನಾ-೧೯೭೮, ಪು. ೨೯.

೪೦. ಪ್ರೊ. ಅ.ರಾ.ಮಿತ್ರ (ಸಂ.) ಟಿ.ಎನ್. ಮಹದೇವಯ್ಯನವರ ಆಯ್ದ ಕವನಗಳು, ಟಿ.ಎನ್. ಮಹದೇವಯ್ಯನವರ ಸ್ಮಾರಕ ಮಾಲೆ, ತುಮಕೂರು. ೨೦೦೩, ಪು. ೩೨.

೪೧. ವೀರಭದ್ರಯ್ಯ (ಸಂ.) ಸಮಗ್ರಕಾವ್ಯ, ಟಿ.ಎನ್. ಮಹದೇವಯ್ಯನವರ ಸ್ಮಾರಕ ಮಾಲೆ, ತುಮಕೂರು, ೧೯೯೦, ಪು. ೩೮೦.

೪೨. ಅದೇ. ಪು. ೩೭೪-೩೭೫.

೪೩. ಪ್ರೊ. ಅ.ರಾ.ಮಿತ್ರ (ಸಂ.) ಟಿ.ಎನ್. ಮಹದೇವಯ್ಯನವರ ಆಯ್ದ ಕವನಗಳು, ಟಿ.ಎನ್. ಮಹದೇವಯ್ಯನವರ ಸ್ಮಾರಕ ಮಾಲೆ, ತುಮಕೂರು, ೨೦೦೩, ಪು. ೩೫.

೪೪. ಅದೇ ಪು. ೩೫. ೪೫. ಅದೇ, ಪು. ೩೬. ೪೬. ಪುಟ. ೩೬

೪೭. ವೀರಭದ್ರಯ್ಯ (ಸಂ.) ಸಮಗ್ರ ಕಾವ್ಯ, ಟಿ.ಎನ್. ಮಹದೇವಯ್ಯನವರ ಸ್ಮಾರಕ ಗ್ರಂತ ಮಾಲೆ, ತುಮಕೂರು, ೧೯೯೦, ಪು. ೩೩.

೪೮. ಅದೇ, ಪು. ೩೧, ೩೨, ೩೩. ೪೯. ಪ್ರೊ. ಅ.ರಾ. ಮಿತ್ರ, ಪೂರ್ವೋಕ್ತ, ಪು. ೯೭.

೫೦. ವೀರಭದ್ರಯ್ಯ (ಸಂ.) ಸಮಗ್ರ ಕಾವ್ಯ, ಪು. ೪೩. ೫೧. ಅದೇ, ಪು. ೪೩ ೫೨. ಅದೇ, ಪು. ೩.

೫೪. ಅ.ರಾ.ಮಿತ್ರ, ಪೂರ್ವೋಕ್ತ, ಪು. ೩೭. ೫೫. ಅದೇ, ಪು. ೩೭. ೫೬. ಅದೇ, ಪು. ೩೭.

೫೭. ಅದೇ, ಪು. ೩೮. ೫೮. ಅದೇ, ಪು. ೪೧. ೫೯. ಅದೇ, ಪು. ೩೮.

೬೦. ವೀರಭದ್ರಯ್ಯ ಟಿ.ಎನ್. ಮಹದೇವಯ್ಯನವರ ಸಮಗ್ರಕಾವ್ಯ, ಪು. ೨೫೦.

೬೧. ಅ.ರಾ. ಮಿತ್ರ (ಸಂ.) ಆಯ್ದ ಕವನಗಳು, ಪು. ೪೪.

೬೨. ಅದೇ, ಪು. ೫೭. ೬೩. ಅದೇ, ಪು. ೪೫. ೬೪. ಅದೇ, ಪು. ೪೫. ೬೫. ಅದೇ, ಪು. ೪೬.

೬೬. ಅದೇ, ಪು. ೪೬. ೬೭. ಅದೇ, ಪು. ೫೮. ೬೮. ಅದೇ, ಪು. ೫೮. ೬೯. ಅದೇ, ಪು. ೪೬.

೭೦. ವೀರಭದ್ರಯ್ಯ (ಸಂ.) ಪೂರ್ವೋಕ್ತ ಪು. ೬೨. ೭೨. ಅದೇ, ಪು. ಪು. ೨೧೫, ೨೧೬.

೭೫. ಅದೇ, ಪು. ಪು. ೧೬೯. ೭೬. ಅದೇ, ಪು. ೧೬೯. ೭೭. ಅದೇ, ಪು. ೧೭೦.

೭೮. ಅದೇ, ಪು. ೨೧೫. ೭೯. ಅದೇ, ಪು. ೨೬೨. ೮೦. ಅದೇ, ಪು. ೨೬೨.

೮೧. ಅದೇ, ಪು. ೨೬೬. ೮೨. ಅದೇ, ಪು. ೪೫೦. ೮೩. ಅದೇ, ಪು. ೪೫೧.

೮೪. ಟಿ.ಎನ್. ಮಹದೇವಯ್ಯನವರ ಕವಿತೆಗಳ ಲೋಕದಲ್ಲಿ (ಸಂ.) ಪ್ರೊ ಜಿ.ಎಸ್.ಸಿದ್ಧಲಿಂಗಯ್ಯ, ಟಿ.ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲೆ, ಮಹದೇವಶ್ರೀ, ತುಮಕೂರು, ೨೦೦೧, ಪು. ೨೩.

೮೫. ವೀರಭದ್ರಯ್ಯ (ಸಂ.) ಟಿ. ಎನ್. ಮಹದೇವಯ್ಯನವರ ಸಮಗ್ರಕಾವ್ಯ, ಪು. ೩೨೭.

೮೬. ಅದೇ, ಪು. ೩೩೦. ೮೭. ಅದೇ, ಪು. ೩೩೦. ೮೮. ಅದೇ, ಪು. ೩೩೪. ೮೯. ಅದೇ, ಪು. ೩೩೪.

೯೦. ಅದೇ, ಪು. ೪. ೯೧. ಅದೇ, ಪು. ೪. ೯೨. ಅದೇ, ಪು. ೫. ೯೩. ಅದೇ, ಪು. ೫.

೯೪. ಅದೇ, ಪು. ೬. ೯೫. ಅದೇ, ಪು. ೭. ೯೬. ಅದೇ, ಪು. ೭.

೯೭. ಪ್ರೊ. ಅ.ರಾ.ಮಿತ್ರ (ಸಂ.) ಪೂರ್ವೋಕ್ತ, ಪು. ೯೩. ೯೮. ಅದೇ, ಪು. ೯೪.

೯೯. ವೀರಭದ್ರಯ್ಯ, ಟಿ.ಎನ್. ಮಹದೇವಯ್ಯನವರ ಸಮಗ್ರಕಾವ್ಯ, ಟಿ.ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲೆ, ಮಹದೇವಶ್ರೀ, ತುಮಕೂರು, ಪು. ೧೭, ೧೮.

೧೦೦. ಅದೇ, ಪು. ೨೦.

೧೦೧. ಪ್ರೊ. ಅ.ರಾ.ಮಿತ್ರ (ಸಂ.) ಟಿ.ಎನ್. ಮಹದೇವಯ್ಯನವರ ಆಯ್ದ ಕವನಗಳು, ಪು. ೫.

೧೦೨. ಅದೇ, ಪು. ೫.    ೧೦೩. ಅದೇ, ಪು. ೬.    ೧೦೪. ಅದೇ, ಪು. ೭.    ೧೦೫. ಅದೇ, ಪು. ೭.

೧೦೬. ಅದೇ, ಪು. ೭.    ೧೦೭. ಅದೇ, ಪು. ೮.

೧೦೮. ವೀರಭದ್ರಯ್ಯ (ಸಂ.) ಟಿ.ಎನ್. ಮಹದೇವಯ್ಯನವರ ಸಮಗ್ರ ಕಾವ್ಯ, ಪು. ೨೮.

೧೦೯. ಅದೇ, ಪು. ೨೯.    ೧೧೦. ಅದೇ, ಪು. ೨೯.

೧೧೧. ಪ್ರೊ. ಅ.ರಾ.ಮಿತ್ರ, (ಸಂ.) ಪೂರ್ವೋಕ್ತ ಪು. ೮೬.

೧೧೨. ಅದೇ, ಪು. ೮೭.    ೧೧೩. ಅದೇ, ಪು. ೮೭, ೮೮.    ೧೧೪. ಅದೇ, ಪು. ೮೯, ೯೦.

೧೧೫. ವೀರಭದ್ರಯ್ಯ (ಸಂ.) ಟಿ.ಎನ್. ಮಹದೇವಯ್ಯನವರ ಸಮಗ್ರ ಕಾವ್ಯ, ಪು. ೩೮, ೪೧.

೧೧೭. ಅದೇ, ಪು. ೯೬.    ೧೧೮. ಅದೇ, ಪು. ೮೯.    ೧೧೯. ಅದೇ, ಪು. ೧೧೬.

೧೨೦. ಅದೇ, ಪು. ೨೦೧.    ೧೨೧. ಅದೇ, ಪು. ೨೦೧.

೧೨೨. ವೀರಭದ್ರಯ್ಯ (ಸಂ.) ಸಮಗ್ರ ಕಾವ್ಯ, ಪು. ೩೮, ೮೧.

೧೨೩. ಅದೇ, ಪು. ೮೧.    ೧೨೪. ಅದೇ, ಪು. ೮೧.

೧೨೫. ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ (ಸಂ.) ಟಿ.ಎನ್. ಮಹದೇವಯ್ಯನವರ ಕವಿತೆಗಳ ಲೋಕದಲ್ಲಿ, ಟಿ.ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲೆ, ತುಮಕೂರು, ೨೦೦೧, ಪು. ೩೧.

೧೨೬. ಅದೇ, ಪು. ೩೨.

೧೨೭. ಪ್ರೊ. ಅ.ರಾ.ಮಿತ್ರ (ಸಂ.) ಟಿ.ಎನ್. ಮಹದೇವಯ್ಯನವರ ಆಯ್ದ ಕವನಗಳು, ಪುಟ ೮೪.

೧೨೮. ಅದೇ, ಪು. ೮೫, ೮೬.    ೧೨೯. ಅದೇ, ಪು. ೮೬.    ೧೩೦. ಅದೇ, ಪು. ೯೧.

೧೩೧. ಅದೇ, ಪು. ೯೧, ೯೨.    ೧೩೨. ಅದೇ, ಪು. ೯೨.    ೧೩೩. ಅದೇ, ಪು. ೯೨.

೧೩೪. ವೀರಭದ್ರಯ್ಯ (ಸಂ.) ಸಮಗ್ರಕಾವ್ಯ ಪು. ೨೪೮.

೧೩೫. ಅದೇ, ಪು. ೩೬.    ೧೩೬. ಅದೇ, ಪು. ೩೭.

೧೩೭.ಅ.ರಾ.ಮಿತ್ರ (ಸಂ.) ಆಯ್ದಕವನಗಳು, ಪು. ೯೫.

೧೩೮. ಅದೇ, ಪು. ೧೬೬, ೧೬೭.    ೧೩೯. ಅದೇ, ಪು. ೧೬೫.    ೧೪೦. ಅದೇ, ಪು. ೧೬೮.

೧೪೧. (ಸಂ.) ವೀರಭದ್ರಯ್ಯ ಸಮಗ್ರಕಾವ್ಯ, ಪು. ೩೬೪.

೧೪೨. ಅದೇ, ಪು. ೧೮೩.    ೧೪೩. ಅದೇ, ಪು. ೧೮೩.    ೧೪೪. ಅದೇ, ಪು. ೧೮೩.

೧೪೫. ಅದೇ, ಪು. ೧೮೮.    ೧೪೬. ಅದೇ, ಪು. ೧೮೮.    ೧೪೭. ಅದೇ, ಪು. ೧೮೭.

೧೪೮. ಅದೇ, ಪು. ೧೮೮.

೧೪೯. ಪ್ರೊ. ಅ.ರಾ.ಮಿತ್ರ, (ಸಂ) ಪೂರ್ವೋಕ್ತ, ಪು. ೭೨.

೧೫೦. ಅದೇ, ಪು. ೭೨-೭೩.    ೧೫೧. ಅದೇ, ಪು. ೭೩.

೧೫೨. ವೀರಭದ್ರಯ್ಯ (ಸಂ.) ಟಿ.ಎನ್. ಮಹದೇವಯ್ಯನವರ ಸಮಗ್ರಕಾವ್ಯ, ಪು, ೧೯೬, ೧೯೭.

೧೫೩. ಅದೇ, ಪು. ೧೯೮.    ೧೫೪. ಅದೇ, ಪು. ೧೮೯.

೧೫೫. ಪ್ರೊ. ಅ.ರಾ.ಮಿತ್ರ, (ಸಂ.) ಪೂರ್ವೋಕ್ತ, ಪು. ೧೩೭.

೧೫೬. ಅದೇ, ಪು. ೧೩೭, ೧೩೮.    ೧೫೭. ಅದೇ, ಪು. ೬೨.    ೧೫೮. ಅದೇ, ಪು. ೬೩.

೧೫೯. ಅದೇ, ಪು. ೬೪.    ೧೬೦. ಅದೇ, ಪು. ೬೬.    ೧೬೧. ಅದೇ, ಪು. ೬೬.

೧೬೨. ಅದೇ, ಪು. ೬೮.    ೧೬೩. ಅದೇ, ಪು. ೬೮, ೬೯.    ೧೬೪. ಅದೇ, ಪು. ೬೮

೧೬೫. ಅದೇ, ಪು. ೬೯.    ೧೬೬. ಅದೇ, ಪು. ೭೨.    ೧೬೭. ಅದೇ, ಪು. ೭೦.

೧೬೮. ಅದೇ, ಪು. ೭೦. ೧೬೯. ಅದೇ, ಪು.೬೯. ೧೭೦. ಅದೇ, ಪು. ೭೪.

೧೭೧. ಅದೇ, ಪು. ೧೦೧.

೧೭೩. ವೀರಭದ್ರಯ್ಯ (ಸಂ.) ಪೂರ್ವೋಕ್ತ, ಪು. ೭೦.

೧೭೪. ಅದೇ, ಪು. ೭೧. ೧೭೫. ಅದೇ, ಪು. ೭೧. ೧೭೬. ಅದೇ, ಪು. ೭೭.

೧೭೭. ಅದೇ, ಪು. ೭೮ ೧೭೮. ಅದೇ, ಪು. ೭೮. ೧೭೯. ಅದೇ, ಪು. ೭೮.

೧೮೦. ಅದೇ, ಪು. ೭೮. ೧೮೧. ಅದೇ, ಪು. ೭೯.

೧೮೨. ಅ.ರಾ. ಮಿತ್ರ (ಸಂ.) ಟಿ.ಎನ್. ಮಹದೇವಯ್ಯನವರ ಆಯ್ದ ಕವನಗಳು, ಪುಟ. ೧೦೮, ೧೦೯.

೧೮೩. ಅದೇ, ಪು. ೧೧೦, ೧೧೧.

೧೮೪. ಅ.ರಾ.ಮಿತ್ರ (ಸಂ.) ಪೂರ್ವೋಕ್ತ, ಟಿ.ಎನ್. ಮಹದೇವಯ್ಯನವರ, ಸ್ಮಾರಕ ಗ್ರಂಥಮಾಲೆ, ತುಮಕೂರು, ೨೦೦೧, ಪು. ೮೮.

೧೮೫. ಅದೇ, ಪು. ೮೮. ೧೮೬. ಅದೇ, ಪು. ೮೮. ೧೮೭. ಅದೆ, ಪು. ೮೮. ೧೮೮. ಅದೆ, ಪು. ೯೦.

೧೮೯. ಅದೆ, ಪು. ೯೦. ೧೯೦. ಅದೆ, ಪು. ೯೧. ೧೯೧. ಅದೆ, ಪು. ೯೧. ೧೯೨. ಅದೆ, ಪು. ೯೧.

೧೯೩. ಅದೆ, ಪು. ೯೨. ೧೯೪. ಅದೆ, ಪು. ೯೩. ೧೯೫. ಅದೆ, ಪು. ೯೩. ೧೯೬. ಅದೇ, ಪು. ೧೦೧.

೧೯೭. ಅ.ರಾ. ಮಿತ್ರ (ಸಂ.) ಟಿ.ಎನ್. ಮಹದೇವಯ್ಯನವರ ಆಯ್ದ ಕವನಗಳು, ಪು. ೧೮೭.

೧೯೮. ಅದೇ, ಪು. ೧೯೧. ೧೯೯. ಅದೇ, ಪು. ೧೯೩. ೨೦೦. ಅದೇ, ಪು. ೧೯೪.

೨೦೨. ಅದೇ, ಪು. ೧೩೭, ೧೪೩. ೨೦೩. ಅದೇ, ಪು. ೧೩೮. ೨೦೪. ಅದೇ, ಪು. ೧೩೮.

೨೦೫. ಅದೇ, ಪು. ೧೩೮. ೨೦೬. ಅದೇ, ಪು. ೧೪೦. ೨೦೭. ಅದೇ, ಪು. ೧೪೧.

೨೦೮. ಡಾ.ಕೆ. ಅನಂತರಾಮು, ಟಿ.ಎನ್. ಮಹದೇವಯ್ಯನವರ ಕವಿತೆಗಳ ಲೋಕದಲ್ಲಿ, ಟಿ.ಎನ್. ಮಹದೇವಯ್ಯನವರ, ಸ್ಮಾರಕ ಗ್ರಂಥಮಾಲೆ, ತುಮಕೂರು, ೨೦೦೧, ಪು. ೧೫.

೨೦೯. ಅದೇ, ಪು. ೧೬. ೨೧೦. ಅದೇ, ಪು. ೧೧. ೨೧೧. ಅದೇ, ಪು. ೧೪. ೨೧೨. ಅದೇ, ಪು. ೧೫.

೨೧೩. ಅದೇ, ಪು. ೧೫. ೨೧೪. ಅದೇ, ಪು. ೧೨. ೨೧೫. ಅದೇ, ಪು. ೧೫. ೨೧೬. ಅದೇ, ಪು. ೧೫.

೨೧೭. ಅದೇ, ಪು. ೧೨. ೨೧೮. ಅದೇ, ಪು. ೧೫, ೧೬. ೨೧೯. ಅದೇ, ಪು. ೧೬.

೨೨೦. ಅದೇ, ಪು. ೧೬.

೨೨೧. ಪ್ರೊ. ಅ.ರಾ. ಮಿತ್ರ (ಸಂ.) ಟಿ. ಎನ್. ಮಹದೇವಯ್ಯನವರ ಆಯ್ದ ಕವನಗಳು, ಪು. ೧೫೭.

೨೨೨. ಅದೇ, ಪು. ೧೪೭. ೨೨೩. ಅದೇ, ಪು. ೧೪೮. ೨೨೪. ಅದೇ, ಪು. ೧೪೮, ೧೪೯.

೨೨೫. ಅದೇ, ಪು. ೧೫೧. ೨೨೬. ಅದೇ, ಪು. ೧೫೨. ೨೨೭. ಅದೇ, ಪು. ೧೫೨.

೨೨೮. ಅದೇ, ಪು. ೧೫೩. ೨೨೯. ಅದೇ, ಪು. ೧೫೩. ೨೩೦. ಅದೇ, ಪು. ೧೫೩.

೨೩೧. ಅದೇ, ಪು. ೧೫೩. ೨೩೨. ಅದೇ, ಪು. ೧೫೪. ೨೩೩. ಅದೇ, ಪು. ೧೫೫.

೨೩೪. ಅದೇ, ಪು. ೧೬೧. ೨೩೫. ಅದೇ, ಪು. ೧೬೧. ೨೩೬. ಅದೇ, ಪು. ೧೫೫.

೨೩೭. ಡಾ. ಸಿ.ಪಿ. ಕೃಷ್ಣಕುಮಾರ್, ಟಿ.ಎನ್. ಮಹದೇವಯ್ಯನವರ ಕವನಗಳ ಲೋಕದಲ್ಲಿ, ಟಿ.ಎನ್. ಮಹದೇವಯ್ಯನವರ, ಸ್ಮಾರಕ ಗ್ರಂಥಮಾಲೆ, ೨೦೦೧, ಪು. ೭೯.

೨೩೮. ಅದೇ, ಪು. ೮೦. ೨೩೯. ಅದೇ, ಪು. ೭೮. ೨೪೦. ಅದೇ, ಪು. ೭೮.

೨೪೧. ಅದೇ, ಪು. ೭೮. ೨೪೨. ಅದೇ, ಪು. ೮೪. ೨೪೩. ಅದೇ, ಪು. ೮೨.

೨೪೪. ಅದೇ, ಪು. ೮೩. ೨೪೫. ಅದೇ, ಪು. ೮೩. ೨೪೬. ಅದೇ, ಪು. ೮೪.

೨೪೭. ಪ್ರೊ. ಅ.ರಾ.ಮಿತ್ರ (ಸಂ.) ಟಿ. ಎನ್. ಮಹದೇವಯ್ಯನವರ ಆಯ್ದ ಕವನಗಳು, ಪು. ೧೭೫

೨೪೮. ಡಾ. ಮಳಲಿ ವಸಂತಕುಮಾರ, ಟಿ.ಎನ್. ಮಹದೇವಯ್ಯನವರ, ಕವಿತೆಗಳ ಲೋಕದಲ್ಲಿ, ಪು. ೮೭.

೨೪೯. ಅದೇ, ಪು. ೮೭.

೨೫೦. ಪ್ರೊ. ಅ.ರಾ. ಮಿತ್ರ (ಸಂ.) ಟಿ. ಎನ್. ಮಹದೇವಯ್ಯನವರ ಆಯ್ದ ಕವನಗಳು, ಪು. ೧೬೯.

೨೫೧. ಅದೇ, ಪು.೧೬೯. ೨೫೨. ಅದೇ, ಪು. ೧೭೦. ೨೫೩. ಅದೇ, ಪು. ೧೭೧.

೨೫೪. ಅದೇ, ಪು. ೧೮೧. ೨೫೫. ಅದೇ, ಪು. ೧೮೦. ೨೫೬. ಅದೇ, ಪು. ೧೮೦.

೨೫೭. ಅದೇ, ಪು. ೧೮೦. ೨೫೮. ಅದೇ, ಪು. ೧೮೦, ೧೮೧. ೨೫೯. ಅದೇ, ಪು. ೨೨೬.

೨೬೦. ಅದೇ, ಪು. ೧೮೪. ೨೬೧. ಅದೇ, ಪು. ೧೮೫. ೨೬೨. ಅದೇ, ಪು. ೧೯೬.

೨೬೩. ಅದೇ, ಪು. ೧೯೭. ೨೬೪. ಅದೇ, ಪು. ೨೩೦.

೨೬೫. ಅದೇ, ಪು. ೨೧೪, ೨೧೫. ೨೬೬. ಅದೇ, ಪು. ೨೧೬.

೨೬೭. ಪ್ರೊ. ಅ.ರಾ. ಮಿತ್ರ (ಸಂ.) ಟಿ. ಎನ್. ಮಹದೇವಯ್ಯನವರ ಆಯ್ದ ಕವನಗಳು, ಪು. ೨೧೮.

೨೬೮. ಡಾ. ವಿಜಯಾ ಸುಬ್ಬರಾಜ್, ಟಿ.ಎನ್. ಮಹದೇವಯ್ಯನವರ ಕವಿತೆಗಳ ಲೋಕದಲ್ಲಿ, ೨೦೦೧, ಪು. ೧೧೧.

೨೬೯. ಅದೇ, ಪು. ೧೦೪. ೨೭೦. ಅದೇ, ಪು. ೧೧೦.

೨೭೧. ಡಾ. ರಾಮೇಗೌಡ, ಟಿ.ಎನ್. ಮಹದೇವಯ್ಯನವರ, ಕವಿತೆಗಳ ಲೋಕದಲ್ಲಿ ಪು. ೧೪೬.

೨೭೨. ಅದೇ, ಪು. ೧೪೫.

೨೭೫. ಬಿ. ವೀರಭದ್ರಯ್ಯ(ಸಂ.) ಟಿ. ಎನ್. ಮಹದೇವಯ್ಯನವರ ಸಮಗ್ರ ಕಾವ್ಯ, ಪು. ೪೪೦.

೨೭೬. ಅದೇ, ಪು. ೪೪೧. ೨೭೭. ಅದೇ, ಪು. ೪೪೧.

೨೭೮. ಪ್ರೊ. ಅ.ರಾ. ಮಿತ್ರ (ಸಂ.) ಟಿ. ಎನ್. ಮಹದೇವಯ್ಯನವರ ಆಯ್ದಕವನಗಳು, ಪು. ೨೨೪

೨೭೯. ಅದೇ, ಪು. ೨೩೫, ೨೩೬. ೨೮೦. ಅದೇ, ಪು. ೨೨೫.

೨೮೧. ಬಿ. ವೀರಭದ್ರಯ್ಯ (ಸಂ.) ಟಿ. ಎನ್. ಮಹದೇವಯ್ಯನವರ ಸಮಗ್ರ ಕಾವ್ಯ, ಪು. ೪೦೩, ೪೦೪.

೨೮೨. ಡಾ. ಎಸ್.ಎಂ. ವೃಷಭೇಂದ್ರಸ್ವಾಮಿ, ಭಾರದಹುಟ್ಟು, ಟಿ.ಎನ್. ಮಹದೇವಯ್ಯನವರ, ಕವಿತೆಗಳ ಲೋಕದಲ್ಲಿ, ಪು. ೭೦.

೨೮೩. ಅದೇ, ಪು. ೬೮. ೨೮೪. ಅದೇ, ಪು. ೭೧. ೨೮೫. ಅದೇ, ಪು. ೭೧.

೨೮೬. ಅದೇ, ಪು. ೭೨. ೨೮೭. ಅದೇ, ಪು. ೭೨.

೨೮೮. ಪ್ರೊ. ಅ.ರಾ. ಮಿತ್ರ, (ಸಂ.) ಆಯ್ದಕವನಗಳು, ಪು. ೨೪೪.

೨೮೯. ಅದೇ, ಪು. ೨೪೪. ೨೯೦. ಅದೇ, ಪು. ೨೪೧.

## ೪. ಮಹದೇವಯ್ಯನವರ ನಾಟಕಗಳು

೧. ಡಾ.ಬಿ.ಎಸ್. ಸ್ವಾಮಿ : ಬಾನುಲಿ ರೂಪಾಂತರಗಳು, ನಾಟಕಗಳು ಹಾಗೂ ರೂಪಕಗಳು, ೨ನೇ ಅಡ್ಡರಸ್ತೆ, ಮುನೇಶ್ವರ ಬ್ಲಾಕ್, ರಾಜಮಹಲ್ ಗುಟ್ಟಹಳ್ಳಿ, ಬೆಂಗಳೂರು- ೩, ೨೦೦೭.

೨. ಗೊ.ರು. ಚೆನ್ನಬಸಪ್ಪ, ಗುಪ್ತಗಂಗಾ-ಸ್ಮರಣ ಸಂಪುಟ, ಟಿ.ಎನ್. ಮಹದೇವಯ್ಯರವರ 'ವಿಜಯಶ್ರೀ' ಟಿ.ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲೆ, ತುಮಕೂರು, ೧೯೭೮, ಪು. ೧೧೩.

೩. ಅದೇ, ಪು. ೧೧೪ ೪. ಅದೇ, ಪು. ೧೧೪. ೫. ಅದೇ, ಪು. ೧೧೫.

೬. ಅದೇ, ಪು. ೧೧೫. ೭. ಅದೇ, ಪು. ೧೧೬. ೮. ಅದೇ, ಪು. ೧೧೬.

೯. ಹೆಚ್.ವಿ. ವೀರಭದ್ರಯ್ಯ, ಗುಪ್ತಗಂಗಾ -ಸ್ಮರಣ ಸಂಪುಟ, ನೀಲಾಂಬಿಕೆ, ಟಿ.ಎನ್. ಮಹದೇವಯ್ಯ ಸ್ಮಾರಕ ಗ್ರಂಥಮಾಲೆ ತುಮಕೂರು-೧೯೭೮, ಪು. ೧೧೯.

೧೦. ಅದೇ, ಪು. ೧೨೦.   ೧೧. ಅದೇ, ಪು. ೧೨೦.   ೧೨. ಅದೇ, ಪು. ೧೨೧.

೧೩. ಅದೇ, ಪು. ೧೨೧.   ೧೪. ಅದೇ, ಪು. ೧೨೧, ೧೨೨.

೧೫. ಗೂ.ರು. ಚನ್ನಬಸಪ್ಪ, ಗುಪ್ತಗಂಗಾ-ಸ್ಮರಣ ಸಂಪುಟ, ಟಿ.ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲೆ, ತುಮಕೂರು, ೧೯೭೮, ಪು. ೧೧೮.

೧೬. ಅದೇ, ಪು. ೧೧೮.

೧೭. ಮು.ಕಾ. ಜಯದೇವ್, ಗುಪ್ತಗಂಗಾ -ಸ್ಮರಣ ಸಂಪುಟ, ಟಿ.ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲೆ, ತುಮಕೂರು, ೧೯೭೮, ಪು. ೨೨೨.

೧೮. ಅದೇ, ಪು. ೨೨೩.   ೧೯. ಅದೇ, ಪು. ೨೨೪.   ೨೦. ಅದೇ, ಪು. ೨೨೪.

೨೧. ಅದೇ, ಪು. ೨೨೫.   ೨೨. ಅದೇ, ಪು. ೨೧೫.   ೨೩. ಅದೇ, ಪು. ೨೧೬.

೨೪. ಅದೇ, ಪು. ೨೧೭.   ೨೫. ಅದೇ, ಪು. ೨೨೦.   ೨೬. ಅದೇ, ಪು. ೨೨೦.

೨೭. ಎಸ್. ಗಾಯತ್ರಿದೇವಿ, ಗುಪ್ತಗಂಗಾ-ಸ್ಮರಣ ಸಂಪುಟ, ತಲೆಗಡುಕರು, ಟಿ.ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲೆ, ೧೯೭೮, ಪು. ೨೨೯.

೨೮. ಅದೇ, ಪು. ೨೨೯.   ೨೯. ಅದೇ, ಪು. ೨೨೯.   ೩೦. ಅದೇ, ಪು. ೨೩೦.

೩೧. ಅದೇ, ಪು. ೨೩೦.   ೩೨. ಅದೇ, ಪು. ೨೩೦, ೨೩೧.   ೩೩. ಅದೇ, ಪು. ೨೩೧.

೩೪. ಅದೇ, ಪು. ೨೩೧.   ೩೫. ಅದೇ, ಪು. ೨೩೧.   ೩೬. ಅದೇ, ಪು. ೨೩೨.

೩೭. ಅದೇ, ಪು. ೨೩೨.   ೩೮. ಅದೇ, ಪು. ೨೩೨

೩೯. ಅದೇ, ಪು. ೨೩೨.   ೪೦. ಅದೇ, ಪು. ೨೩೨, ೨೩೩.

## ೫. ಮಹದೇವಯ್ಯನವರ ವಿಮರ್ಶಾ ಕೃತಿಗಳು

೧. ಎಸ್. ವಿದ್ಯಾಶಂಕರ, ವಿಮರ್ಶಾ ಲೇಖನಗಳು, ಗುಪ್ತಗಂಗಾ-ಸ್ಮರಣ ಸಂಪುಟ, ಟಿ.ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲೆ, ತುಮಕೂರು, ೧೯೭೮, ಪು. ೨೩೪.

೨. ಎಂ.ಜಿ. ನಂಜುಂಡಾರಾಧ್ಯ, ಬಸವ ಪ್ರತಿಜ್ಞಾ, ಗುಪ್ತಗಂಗಾ -ಸ್ಮರಣ ಸಂಪುಟ, ಟಿ.ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲೆ, ತುಮಕೂರು, ೧೯೭೮, ಪು. ೧೨೫.

೩. ಅದೇ, ಪು. ೧೨೬.   ೪. ಅದೇ, ಪು. ೧೨೬.   ೫. ಅದೇ, ಪು. ೧೨೬.

೬. ಅದೇ, ಪು. ೧೨೭.   ೭. ಅದೇ, ಪು. ೧೨೭.

೮. ಅದೇ, ಪು. ೧೨೭.   ೯. ಅದೇ, ಪು. ೧೨೮.

೧೦. ಕೆ.ವೈ. ಶಿವಕುಮಾರ್: ಭರತೇಶ ವೈಭವ ಒಂದು ವಿಮರ್ಶೆಯ ಒಂದು ವಿಮರ್ಶೆ, ಗುಪ್ತಗಂಗಾ-ಸ್ಮರಣ ಸಂಪುಟ, ೧೯೭೮, ಪು. ೧೭೮.

೧೧. ಅದೇ, ಪು. ೧೭೯.   ೧೨. ಅದೇ, ಪು. ೧೭೯.   ೧೩. ಅದೇ, ಪು. ೧೮೦.

೧೪. ಅದೇ, ಪು. ೧೮೦.   ೧೫. ಅದೇ, ಪು. ೧೮೧.   ೧೬. ಅದೇ, ಪು. ೧೮೨.

೧೭. ಅದೇ, ಪು. ೧೮೨.   ೧೮. ಅದೇ, ಪು. ೧೮೨.   ೧೯. ಅದೇ, ಪು. ೧೮೨.

೨೦. ಅದೇ, ಪು. ೧೮೩.   ೨೧. ಅದೇ, ಪು. ೧೮೩.   ೨೨.ಅದೇ, ಪು. ೧೮೩.

೨೩. ಅದೇ, ಪು. ೧೮೩.   ೨೪. ಅದೇ, ಪು. ೧೮೪.   ೨೫. ಅದೇ, ಪು. ೧೮೪.

೨೬. ಅದೇ, ಪು. ೧೮೪.   ೨೭. ಅದೇ, ಪು. ೧೮೪, ೧೮೫.   ೨೮. ಅದೇ, ಪು. ೧೮೫.

೨೯. ಅದೇ, ಪು. ೧೮೫.   ೩೦. ಅದೇ, ಪು. ೧೮೫.   ೩೧. ಅದೇ, ಪು. ೧೮೫.

೩೨. ಅದೇ, ಪು. ೧೮೬.   ೩೩. ಅದೇ, ಪು. ೧೮೬.   ೩೪. ಅದೇ, ಪು. ೧೮೬, ೧೮೭.

೩೫. ಅದೇ, ಪು. ೧೮೬. ೩೬. ಅದೇ, ಪು. ೧೮೭. ೩೭. ಅದೇ, ಪು. ೧೮೭. ೩೮. ಅದೇ, ಪು. ೧೮೭. ೩೯. ಅದೇ, ಪು. ೧೮೭. ೪೦. ಅದೇ, ಪು. ೧೮೭. ೪೧. ಅದೇ, ಪು. ೧೮೮.

೪೨. ಟಿ.ಎನ್. ಮಹದೇವಯ್ಯ, ಭರತೇಶವೈಭವ-ಒಂದು ವಿಮರ್ಶೆ, ಟಿ.ಎನ್. ಮಹದೇವಯ್ಯನವರ ಸ್ಮಾರಕಮಾಲೆ, ತುಮಕೂರು, ೧೯೭೫, ಪು. ೪೬.

೪೩. ಶಿವಕುಮಾರ್, ಗುಪ್ತಗಂಗಾ-ಸ್ಮರಣ ಸಂಪುಟ, ಪು. ೧೮೮.

೪೪. ಅದೇ, ಪು. ೧೮೮. ೪೫. ಅದೇ, ಪು. ೧೮೮.

೪೬. ಟಿ.ಎನ್. ಮಹದೇವಯ್ಯ, ಭರತೇಶವೈಭವ-ಒಂದು ವಿಮರ್ಶೆ, ಟಿ.ಎನ್. ಮಹದೇವಯ್ಯನವರ, ಸ್ಮಾರಕಮಾಲೆ, ೧೯೭೫, ಪು. ೮೮.

೪೮. ವೀರಭದ್ರಯ್ಯ, ಎಸ್. ವಿದ್ಯಾಶಂಕರ (ಸಂ.) ಟಿ. ಎನ್. ಮಹದೇವಯ್ಯನವರ ಗುಪ್ತಗಂಗಾ ಸ್ಮರಣ ಸಂಪುಟ, ಪು. ೧೮೮.

೪೯. ಟಿ.ಎನ್. ಮಹದೇವಯ್ಯ, ಭರತೇಶವೈಭವ-ಒಂದು ವಿಮರ್ಶೆ, ಟಿ.ಎನ್. ಮಹದೇವಯ್ಯನವರ, ಸ್ಮಾರಕ ಗ್ರಂಥಮಾಲೆ, ೧೯೭೫, ಪು. ೭೯.

೫೦. ವೀರಭದ್ರಯ್ಯ, ಎಸ್. ವಿದ್ಯಾಶಂಕರ (ಸಂ.) ಗುಪ್ತಗಂಗಾ, ಸ್ಮರಣ ಸಂಪುಟ, ಟಿ. ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲೆ, ತುಮಕೂರು, ಪು. ೧೮೮.

೫೧. ಅದೇ, ಪು. ೧೮೯. ೫೨. ಅದೇ, ಪು. ೧೮೯.

## ೬. ಮಹದೇವಯ್ಯನವರ ಕಾದಂಬರಿಗಳು

೧. ನಜೀರ್ ಅಹಮದ್, ಗುಪ್ತಗಂಗಾ-ಸ್ಮರಣ ಸಂಪುಟ, ಟಿ.ಎನ್. ಮಹದೇವಯ್ಯರವರ ಸ್ಮಾರಕ ಗ್ರಂಥಮಾಲೆ. ತುಮಕೂರು, ೧೯೭೮, ಪು. ೨೦೮.

೨. ಎಚ್.ಜಿ. ಸಣ್ಣಗುಡ್ಡಯ್ಯ, ಗುಪ್ತಗಂಗಾ-ಸ್ಮರಣ ಸಂಪುಟ, ಪು. ೨೦೦.

೩. ಅದೇ, ಪು. ೨೦೪. ೪. ಅದೇ, ಪು. ೨೦೪, ೨೦೫. ೫. ಅದೇ, ಪು. ೨೦೫, ೨೦೬.

೬. ಅದೇ, ಪು. ೨೦೭.

೭. ನಜೀರ್ ಅಹಮದ್, ಗುಪ್ತಗಂಗಾ-ಸ್ಮರಣ ಸಂಪುಟ, ಪು. ೨೧೦.

೮. ಅದೇ, ಪು. ೨೧೦. ೯. ಅದೇ, ಪು. ೨೧೦.

೧೦. ಅದೇ, ಪು. ೨೧೧, ೨೧೨.

೧೧. ಎಸ್.ಜಿ. ಸಿದ್ಧರಾಮಯ್ಯ ಗುಪ್ತಗಂಗಾ-ಸ್ಮರಣ ಸಂಪುಟ, ಪು. ೧೯೭.

೧೨. ಅದೇ, ಪು. ೧೯೭, ೧೯೮. ೧೩. ಅದೇ, ಪು. ೧೯೮. ೧೪. ಅದೇ, ಪು. ೧೯೯.

## ೭. ಮಹದೇವಯ್ಯನವರ ಕಗಾವ ಮಂತ್ರವಾಣಿ

೧. ವಿ. ವೀರಭದ್ರಯ್ಯ, ಎಸ್. ವಿದ್ಯಾಶಂಕರ (ಸಂ) ಗುಪ್ತಗಂಗಾ ಸ್ಮರಣ ಸಂಪುಟ, ಟಿ.ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲಾ, ಮಹದೇವಶ್ರೀ ವಿನೋಬನಗರ, ತುಮಕೂರು, ೧೯೭೮, ಪು. ೧೭೧.

೨. ಅದೇ, ಪು. ೧೭೨ ೩. ಅದೇ, ಪು. ೧೭೨. ೪. ಅದೇ, ಪು. ೧೭೨, ೧೭೩.

೫. ಅದೇ, ಪು. ೧೭೩. ೬. ಅದೇ, ಪು. ೧೭೩. ೭. ಅದೇ, ಪು. ೧೭೩.

೮. ಅದೇ, ಪು. ೧೭೩, ೧೭೪. ೯. ಅದೇ, ಪು. ೧೭೪. ೧೦. ಅದೇ, ಪು. ೧೭೪.

೧೧. ಅದೇ, ಪು. ೧೭೫. ೧೨. ಅದೇ, ಪು. ೧೭೫.

೧೩. ಟಿ.ಎನ್ ಮಹದೇವಯ್ಯ ಕಗಾವ ಮಂತ್ರವಾಣಿ, ಟಿ.ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲಾ, ಮಹದೇವಶ್ರೀ ವಿನೋಬನಗರ, ತುಮಕೂರು, ೧೯೯೩, ಪು.

೧೪. ವೀರಭದ್ರಯ್ಯ, ಎಸ್. ವಿದ್ಯಾಶಂಕರ (ಸಂ.) ಗುಪ್ತಗಂಗಾ-ಸ್ಮರಣ ಸಂಪುಟ, ಟಿ.ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲಾ, ಮಹದೇವಶ್ರೀ, ವಿನೋಬನಗರ, ತುಮಕೂರು, ೧೯೭೮, ಪು. ೧೭೬.

೧೫. ಅದೇ, ಪು. ೧೭೬. ೧೬. ಅದೇ, ಪು. ೧೭೬. ೧೭. ಅದೇ, ಪು. ೧೭೬, ೧೭೭.

೧೮. ಅದೇ, ಪು. ೧೭೭.    ೧೯. ಅದೇ, ಪು. ೧೭೭.

## ೮. ಮಹದೇವಯ್ಯನವರ ವಚನಗಳು

೧. ಬಿ. ವೀರಭದ್ರಯ್ಯ, ಟಿ.ಎಂ. ಮಂಜುನಾಥ್ (ಸಂ), ಟಿ.ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲಾ, ಮಹದೇವಶ್ರೀ ವಿನೋಬನಗರ, ತುಮಕೂರು, ೧೯೭೧, ವಚನ. ೨೩.

೨. ಡಾ. ಸಂಗಮೇಶ ಹಂಡಗಿ, ಲಲಿತಾರವಿಂದ ; ಪ್ರೊ. ವೀರೇಂದ್ರ ಸಿಂಪಿಯವರ ಅಭಿನಂದನ ಗ್ರಂಥ, ೨೦೦೭.

೩. ಡಾ. ಸಂಗಮೇಶ ಹಂಡಗಿ, ಲಲಿತಾರವಿಂದ ; ಪ್ರೊ. ವೀರೇಂದ್ರ ಸಿಂಪಿಯವರ ಅಭಿನಂದನ ಗ್ರಂಥ, ೨೦೦೭.

೪. ಡಾ. ಸಂಗಮೇಶ ಹಂಡಗಿ, ಲಲಿತಾರವಿಂದ ; ಪ್ರೊ. ವೀರೇಂದ್ರ ಸಿಂಪಿಯವರ ಅಭಿನಂದನ ಗ್ರಂಥ, ೨೦೦೭.

೫. ಡಾ. ಹೆಚ್. ತಿಪ್ಪೇರುದ್ರಸ್ವಾಮಿ, ವಚನಕಾರ ಮಹದೇವಯ್ಯನವರು ಪು. ೫.

೬. ಬಿ. ವೀರಭದ್ರಯ್ಯ, ಟಿ.ಎಂ. ಮಂಜುನಾಥ್ (ಸಂ), ಟಿ.ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲಾ, ಮಹದೇವಶ್ರೀ ವಿನೋಬನಗರ, ತುಮಕೂರು, ವ. ೨.

೭. ಡಾ. ಹೆಚ್. ತಿಪ್ಪೇರುದ್ರಸ್ವಾಮಿ, ವಚನಕಾರ ಮಹದೇವಯ್ಯನವರು, ಪ್ರಕಟಣೆ, ಮಹದೇವಶ್ರೀ ೩ನೇ ಅಡ್ಡರಸ್ತೆ, ವಿನೋಬನಗರ, ತುಮಕೂರು.

೮. ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ, ಸಮಗ್ರಕಾವ್ಯ ಮುನ್ನುಡಿ, ಟಿ.ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲಾ, ಮಹದೇವಶ್ರೀ ವಿನೋಬನಗರ, ತುಮಕೂರು, ೧೯೭೮.

೯. ಬಿ. ವೀರಭದ್ರಯ್ಯ, ಟಿ.ಎಂ. ಮಂಜುನಾಥ್ (ಸಂ), ಟಿ.ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲಾ, ಮಹದೇವಶ್ರೀ ವಿನೋಬನಗರ, ತುಮಕೂರು, ವ. ೧೨, ೧೩.

೧೦.

೧೧. ಬಿ. ವೀರಭದ್ರಯ್ಯ, ಟಿ.ಎಂ. ಮಂಜುನಾಥ್ (ಸಂ), ಟಿ.ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲಾ, ಮಹದೇವಶ್ರೀ ವಿನೋಬನಗರ, ತುಮಕೂರು, ವ. ೩೦.

೧೨. ಅದೇ, ವ. ೩೧.    ೧೩. ಅದೇ, ವ. ೩೧.    ೧೪. ಅದೇ, ವ. ೩೮.

೧೫. ಅದೇ, ವ. ೩೩.    ೧೬. ಅದೇ, ವ. ೩೫.    ೧೭. ಅದೇ, ವ. ೨೪, ೨೫.

೧೮. ಅದೇ, ವ. ೨೫.    ೧೯. ಅದೇ, ವ. ೩೬.    ೨೦. ಅದೇ, ವ. ೪೭.

೨೧. ಅದೇ, ವ. ೨೨.    ೨೨. ಅದೇ, ವ. ೩೭.

೨೩. ಡಾ. ಹೆಚ್. ತಿಪ್ಪೇರುದ್ರಸ್ವಾಮಿ.

೨೪. ಬಿ. ವೀರಭದ್ರಯ್ಯ, ಟಿ.ಎಂ. ಮಂಜುನಾಥ್ (ಸಂ), ಟಿ.ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲಾ ಮಹದೇವಶ್ರೀ ವಿನೋಬನಗರ, ತುಮಕೂರು, ವ. ೯.

## ೯. ಮಹದೇವಯ್ಯನವರ ಸಣ್ಣಕತೆಗಳು

೧. ಬಿ. ವೀರಭದ್ರಯ್ಯ, ಎಸ್. ವಿದ್ಯಾಶಂಕರ (ಸಂ), ಗುಪ್ತಗಂಗಾ ಸ್ಮರಣ ಸಂಪುಟ ಟಿ.ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲಾ, ಮಹದೇವಶ್ರೀ ವಿನೋಬನಗರ, ತುಮಕೂರು, ಪು. ೧೯೨.

೨. ಅದೇ, ಪು. ೧೯೨    ೩. ಅದೇ, ಪು. ೧೯೨.    ೪. ಅದೇ, ಪು. ೧೯೩.

೫. ಅದೇ, ಪು. ೧೯೬.    ೬. ಅದೇ, ಪು. ೧೯೬.

# ಗ್ರಂಥಸೂಚಿ


| | | |
|---|---|---|
| ಬಿ. ವೀರಭದ್ರಯ್ಯ, | : | ಗುಪ್ತಗಂಗಾ, ಟಿ.ಎನ್. ಮಹದೇವಯ್ಯ ಸ್ಮಾರಕ ಗ್ರಂಥಮಾಲಾ, |
| ಎಸ್. ವಿದ್ಯಾಶಂಕರ (ಸಂ) | | ೧೭, ೪ನೇ ಅಡ್ಡರಸ್ತೆ ವಿನೋಬನಗರ-ತುಮಕೂರು, ೧೯೭೮ |
| ಟಿ.ಎನ್. ಮಹದೇವಯ್ಯ | : | ಒಂಬತ್ತು ಏಕಾಂಕ ನಾಟಕಗಳು, ಟಿ.ಎನ್. ಮಹದೇವಯ್ಯ ಸ್ಮಾರಕ ಗ್ರಂಥಮಾಲಾ, ೧೭, ೪ನೇ ಅಡ್ಡರಸ್ತೆ, ವಿನೋಬನಗರ -ತುಮಕೂರು, ೧೯೯೫ |
| ಪ್ರಕಾಶ್.ಜಿ. | : | ನಂದ ಕಿಶೋರ, ವರ್ಷಾ ಪ್ರಕಾಶನ "ವರ್ಷಿಣಿ" ಬನಶಂಕರಿ ಮುಖ್ಯರಸ್ತೆ, ಶಾಂತಿನಗರ, ತುಮಕೂರು, ೧೯೯೪ |
| ಪ್ರೊ. ಅ.ರಾ. ಮಿತ್ರ (ಸಂ.) | : | ಟಿ.ಎನ್. ಮಹದೇವಯ್ಯನವರ ಆಯ್ದ ಕವಿತೆಗಳು, ಟಿ.ಎನ್.ಎಂ. ಸ್ಮಾರಕ ಗ್ರಂಥ ಮಾಲೆ 'ಮಹದೇವಶ್ರೀ' ವಿನೋಬನಗರ-ತುಮಕೂರು, ೨೦೦೩ |
| ಟಿ.ಎನ್. ಮಹದೇವಯ್ಯ | : | ಕಡಲಿನ ಸೇಡು ಟಿ.ಎನ್.ಎಂ. ಸ್ಮಾರಕ ಗ್ರಂಥ ಮಾಲೆ 'ಮಹದೇವಶ್ರೀ' ವಿನೋಬನಗರ-ತುಮಕೂರು, ೨೦೦೩ |
| ಟಿ.ಎನ್. ಮಹದೇವಯ್ಯ | : | ರತ್ನಾಕರವರ್ಣಿಯ ಭರತೇಶ ವೈಭವ- ಒಂದು ವಿಮರ್ಶೆ, ಟಿ.ಎನ್. ಮಹದೇವಯ್ಯ ಸ್ಮಾರಕ ಗ್ರಂಥಮಾಲಾ, ೧೯೭೫ |
| ಟಿ.ಎನ್. ಮಹದೇವಯ್ಯ | : | "ಕಗಾವ ಮಂತ್ರವಾಣಿ", ಟಿ.ಎನ್. ಮಹದೇವಯ್ಯ ಸ್ಮಾರಕ ಗ್ರಂಥಮಾಲಾ, ೧೯೯೩ |

ಟಿ.ಎನ್. ಮಹದೇವಯ್ಯ : ಹಂಪೆಯ ಕನಸು, ಕರ್ಣಾಟಕ ಸಂಘ, ಚಿಕ್ಕನಾಯಕನ ಹಳ್ಳಿ, ೧೯೫೬

ಟಿ.ಎನ್. ಮಹದೇವಯ್ಯ : ಪ್ರೇಮ ಸಮಾಧಿ, ಟಿ.ಎನ್. ಮಹದೇವಯ್ಯ ಸ್ಮಾರಕ ಗ್ರಂಥಮಾಲಾ, ೧೯೯೪

ಟಿ.ಎನ್. ಮಹದೇವಯ್ಯ : ವಿಜಯಶ್ರೀ (ಏಕಾಂಕ ನಾಟಕ), ಟಿ.ಎನ್. ಮಹದೇವಯ್ಯ ಸ್ಮಾರಕ ಗ್ರಂಥಮಾಲಾ, ೧೯೯೪

ಟಿ.ಎನ್. ಮಹದೇವಯ್ಯ : ಪೂರ್ಣಿಮಾ ಮತ್ತು ಇತರ ನಾಟಕಗಳು, ಟಿ.ಎನ್. ಮಹದೇವಯ್ಯ ಸ್ಮಾರಕ ಗ್ರಂಥಮಾಲಾ, ೧೯೯೯

ಬಿ. ವೀರಭದ್ರಯ್ಯ (ಸಂ.) : ಶ್ರೀ ಟಿ.ಎನ್. ಮಹದೇವಯ್ಯನವರ ಸಮಗ್ರ ಕಾವ್ಯ, ಟಿ.ಎನ್. ಮಹದೇವಯ್ಯ ಸ್ಮಾರಕ ಗ್ರಂಥಮಾಲಾ, ೧೯೯೯

ಟಿ.ಎನ್. ಮಹದೇವಯ್ಯ : ಶ್ರೀ ಮಹದೇವಿಯಕ್ಕನವರ ಜೀವನ ಚರಿತ್ರೆ, ಟಿ.ಎನ್. ಮಹದೇವಯ್ಯ ಸ್ಮಾರಕ ಗ್ರಂಥಮಾಲಾ, ೧೯೭೪

ಟಿ.ಎನ್. ಮಹದೇವಯ್ಯ : ಈಡಿಪಸ್, ಈಡಿಪಸ್ ಅಂತ್ಯ, ಟಿ.ಎನ್. ಮಹದೇವಯ್ಯ ಸ್ಮಾರಕ ಗ್ರಂಥಮಾಲಾ, ೧೯೯೫

ಡಾ. ಸಾ.ಶಿ. ಮರುಳಯ್ಯ : ಟಿ.ಎನ್. ಮಹದೇವಯ್ಯ, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ತುಮಕೂರು, ೧೯೯೮

ಪ್ರೊ.ಜಿ. ಎಸ್. ಸಿದ್ಧಲಿಂಗಯ್ಯ : ಟಿ.ಎನ್.ಎಂ. ಕವಿತೆಗಳ ಲೋಕದಲ್ಲಿ, ಟಿ.ಎನ್. ಮಹದೇವಯ್ಯ ಸ್ಮಾರಕ ಗ್ರಂಥ ಮಾಲಾ, ೨೦೦೧

ಟಿ.ಎನ್. ಮಹದೇವಯ್ಯ : ಅನುಭವ ಮಂಟಪ, ಶ್ರೀ ಶರಣ ಬಸವೇಶ್ವರ ಪ್ರಕಾಶನ, ಕಾನಾಮಡುವು, ಬಳ್ಳಾರಿ ಜಿಲ್ಲೆ, ೧೯೬೮

ಟಿ.ಎನ್. ಮಹದೇವಯ್ಯ : ಭಾಷ್ಪಾಂಜಲಿ, ಶ್ರೀ ಟಿ.ಎನ್. ಮಹದೇವಯ್ಯನವರ ಸ್ಮಾರಕ ಗ್ರಂಥಮಾಲಾ, ತುಮಕೂರು, ೧೯೯೯

ಟಿ. ಎನ್. ಮಹದೇವಯ್ಯ : ಮಕರಂದಾಜಿ, ಶ್ರೀ ಶಾರದಾವಿಲಾಸ, ಮುದ್ರಣಾಲಯ, ಅರಸೀಕೆರೆ, ೧೯೫೬

ಶ್ರೀ ಶೈಲ ಸೂರ್ಯಸಿಂಹಾಸನಾಧೀಶ್ವರ ಡಾ॥ ಶ್ರೀ ಜ.ಚ.ನಿ. ಸನ್ನಿಧಿ : ಜೀವನ್ಮುಕ್ತೆ ಮುಕ್ತಾಯಕ್ಕ!, "ಮಹದೇವಶ್ರೀ" ವಿನೋಬನಗರ ತುಮಕೂರು.

ಟಿ.ಎನ್. ಮಹದೇವಯ್ಯ : ಅನುಭವ ಮಂಟಪ, ಶ್ರೀ ಟಿ.ಎನ್. ಮಹದೇವಯ್ಯ ಸ್ಮಾರಕ ಗ್ರಂಥಮಾಲಾ, ೧೭, ೪ನೇ ಅಡ್ಡರಸ್ತೆ ವಿನೋಬನಗರ, ತುಮಕೂರು,೧೯೭೩

ಡಾ. ವಿಜಯಾ ಸುಬ್ಬರಾಜ್ : ಪ್ರೇಮ ಸಮಾಧಿ (ಕತೆ ಆಧರಿಸಿ ರಂಗನಾಟಕ), ಶ್ರೀ ಟಿ.ಎನ್. ಮಹದೇವಯ್ಯ ಸ್ಮಾರಕ ಗ್ರಂಥಮಾಲಾ, ೧೭, ೪ನೇ ಅಡ್ಡರಸ್ತೆ, ವಿನೋಬನಗರ, ತುಮಕೂರು, ೨೦೦೧

ವಿದ್ವಾನ್ ತಾ.ವೆಂ ಮುತ್ತಾಚಾರ್ಯ (ಸ್ವರಸಂಯೋಜನೆ) : ವೀಣಾವಿತಾನ (ಟಿ.ಎನ್. ಮಹದೇವಯ್ಯನವರ ಕವನಗಳು), ಶ್ರೀ ಟಿ.ಎನ್. ಮಹದೇವಯ್ಯ ಸ್ಮಾರಕ ಗ್ರಂಥಮಾಲಾ, ೧೭, ೪ನೇ ಅಡ್ಡರಸ್ತೆ ವಿನೋಬನಗರ, ತುಮಕೂರು, ೧೯೯೪

ಟಿ.ಎನ್. ಮಹದೇವಯ್ಯ : ಮಕರಂದಾಜಿ, ಶ್ರೀ ಟಿ.ಎನ್. ಮಹದೇವಯ್ಯ ಸ್ಮಾರಕ ಗ್ರಂಥಮಾಲಾ, ೧೭, ೪ನೇ ಅಡ್ಡರಸ್ತೆ ವಿನೋಬನಗರ, ತುಮಕೂರು, ೧೯೭೯

ಟಿ. ಎನ್. ಮಹದೇವಯ್ಯ : ರುದ್ರಪಶುಪತಿ (ಏಕಾಂಕದೃಶ್ಯ), ಶ್ರೀ ಟಿ.ಎನ್. ಮಹದೇವಯ್ಯ ಸ್ಮಾರಕ ಗ್ರಂಥಮಾಲಾ, ೧೭, ೪ನೇ ಅಡ್ಡರಸ್ತೆ ವಿನೋಬನಗರ, ತುಮಕೂರು,೧೯೭೯

ಡಾ|| ಜಿ.ಎಸ್. ಶಿವರುದ್ರಪ್ಪ : ಸಮಗ್ರ ಗದ್ಯ, ಸಂ.೧, ಪ್ರಿಯದರ್ಶಿನಿ ಪ್ರಕಾಶನ, ಬೆಂಗಳೂರು, ೧೯೯೩

ಎಸ್.ವಿ. ಪರಮೇಶ್ವರಭಟ್ಟ : ಭಾವಗೀತೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ೧೯೯೧

(ಅನು) ಜೆ. ಮಿಡಲ್ಟನ್ ಮರ್ರಿ (ಮೂಲ)ಎಡ್ವರ್ಡ್ ನೊರೋನ : ಶೈಲಿ, ಭಾಗ್ಯವಾನ್ ಪ್ರಕಾಶನ, ಮೈಸೂರು, ೧೯೯೯

ಡಾ.ಬಿ.ಎಸ್. ಸ್ವಾಮಿ : ಬಾನುಲಿ ರೂಪಾಂತರಗಳು, ನಾಟಕಗಳು ಹಾಗೂ ರೂಪಕಗಳು, ನಂ.ವಿ. ೨ನೇ ಅಡ್ಡರಸ್ತೆ, ಮುನೇಶ್ವರ ಬ್ಲಾಕ್, ರಾಜಾಮಹಲ್ ಗುಟ್ಟಹಳ್ಳಿ, ಬೆಂಗಳೂರು-೩, ೨೦೦೭

ಡಾ.ಬಿ.ಎಸ್. ಸ್ವಾಮಿ : ಸಮಗ್ರ ನಾಟಕಗಳು ರೂಪಕಗಳು ಬಾನುಲಿ ರೂಪಾಂತರಗಳು, ನವೀನ ಪ್ರಕಾಶನ, ೨೦೧, ೭ನೇ 'ಎ' ಮುಖ್ಯರಸ್ತೆ, ಹಂಪಿನಗರ, ಬೆಂಗಳೂರು-೫೬೦ ೧೦೪, ೧೯೯೭

ಪ್ರೊ. ಜಿ.ಎಸ್. ಆಮೂರ : ಸಮಾರಾಧನ (ನಾಟ್ಯ ವಿಮರ್ಶೆ), ಪ್ರಿಯದರ್ಶಿನಿ ಪ್ರಕಾಶನ, ೧೩೮ ೭ನೇ 'ಸಿ' ಮೈನ್, ಹಂಪಿನಗರ, ಬೆಂಗಳೂರು-೫೬೦ ೧೦೪, ೨೦೦೭



